॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೧೫

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೧೫




ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949

# ಮುನ್ನುಡಿ

ಈ ಗ್ರಂಥಭಾಗವು ಶ್ರೀಶಿವರಹಸ್ಯದ ಆರನೆಯ ಅಂಶದ ಕೊನೆಯ ಇಪ್ಪತ್ತೈದು ಅಧ್ಯಾಯಗಳನ್ನೊಳಗೊಂಡಿದೆ. ಋಭು ಮಹಾಮುನಿಯು ನಿದಾಘ ಮಹರ್ಷಿಗೆ ಶಿವಮಹಿಮೆಯನ್ನು ವಿವರಿಸುವ ಸಂದರ್ಭದಲ್ಲಿ ಉಪನಿಷತ್ಸಾರವನ್ನೇ ವಿಸ್ತರಿಸಿ ಹೇಳಿದಂತೆ ಇಲ್ಲಿ ಉಕ್ತವಾಗಿದೆ. ಉಪನಿಷತ್ತುಗಳಿಗೆ ವೇದಾಂತವೆಂದು ಹೆಸರು. ವೇದಗಳಲ್ಲಿ ಸಂಹಿತೆ, ಬ್ರಾಹ್ಮಣ, ಆರಣ್ಯಕವೆಂದು ಮೂರು ಭಾಗಗಳಿವೆ. ಪದ್ಯಗದ್ಯರೂಪಗಳಾದ ಮಂತ್ರಭಾಗಕ್ಕೆ ಸಂಹಿತೆಯೆಂದೂ, ಅವುಗಳಿಗೆ ವ್ಯಾಖ್ಯಾನ ರೂಪವಾದ ಗ್ರಂಥಗಳಿಗೆ ಬ್ರಾಹ್ಮಣವೆಂದೂ, ಅರಣ್ಯದಲ್ಲಿರುವ ಋಷಿಗಳು ನಿಯಮ ಪೂರ್ವಕವಾಗಿ ರಹಸ್ಯದಿಂದ ಕಲಿಯುತ್ತಿದ್ದ ಭಾಗಕ್ಕೆ ಆರಣ್ಯಕವೆಂದೂ ವ್ಯವಹಾರವಿದೆ. ಉಪನಿಷತ್ತುಗಳು ಈ ಸಂಹಿತಾ, ಬ್ರಾಹ್ಮಣ, ಆರಣ್ಯಕಗಳೆಂಬ ಮೂರು ಭಾಗಗಳಲ್ಲಿಯೂ ಇವೆ. ಇವೆಲ್ಲಕ್ಕೂ ವೇದಾಂತವೆಂದೇ ಹೆಸರು. ಈಶಾವಾಸ್ಯೋಪನಿಷತ್ತೆಂಬ ಒಂದು ಉಪನಿಷದ್ಭಾಗವು ಶುಕ್ಲಯಜುಸ್ಸಂಹಿತೆಯ ಕೊನೆಯ ಭಾಗದಲ್ಲಿರುವುದರಿಂದ, ಉಪನಿಷತ್ತುಗಳಿಗೆ ವೇದಾಂತವೆಂಬ ಹೆಸರು ಬರಲು ಇದೇ ಮುಖ್ಯ ನಿದರ್ಶನವೆಂದು ಹೇಳಬಹುದು. ಇಲ್ಲಿ ಅಂತ ಎಂಬ ಪದಕ್ಕೆ ನಿರ್ಣಯವೆಂದರ್ಥ. ದೃಷ್ಟಾಂತ, ಸಿದ್ಧಾಂತ, ವೇದಾಂತ, ಮುಂತಾದ ಪದಗಳಲ್ಲಿ ಅಂತಪದಕ್ಕೆ ನಿರ್ಣಯವೆಂದೇ ಅರ್ಥವಾಗುವುದು. ನೋಡಿ ತಿಳಿದು ಬಂದ ನಿರ್ಣಯಕ್ಕೆ ದೃಷ್ಟಾಂತವೆಂದೂ, ಯುಕ್ತಿಯಿಂದ ಸಾಧಿತವಾದ ನಿರ್ಣಯಕ್ಕೆ ಸಿದ್ಧಾಂತವೆಂದೂ, ಅನಾದಿಪರಂಪರೆಯಾಗಿ ಬಂದ ಶ್ರುತಿನಿರ್ಣಯಕ್ಕೆ ವೇದಾಂತವೆಂದೂ ಹೇಳಬಹುದು. ಈ ಉಪನಿಷತ್ತುಗಳ ಅರ್ಥವನ್ನೆಲ್ಲಾ ಪರಾಮರ್ಶಮಾಡಿ ಜೈಮಿನಿ ಋಷಿಗಳು ಮತ್ತು ಬಾದರಾಯಣಾಚಾರ್ಯರು (ವ್ಯಾಸಮಹರ್ಷಿಗಳು) ಸೂತ್ರಗಳನ್ನು ರಚಿಸಿದರು. ಅಲ್ಪಾಕ್ಷರಗಳಿಂದಲೂ, ಬಹ್ವರ್ಥದಿಂದಲೂ ಕೂಡಿರುವ ಆ ಸೂತ್ರಗಳಿಗೆ ವ್ಯಾಖ್ಯಾನ ಮಾಲೆಗಳೇ ಬೇಕಾದುವು. ಆ ಮಹಾನುಭಾವರ ಅಭಿಪ್ರಾಯಗಳು ಸೂತ್ರರೂಪದಿಂದಿದ್ದು ಜನಸಾಮಾನ್ಯಕ್ಕೂ ಅರ್ಥವಾಗಲಾರದೆಂದು ಅನೇಕ ಮಹಾತ್ಮರು ಭಾಷ್ಯಗಳೆಂಬ ಹೆಸರಿನಿಂದ ದೊಡ್ಡದೊಡ್ಡ ಗ್ರಂಥಗಳನ್ನೇ ರಚಿಸಿದರು. ಜೈಮಿನಿ ಸೂತ್ರಕ್ಕೆ ಪೂರ್ವಮೀಮಾಂಸೆಯೆಂದೂ, ಬಾದರಾಯಣಸೂತ್ರಕ್ಕೆ ಉತ್ತರಮೀಮಾಂಸೆಯೆಂದೂ ಈಗ ವ್ಯವಹಾರವಿದೆ. ವೇದಾರ್ಥವಿಚಾರ ಶಾಸ್ತ್ರವೇ ಮೀಮಾಂಸೆ.

ಈ ಭಾಗದಲ್ಲಿ ವರ್ಣಿತವಾಗಿರುವ ವೇದಾಂತ ವಿಚಾರವನ್ನು ಕೂಲಂಕಷವಾಗಿ ನೋಡಿದರೆ, ಅದ್ವೈತದರ್ಶನವಿವರಣೆಯೇ ಈ ಗ್ರಂಥಕಾರರ ಮುಖ್ಯ ಗುರಿ ಎಂದು ಹೇಳುವಂತಿದೆ. ಬಾದರಾಯಣ ಸೂತ್ರಗಳಿಗೆ ಭಾಷ್ಯ ಬರೆದವರಲ್ಲಿ ಶ್ರೀಮಚ್ಛಂಕರಾಚಾರ್ಯರೇ ಇಂದಿನ ಅದ್ವೈತಿಗಳಿಗೆ ಪೂಜ್ಯ ಗುರುವರ್ಯರಾಗಿರುವರು. ಅವರಿಗಿಂತ ಹಿಂದೆ ಎಷ್ಟೋ ಮಹಾನುಭಾವರು ಈ ಅದ್ವೈತದರ್ಶನ ವಿಷಯವಾಗಿ ಗ್ರಂಥಗಳನ್ನು ರಚಿಸಿದ್ದರೂ, ಈಗ ಅವೆಲ್ಲವೂ ಶಿಥಿಲವಾಗಿ, ಶ್ರೀ ಶಂಕರಭಾಷ್ಯವೊಂದೇ ಟೀಕಾಟಿಪ್ಪಣಿಗಳಿಂದ ಅಭಿವೃದ್ಧಿಯಾಗಿ ಪ್ರಾಚೀನ ದರ್ಶನವೆನಿಸಿಕೊಂಡಿದೆ. ಇದರಲ್ಲಿ ಮನುಷ್ಯ ಜೀವಮಾನದಲ್ಲಿ ಕಂಡುಬರುವಂತೆ ವ್ಯವಹಾರಾವಸ್ಥಾ, ವಿಚಾರಾವಸ್ಥಾ, ವಿಜ್ಞಾನಾವಸ್ಥಾ ಎಂಬ ಅವಸ್ಥಾಭೇದಗಳಿಂದ ಮುಕ್ತನಾಗುವವನು ಬೇರೆಬೇರೆ ಭಾವಗಳಲ್ಲಿ ಅರ್ಹತೆ ಪಡೆಯುವನು. ಪ್ರತಿ ಮನುಷ್ಯನೂ ತನ್ನ ನಿತ್ಯ ಜೀವನದಲ್ಲಿ ಜಾಗ್ರತ್ (ಎಚ್ಚರಿಕೆಯಿಂದಿರುವುದು) ಸ್ವಪ್ನ (ನಿದ್ದೆಯಲ್ಲಿ ಜಗತ್ತನ್ನು ಕಾಣುವುದು) ಸುಷುಪ್ತಿ (ಗಾಢನಿದ್ರಾವಸ್ಥೆ)ಗಳೆಂಬ ಮೂರು ಅವಸ್ಥೆಗಳನ್ನು ಕಾಣುವಂತೆ, ಮುಮುಕ್ಷುವು ಹಿಂದೆ ಹೇಳಿದ ವ್ಯವಹಾರ, ವಿಚಾರ, ವಿಜ್ಞಾನ ಈ ಮೂರು ಅಂತಸ್ತುಗಳನ್ನು ಪಡೆಯುವನು. ಮೊದಲನೆಯದಾದ ವ್ಯವಹಾರ ಮಾರ್ಗದಲ್ಲಿ ಕಾರ್ಯಕಾರಣಭಾವ, ಪುಣ್ಯ, ಪಾಪ, ಸ್ವರ್ಗ, ನರಕ, ಭ್ರಮಪ್ರಮಾದಿಗಳು, ಸುಖ ದುಃಖಗಳು, ಗುರುಶಿಷ್ಯಭಾವ, ಬಂಧಮೋಕ್ಷಗಳು ಇವೆಲ್ಲವೂ ತೋರಿಬರುತ್ತವೆ. ಈ ಮಾರ್ಗದಲ್ಲಿದ್ದು ಚಿತ್ತಶುದ್ಧಿ, ವೈರಾಗ್ಯ, ವಿವೇಕ ಮೊದಲಾದ ಗುಣಗಳನ್ನು ಸಂಪಾದಿಸಿಕೊಂಡರೆ ಎರಡನೆಯದಾದ ವಿಚಾರಾವಸ್ಥೆಗೆ ಯೋಗ್ಯನಾಗುತ್ತಾನೆ. ಆ ಮಾರ್ಗದಲ್ಲಿ ಮೇಲೆ ಹೇಳಿದ ಕಾರ್ಯಕಾರಣಭಾವಾದಿಗಳೆಲ್ಲವನ್ನೂ, ಮಿಥ್ಯೆ, ಅಸತ್ಯ, ಅನೃತ, ಮಾಯೆ, ನಶ್ವರ ಎಂದು ತಿಳಿಯುವನು. ಕನಸಿನಲ್ಲಿ ಕಂಡ ವಸ್ತುಗಳಂತೆ ಪ್ರಪಂಚವೇ ನಶ್ವರವಾದದ್ದೆಂದು ತಿಳಿಯುವ ಅಂತಸ್ತೇ ಆ ವಿಚಾರಾವಸ್ಥೆ. ಆ ಮಾರ್ಗದಲ್ಲಿ ಬಹುಕಾಲ ಪರಿಶ್ರಮಪಟ್ಟವರಿಗೆ ಮೂರನೆಯ ಮೆಟ್ಟಲೆನಿಸಿದ ವಿಜ್ಞಾನಾವಸ್ಥೆಯು ಲಭಿಸುವುದು ಆ ಅವಸ್ಥೆಯಲ್ಲಿ ಆತ್ಮವ್ಯತಿರಿಕ್ತವಾದ ಸರ್ವವೂ ನಿವೃತ್ತಿಯಾಗಿ ಆತ್ಮಾನುಭವಮಾತ್ರವುಳಿಯುವುದು. ಗಾಢನಿದ್ರಾಕಾಲದಲ್ಲಿ ಜಾಗ್ರತ್ತಿನ ಮತ್ತು ಸ್ವಪ್ನದ ಯಾವ ಪ್ರಪಂಚಾನುಭವವೂ ಇಲ್ಲದೆ, ಕೇವಲ ಸುಖಾನುಭವ ಮಾತ್ರ ಹೇಗೆ ತೋರಿಬರುವುದೋ, ಅದರಂತೆ ಈ ವಿಜ್ಞಾನಾವಸ್ಥೆಯಲ್ಲಿ ಬ್ರಹ್ಮಾವಸಾನ ಪ್ರತಿಷೇಧವೆಂದರೆ ಬ್ರಹ್ಮನಲ್ಲಿಯೇ ಸಕಲ ಪ್ರಪಂಚವೂ ಲೀನವಾಗುವುದೆಂಬ ಆತ್ಮಾನುಭವವು ಲಭಿಸಿ, ಸರ್ವದುಃಖನಿವೃತ್ತಿಯಾಗುವುದು.

ಆ ಮಾರ್ಗವನ್ನೇ ಜೀವನ್ಮುಕ್ತಿಮಾರ್ಗ ಅಥವಾ ಪರಮಾರ್ಥದಶೆಯೆಂದು ಹೇಳುವರು. ಅದ್ವೈತದರ್ಶನದಲ್ಲಿ ಜೀವಾತ್ಮ ಪರಮಾತ್ಮನೆಂಬ ವಸ್ತುಗಳನ್ನು ವಿಚಾರಿಸಿದರೆ, ಪರಮಾರ್ಥತಃ ಪರಮಾತ್ಮನೇ ಜೀವಾತ್ಮನಾಗುವನು; ಅವನೇ ಮೋಕ್ಷದಲ್ಲಿ ಪರಮಾತ್ಮನೆನಿಸುವನು. ನದಿಗಳು ಸಮುದ್ರದಲ್ಲಿ ಸೇರುವಂತೆ, ಉಪ್ಪು ನೀರಿನಲ್ಲಿ ಲೀನವಾಗುವಂತೆ, ಜೀವನು ಮೋಕ್ಷಕಾಲದಲ್ಲಿ ಪರಮಾತ್ಮನಾಗುವನು. ಒಂದಾಗಿ ರುವ ವಸ್ತುವು ಯಾವುದೋ ದೋಷದಿಂದ ಎರಡಾಗಿ ಕಾಣುವುದು. ದೋಷ ಹೋದರೆ ಒಂದೇ ವಸ್ತುವು ಗೋಚರಿಸುವುದು ಎಂಬುದೇ ಶಾಂಕರರ ಅಭಿಪ್ರಾಯ. ಇದನ್ನು ನಾವು ಈ ಗ್ರಂಥಭಾಗದಲ್ಲಿ ಬಹಳ ವಿಸ್ತಾರವಾಗಿ ನೋಡಬಹುದು.

ಮಹರ್ಷಿಪ್ರೋಕ್ತಗಳಾದ ಗ್ರಂಥರತ್ನಗಳು ರಾಜರ್ಷಿಗಳಿಂದ ಪ್ರಕಾಶಿತವಾಗುವುದು ಸಹಜವೇ ಸರಿ; ಎಂಬಂತೆ ನಮ್ಮನ್ನಾಳುತ್ತಿರುವ ಮಹಾಸ್ವಾಮಿಗಳಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುಗಳವರು ಈ ವಿಧವಾದ ಅನೇಕ ಗ್ರಂಥಗಳ ಪ್ರಕಾಶಕ್ಕೆ ಸರ್ವತೋಮುಖವಾದ ಪ್ರೋತ್ಸಾಹವಿತ್ತಿರುವರು. ಇಂತಹ ಆದರ್ಶಪ್ರಭುವರ್ಯರೂ ಅವರ ಕುಟುಂಬವರ್ಗವೂ ಪರಶಿವನ ಅನುಗ್ರಹದಿಂದ ಚಿರಕಾಲ ಸುಖಶಾಂತ್ಯಾದಿಗಳನ್ನು ಪಡೆದು ರಂಜಿಸಲಿ ಎಂದು ಸರ್ವೇಶ್ವರನನ್ನು ನಾನು ಪ್ರಾರ್ಥಿಸುತ್ತೇನೆ.

ಶ್ರೀ ವಿರೋಧಿ ಸಂವತ್ಸರದ
ಚೈತ್ರ ಶುದ್ಧ ಪ್ರತಿಪತ್
ಬುಧವಾರ
ತಾ॥ 30—3—1949.

ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದಲ್ಲಿ ಶಂಕರನಾಮಕ ಆರನೆಯ ಅಂಶದ ವಿಷಯಾನುಕ್ರಮಣಿಕಾ

ಅಧ್ಯಾಯಗಳು ೨೬—೫೦

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಷಡ್ತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ಸಚ್ಚಿತ್ಪರಾನಂದಂ ಸ್ವಭಾವಂ ಸರ್ವದಾ ಸುಖಂ ।
ಸರ್ವವೇದಪುರಾಣಾನಾಂ ಸಾರಾತ್ಸಾರತರಂ ಸ್ವಯಂ ॥೧॥

ನ ಭೇದಂ ಚ ದ್ವಯಂ ದ್ವಂದ್ವಂ ನ ಭೇದಂ ಭೇದವರ್ಜಿತಃ ।
ಇದಮೇವ ಪರಂ ಬ್ರಹ್ಮ ಜ್ಞಾನಾತ್ರಯಮನಾಮಯಂ ॥೨॥

---

## ಇಪ್ಪತ್ತಾರನೆಯ ಅಧ್ಯಾಯವು

ಋಭುಮಹಾಮುನಿಯು ನಿದಾಘಮಹರ್ಷಿಗೆ ಬ್ರಹ್ಮಜ್ಞಾನಸ್ವರೂಪವನ್ನು ಬೋಧಿಸುತ್ತಾ ಹೀಗೆಂದನು. ಎಲೈ ನಿದಾಘಮುನಿಯೇ, ಪರಮಾನಂದಸ್ವರೂಪವೆನಿಸಿ ಯಾವಾಗಲೂ ಸುಖರೂಪವಾಗಿರುವ ಬ್ರಹ್ಮಸ್ವರೂಪವನ್ನು ಹೇಳುವೆನು ಕೇಳು. ಈ ವಿಷಯವು ವೇದಪುರಾಣಗಳಲ್ಲಿ ಅತಿ ಮುಖ್ಯವಾದುದು. ಇದೇ ನಿಜವಾದ ಪುರಾಣೇತಿಹಾಸಗಳ ಸಾರ. ॥೧॥

ವಸ್ತುತಃ ಪರಬ್ರಹ್ಮ, ಜೀವಾತ್ಮ ಇವರಿಗೆ ಯಾವ ಭೇದವೂ ಇಲ್ಲ. ದ್ವಿತ್ವವೂ ಇಲ್ಲ. ಜೋಡಿಯೆಂಬುದೂ ಇಲ್ಲ. ಎಲ್ಲವೂ ಒಂದೇ. ಈ ಜಗತ್ತೆಲ್ಲ ಜ್ಞಾನರೂಪವಾದ ಪರಬ್ರಹ್ಮವಸ್ತುವೇ. ॥೨॥

ನ ಕ್ವಚಿನ್ನಾಂತರಂ ನಾಹಂ ನಾಕ್ಷರಂ ನ ಪರಾಪರಂ ।
ಇದಮೇವ ಪರಂ ಬ್ರಹ್ಮ ಜ್ಞಾನಾಶ್ರಯಮನಾಮಯಂ ॥೩॥

ನ ಬಹಿರ್ನಾಂತರಂ ನಾಹಂ ನ ಸಂಕಲ್ಪೋ ನ ವಿಗ್ರಹಃ ।
ಇದಮೇವ ಪರಂ ಬ್ರಹ್ಮ ಜ್ಞಾನಾಶ್ರಯಮನಾಮಯಂ ॥೪॥

ನ ಸತ್ಯಂ ಚ ಪರಿತ್ಯಜ್ಯ ನ ವಾರ್ತಾ ನಾರ್ಥದೂಷಣಂ ।
ಇದಮೇವ ಪರಂ ಬ್ರಹ್ಮ ಜ್ಞಾನಾಶ್ರಯಮನಾಮಯಂ ॥೫॥

ನ ಗುಣೋ ಗುಣಿವಾಕ್ಯಂ ನ ನ ಮನೋವೃತ್ತಿನಿಶ್ಚಯಃ ।
ನ ಜಪಂ ನ ಪರಿಚ್ಛಿನ್ನಂ ನ ವ್ಯಾಪಕಮಸತ್ಕಲಃ ॥೬॥

ನ ಗುರುರ್ನ ಚ ಶಿಷ್ಯೋ ವಾ ನಸ್ಥಿರಂ ನಾಶುಭಾಶುಭೇ ।
ನೈಕರೂಪಂ ನಾನ್ಯರೂಪಂ ನ ಮೋಕ್ಷೋ ನ ಚ ಬಂಧಕಃ ॥೭॥

---

ಎಲ್ಲೆಲ್ಲೂ ಭೇದವೆಂಬುದೇ ಇಲ್ಲ. ಎಲ್ಲೆಲ್ಲೂ ಪರಾಪರವಸ್ತುವು ಇಲ್ಲವೆಂಬುದಿಲ್ಲ. ಆ ಪರಾಪರವಸ್ತುವೇ ಸರ್ವವ್ಯಾಪಿಯು, ಎಲ್ಲವೂ ಜ್ಞಾನಾಶ್ರಯವಾದುದು. ಪರಬ್ರಹ್ಮವಸ್ತುವಿಗೆ ಎಂದೂ ನಾಶವಿಲ್ಲ. ॥೩॥

ಪರಬ್ರಹ್ಮವಸ್ತುವಿನ ಹೊರತಾಗಿ ಬಾಹ್ಯವೂ ಇಲ್ಲ. ಅಂತರವೂ ಇಲ್ಲ. ನಾನೂ ಇಲ್ಲ. ಸಂಕಲ್ಪವೂ ಇಲ್ಲ. ಶರೀರವೂ ಇಲ್ಲ. ಎಲ್ಲವೂ ಆ ಪರಾಪರವಸ್ತುವೇ. ॥೪॥

ಆ ಪರಮಾತ್ಮವಸ್ತುವಿನ ಹೊರತಾಗಿ ಸತ್ಯವೂ ಇಲ್ಲ. ಯಾವ ವಾರ್ತೆಯೂ ಇಲ್ಲ. ಅರ್ಥದೋಷಗಳೂ ಇಲ್ಲ. ಎಲ್ಲವೂ ಆ ಪರಮಾತ್ಮವಸ್ತುವೇ. ॥೫॥

ಆ ಪರಮಾತ್ಮವಸ್ತುವಿನ ಹೊರತಾಗಿ ಯಾವ ಗುಣವೂ ಇಲ್ಲ. ಗುಣವಂತವಸ್ತುವಿಲ್ಲ. ವಾಕ್ಯವಿಲ್ಲ. ಮನಸ್ಸಿಲ್ಲ. ಮನೋವೃತ್ತಿಗಳೂ ಕಾಣುವುದಿಲ್ಲ. ಜಪವಿಲ್ಲ. ಸಂಕೋಚವಿಲ್ಲ. ವ್ಯಾಪಕವಸ್ತುವಿಲ್ಲ. ಅಸತ್ಯವಿಲ್ಲ. ಕಲೆಗಳಿಲ್ಲ. ॥೬॥

ಗುರುವೂ ಇಲ್ಲ. ಶಿಷ್ಯನೂ ಇಲ್ಲ. ಸ್ಥಿರವೆನ್ನುವ ವಸ್ತುವೂ ಇಲ್ಲ. ಶುಭಾಶುಭಗಳಿಲ್ಲ. ಏಕರೂಪತೆಯಿಲ್ಲ. ಭಿನ್ನರೂಪವಿಲ್ಲ. ಮೋಕ್ಷವಿಲ್ಲ. ಬಂಧವೂ ಇಲ್ಲ. ॥೭॥

ತ್ವಂ ಪದಾರ್ಥಸ್ತತ್ಪದಂ ವಾ ನೇಂದ್ರಿಯಂ ವಿಷಯಾದಿಕಂ ।
ನ ಸಂಶಯಂ ನ ತುಚ್ಛಂ ವಾ ನ ನಿಶ್ಚಯಂ ನ ವಾಕೃತಂ ॥೮॥

ನ ಶಾಂತಿರೂಪಮುದ್ವೈತಂ ನ ಚೋರ್ಧ್ವಂ ನ ಚ ನೀಚಕಂ ।
ನ ಲಕ್ಷಣಂ ನ ದುಃಖಾಂಗಂ ನ ಸುಖಂ ನ ಚ ಚಂಚಲಂ ॥೯॥

ನ ಶರೀರಂ ನ ಲಿಂಗಂ ಚ ನ ಕಾರಣಮಕಾರಣಂ ।
ನ ದುಃಖಂ ನಾಂತಿಕಂ ನಾಹಂ ನ ಗೂಢಂ ನ ಪರಂ ಪದಂ ॥೧೦॥

ನ ಸಚ್ಚಿತ್ತಂ ಚ ನಾಗಾಮಿ ನ ಸತ್ಯಂ ಚ ತ್ವಮೂಹಕಂ ।
ನಾಜ್ಞಾನಂ ನ ಚ ವಿಜ್ಞಾನಂ ನ ಮೂಢೋ ನ ವಿವೇಕವಾನ್ ॥೧೧॥

ನ ನೀಚಂ ನರಕಂ ನಾಂತಂ ನ ಮುಕ್ತಿರ್ನ ಚ ಪಾವನಂ ।
ನ ತೃಷ್ಣಾ ನ ಚ ವಿದ್ಯಾತ್ವಂ ನಾಹಂ ತತ್ವಂ ನ ದೇವತಾ ॥೧೨॥

---

ನೀನು ಎಂಬ ಪದಾರ್ಥವೂ ಇಲ್ಲ. ಅದು ಎಂಬ ಪದಾರ್ಥವೂ ಇಲ್ಲ. ಇಂದ್ರಿಯಗಳೂ ಅಲ್ಲ. ವಿಷಯಗಳೂ ಇಲ್ಲ. ಸಂಶಯವೂ ಇಲ್ಲ. ನಿಶ್ಚಯವೂ ಇಲ್ಲ. ಅಸತ್ಯವು ಇಲ್ಲ. ಸತ್ಯವೂ ಇಲ್ಲ. ಅಕಾರ್ಯವೂ ಇಲ್ಲ. ಕಾರ್ಯವೂ ಇಲ್ಲ. ॥೮॥

ಶಾಂತಿಯೂ ಇಲ್ಲ. ಅಭೇದವೂ ಇಲ್ಲ. ಶ್ರೇಷ್ಠವೂ ಇಲ್ಲ. ಕನಿಷ್ಠವೂ ಇಲ್ಲ. ಲಕ್ಷಣವೂ ಇಲ್ಲ. ದುಃಖವೂ ಇಲ್ಲ. ಸುಖವೂ ಇಲ್ಲ. ಚಾಂಚಲ್ಯವೂ ಇಲ್ಲ. ॥೯॥

ಲಿಂಗಶರೀರ ಸ್ಥೂಲಶರೀರ ಸೂಕ್ಷ್ಮಶರೀರಗಳೂ ಇಲ್ಲ. ಕಾರಣಕಾರ್ಯಗಳೂ ಇಲ್ಲ. ದುಃಖವೂ ಇಲ್ಲ. ಮರಣವು ಇಲ್ಲ. ರಹಸ್ಯವು ಇಲ್ಲ. ಪರಮಪದವು ಇಲ್ಲ.॥೧೦॥

ಚಿತ್ತವು ಇಲ್ಲ, ಭವಿಷ್ಯವು ಇಲ್ಲ, ಸತ್ಯವೂ ಇಲ್ಲ. ನೀನು ಎನ್ನುವುದಿಲ್ಲ, ಅಜ್ಞಾನವೂ ಇಲ್ಲ, ವಿಜ್ಞಾನವೂ ಇಲ್ಲ. ಮೂಢನೆಂಬುವುದೂ ಇಲ್ಲ, ವಿವೇಕಿಯು ಇಲ್ಲ, ವಿವೇಕವೂ ತೋರುವುದಿಲ್ಲ. ॥೧೧॥

ಪರಮಾತ್ಮನ ಹೊರತಾಗಿ ನೀಚತೆಯೆಂಬುದಿಲ್ಲ, ನರಕವೆಂಬುದಿಲ್ಲ, ಮರಣವೆಂಬುದಿಲ್ಲ, ಮುಕ್ತಿಯೆಂಬುದಿಲ್ಲ, ಪವಿತ್ರತೆಯೆಂಬುದಿಲ್ಲ, ಆಸೆಯೆಂಬುದಿಲ್ಲ,

ನ ಶುಭಾಶುಭಸಂಕೇತಂ ನ ಮೃತ್ಯುರ್ನ ಚ ಜೀವನಂ ।
ನ ತೃಪ್ತಿರ್ನ ಚ ಭೋಜ್ಯಂ ವಾ ನಖಂಡೈಕರಸೋದ್ವಯಂ ॥೧೩॥

ನ ಸಂಕಲ್ಪಂ ನ ಪ್ರಪಂಚಂ ಚ ನ ಜಾಗರಣರಾಜಕಂ ।
ನ ಕಿಂಚಿತ್ಸಮತಾದೋಷಃ ನ ತುರ್ಯಗಣನಾಭ್ರಮಃ ॥೧೪॥

ನ ಸರ್ವಂ ನಮಲಂ ನೇಷ್ಟಂ ನನೀತಿರ್ನ ಚ ಪೂಜನಂ ।
ನ ಪ್ರಪಂಚಂ ನ ಬಹುನಾ ನಾನ್ಯಭಾಷಣಸಂದಮಃ ॥೧೫॥

ನ ಸತ್ಸಂಗಮಸತ್ಸಂಗಃ ನ ಬ್ರಹ್ಮ ನ ವಿಚಾರಣಂ ।
ನಾಭ್ಯಾಸಂ ನ ಚ ವಕ್ತಾ ಚ ನ ಸ್ನಾನಂ ನ ಚ ತೀರ್ಥಕಂ ॥೧೬॥

ನ ಪುಣ್ಯಂ ನ ಚ ವಾ ಪಾಪಂ ನ ಕ್ರಿಯಾ ದೋಷಕಾರಣಂ ।
ನ ಚಾಧ್ಯಾತ್ಮಂ ನಾದಿಭೂತಂ ನದೈವತಮಸಂಭವಂ ॥೧೭॥

---

ವಿದ್ಯೆಯಿಲ್ಲ, ನಾನು ಇಲ್ಲ, ನೀನು ಇಲ್ಲ, ದೇವತೆಗಳೆಂಬುವುದೂ ನಿಜವಾಗಿ ಇಲ್ಲ. ॥೧೨॥

ಆ ಪರಮಾತ್ಮವಸ್ತುವಿನ ಹೊರತಾಗಿ ಶುಭಾಶುಭಗಳೆನ್ನುವುದಿಲ್ಲ. ಮರಣವಿಲ್ಲ. ಜೀವನವಿಲ್ಲ. ತೃಪ್ತಿಯಿಲ್ಲ. ಭೋಗವಿಲ್ಲ. ಪರಿಚ್ಛಿನ್ನವಾದ ಭಿನ್ನಭಿನ್ನವಸ್ತುಗಳಿಲ್ಲ. ॥೧೩॥

ಪರಮಾತ್ಮವಸ್ತುವಿನ ಹೊರತಾಗಿ ಸಂಕಲ್ಪವಿಲ್ಲ. ಪ್ರಪಂಚವಿಲ್ಲ. ಜಾಗ್ರದವಸ್ಥೆಯಿಲ್ಲ. ಸಮತೆಯಿಲ್ಲ. ದೋಷವಿಲ್ಲ. ಕೊನೆಯದೆಂಬ ಗಣನೆಯೂ ಇಲ್ಲ.॥೧೪॥

ಪರವಸ್ತುವಿನ ಹೊರತಾಗಿ ಯಾವುದೂ ಇಲ್ಲ. ಕೊಳೆಯಿಲ್ಲ. ಇಷ್ಟವೆಂಬುದಿಲ್ಲ. ನೀತಿಯಿಲ್ಲ. ಪೂಜೆಯಿಲ್ಲ. ಪ್ರಪಂಚವಿಲ್ಲ. ಬಹುತ್ವವಿಲ್ಲ. ಭೇದಸಂಭವವೇ ಇಲ್ಲ. ॥೧೫॥

ಪರಮಾತ್ಮನ ಹೊರತಾಗಿ ಸತ್ಸಹವಾಸವೆನ್ನುವುದಿಲ್ಲ. ಬ್ರಹ್ಮವಸ್ತುವೂ ಇಲ್ಲ. ವಿಚಾರವೂ ಇಲ್ಲ. ಅಧ್ಯಾಸವೂ ಇಲ್ಲ. ವಿಚಾರವೂ ಇಲ್ಲ. ಅಭ್ಯಾಸವು ಇಲ್ಲ. ವಕ್ತೃವು ಇಲ್ಲ. ಸ್ನಾನತೀರ್ಥಗಳು ಇಲ್ಲ. ॥೧೬॥

ಪರಮಾತ್ಮನ ಹೊರತಾಗಿ ಪುಣ್ಯಪಾಪಗಳಿಲ್ಲ. ಕ್ರಿಯೆಗಳಿಲ್ಲ. ದೋಷಗಳಿಲ್ಲ. ಅಧ್ಯಾತ್ಮವಿಲ್ಲ. ಅಧಿದೈವತವಿಲ್ಲ. ಅಧಿಭೂತವಿಲ್ಲ. ಅಸಂಭವವಸ್ತುವೆನ್ನುವುದೂ ಇಲ್ಲ. ॥೧೭॥

ನ ಜನ್ಮಮರಣೇ ಕ್ವಾಪಿ ಜಾಗ್ರತ್ಸ್ವಪ್ನಸುಷುಪ್ತಿಕಂ ।
ನ ಭೂಲೋಕಂ ನ ಪಾತಾಳಂ ನ ಜಯಾಪಜಯಾಜಯೌ ॥೧೮॥

ನ ಹೀನಂ ನ ಚ ವಾ ಭೀತಿರ್ನ ರತಿರ್ನಮೃತಿಸ್ತ್ವರಾ ।
ಅಚಿಂತ್ಯಂ ನಾಪರಾಧ್ಯಾತ್ಮಾ ನಿಗಮಾಗಮವಿಭ್ರಮಃ ॥೧೯॥

ನ ಸಾತ್ವಿಕಂ ರಾಜಸಂ ಚ ನ ತಾಮಸಗುಣಾದಿಕಂ ।
ನ ಶೈವಂ ನ ಚ ವೇದಾಂತಂ ನ ಸ್ವಾದ್ಯಂತಂ ನ ಮಾನಸಂ ॥೨೦॥

ನ ಬಂಧೋ ನ ಚ ಮೋಕ್ಷೋ ವಾ ನ ವಾಕ್ಯಮೈಕ್ಯಲಕ್ಷಣಂ ।
ನ ಸ್ತ್ರೀರೂಪಂ ನ ಪುಂಭಾವಃ ನ ಷಂಡೋ ನ ಸ್ಥಿರಾ ಪದಂ ॥೨೧॥

ನ ಭೂಷಣಂ ನ ದೂಷಣಂ ನ ಸ್ತೋತ್ರಂ ನ ಸ್ತುತಿರ್ನಹಿ ।
ನ ಲೌಕಿಕಂ ವೈದಿಕಂ ವಾ ನ ಶಾಸ್ತ್ರಂ ನ ಚ ಶಾಸನಂ ॥೨೨॥

---

ಪರಮಾತ್ಮನ ಹೊರತಾಗಿ ಜನನಮರಣಗಳಿಲ್ಲ. ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಯಾವ ಅವಸ್ಥೆಗಳೂ ಇಲ್ಲ. ಭೂಲೋಕಪಾತಾಳಗಳಿಲ್ಲ. ಜಯಾಪಜಯಗಳಿಲ್ಲ. ಸಂಧಿಯೂ ಇಲ್ಲ. ॥೧೮॥

ಪರಮಾತ್ಮನ ಹೊರತಾಗಿ ಹೀನತೆಯೆಂಬುದಿಲ್ಲ. ಭಯವಿಲ್ಲ. ಕಾಮಕ್ರೀಡೆಯಿಲ್ಲ. ಮರಣವಿಲ್ಲ. ತ್ವರೆಯಿಲ್ಲ. ಅಚಿಂತ್ಯವಿಲ್ಲ. ಅಪರಾಧಿಯಿಲ್ಲ. ವೇದಶಾಸ್ತ್ರಗಳಿಲ್ಲ. ॥೧೯॥

ಸಾತ್ವಿಕರಾಜಸತಾಮಸಗುಣಗಳೆಂಬುವಿಲ್ಲ. ಶೈವಾದಿಮತಗಳಿಲ್ಲ. ವೇದಾಂತವೆನ್ನುವುದಿಲ್ಲ. ಕಾಯಿಕಮಾನಸಿಕಗಳೆನ್ನುವುದಿಲ್ಲ. ಪರವಸ್ತುವೊಂದೇ ಇರುವುದು. ॥೨೦॥

ಪರಮಾತ್ಮನ ಹೊರತು ಬಂಧಮೋಕ್ಷಗಳಿಲ್ಲ. ವಾಕ್ಯಗಳಿಲ್ಲ. ಐಕ್ಯಲಕ್ಷಣಗಳಿಲ್ಲ. ಸ್ತ್ರೀರೂಪವಿಲ್ಲ. ಪುರುಷರೂಪವಿಲ್ಲ. ನಪುಂಸಕರೂಪವಿಲ್ಲ. ಭೂಮಿಯಿಲ್ಲ. ಯಾವ ಪದವೂ ಇಲ್ಲ. ॥೨೧॥

ಪರಮಾತ್ಮನ ಹೊರತಾಗಿ ಅಲಂಕಾರವಿಲ್ಲ. ದೋಷಗಳಿಲ್ಲ. ಹೊಗಳಿಕೆತೆಗಳಿಕೆಗಳಿಲ್ಲ. ಲೌಕಿಕವೈದಿಕಗಳಿಲ್ಲ. ಶಾಸ್ತ್ರವು ಇಲ್ಲ. ಶಾಸನವು ಇಲ್ಲ. ಯಾವ ಕಟ್ಟುಕಟ್ಟಲೆಗಳೂ ಇಲ್ಲ. ॥೨೨॥

ನ ಪೀನಂ ನ ಕೃಶಂ ನೇದಂ ನ ಮೋದಂ ನ ಪರಂ ಮದಂ ।
ನ ಭಾವನಮಭಾವೋ ವಾ ನ ಕುಲಂ ನಾಮರೂಪಕಂ ॥೨೩॥

ನೋತ್ಕೃಷ್ಟಂ ಚ ನಿಕೃಷ್ಟಂ ಚ ನ ಶ್ರೇಯೋಽಶ್ರೇಯ ಏವ ಹಿ ।
ನಿರ್ಮಲತ್ವಂ ಮಯೋತ್ಸರ್ಗಃ ನ ಜೀವೋ ನ ಮನೋ ದಮಃ॥೨೪॥

ನ ಶಾಂತಿಕಲನಾ ನಾಗಂ ನ ದಾಂತಿರ್ನ ಸಮೋದಯಃ ।
ನ ಕ್ರೀಡಾ ನ ಚ ಭಾವಾಂಗಂ ನ ವಿಕಾರಂ ನ ದೋಷಕಂ ॥೨೫॥

ನ ಯತ್ಕಿಂಚಿನ್ನ ಯತ್ರಾಹಂ ನ ಮಾಯಾಖ್ಯಾನಮಾಯಿಕಾ ।
ಯತ್ಕಿಂಚಿನ್ನ ಚ ಧರ್ಮಾದಿ ನ ಧರ್ಮಪರಿಪೀಡನಂ ॥೨೬॥

ನ ಯೌವನಂ ನ ಬಾಲ್ಯಂ ವಾ ನ ಜರಾಮರಣಾದಿಕಂ ।
ನ ಬಂಧುರ್ನ ಚ ವಾಽಬಂಧುರ್ನ ಮಿತ್ರಂ ನ ಚ ಸೋದರಃ ॥೨೭॥

---

ಸ್ಥೂಲತೆಯಿಲ್ಲ, ಕೃಶತೆಯಿಲ್ಲ, ಸಂತಸವಿಲ್ಲ, ಮದವಿಲ್ಲ, ಭಾವನೆಯಿಲ್ಲ, ಅಭಾವವಿಲ್ಲ. ಕುಲವಿಲ್ಲ, ನಾಮರೂಪಗಳಿಲ್ಲ. ಪರವಸ್ತುವೊಂದೇ ಇರುವುದು. ॥೨೩॥

ಪರವಸ್ತುವಿನ ಹೊರತಾಗಿ ಉತ್ಕೃಷ್ಟವಸ್ತುವಿಲ್ಲ, ನೀಚವಸ್ತುವಿಲ್ಲ. ಶ್ರೇಯಸ್ಸಿಲ್ಲ, ಅಶ್ರೇಯಸ್ಸಿಲ್ಲ, ನಿರ್ಮಲತೆಯಿಲ್ಲ, ಅಪವಿತ್ರತೆಯಿಲ್ಲ, ಜೀವನಿಲ್ಲ, ಮನವಿಲ್ಲ. ಇಂದ್ರಿಯನಿಗ್ರಹವೆಂಬುದಿಲ್ಲ. ॥೨೪॥

ಪರಮಾತ್ಮನ ಹೊರತಾಗಿ ಶಾಂತಿಕಲ್ಪನೆಯಿಲ್ಲ ಅಪರಾಧವಿಲ್ಲ. ನಿರಪರಾಧಿತೆಯಿಲ್ಲ. ದಮನವಿಲ್ಲ. ಸಮತೆಯಿಲ್ಲ. ಕ್ರೀಡೆಯಿಲ್ಲ, ಹಾವಭಾವಗಳಿಲ್ಲ. ವಿಕಾರವಿಲ್ಲ. ದೋಷಗಳಿಲ್ಲ. ॥೨೫॥

ಯತ್ಕಿಂಚಿತ್-ಎನ್ನುವುದೂ ಇಲ್ಲ. ಇಲ್ಲಿ ನಾನು-ಎನ್ನುವುದೂ ಇಲ್ಲ, ಮಾಯೆಯೂ ಇಲ್ಲ. ಧರ್ಮಾದಿಗಳಿಲ್ಲ. ಧರ್ಮಪೀಡೆಯೂ ಇಲ್ಲ, ಧರ್ಮಕ್ಕಾಗಿ ವ್ಯಥೆಪಡುವುದೂ ಇಲ್ಲ. ॥೨೬॥

ಯೌವನವಿಲ್ಲ, ಬಾಲ್ಯವಿಲ್ಲ, ಜರೆಯಿಲ್ಲ, ಮರಣಾದಿಗಳಿಲ್ಲ, ಬಂಧುಗಳಿಲ್ಲ, ಮಿತ್ರರಿಲ್ಲ. ಶತ್ರುಗಳಿಲ್ಲ, ಉದಾಸೀನರಿಲ್ಲ, ಸಹೋದರರಿಲ್ಲ. ಸಂಬಂಧಿಗಳಲ್ಲದವರೂ ಇಲ್ಲ. ಪರಮಾತ್ಮನೋರ್ವನೇ ಇರುವವನು. ॥೨೭॥

ಸರ್ವಂ ನಾಪಿ ನ ಚಾ ಕಿಂಚಿದ್ವಿರಿಂಚೋ ನ ಚ ಕೇಶವಃ ।
ನ ಶಿವೋ ನಾಷ್ಟದಿಕ್ಪಾಲಾ ನ ವಿಶ್ವೋ ನ ಚ ತೈಜಸಃ ॥೨೮॥

ನ ಪ್ರಾಜ್ಞೋ ಹಿ ನ ತುರ್ಯೋ ವಾ ನ ಬ್ರಹ್ಮಕ್ಷತ್ರವಿಟ್ ಪರಃ ।
ಇದಮೇವ ಪರಂ ಬ್ರಹ್ಮ ಜ್ಞಾನಾಮೃತಮನೋಮಯಂ ॥೨೯॥

ನ ಪುನರ್ಭಾವಿ ಪಶ್ಚಾದ್ವಾ ನ ಪುನರ್ಭವಸಂಭವೈಃ ।
ನ ಕಾಲಕಲನಾ ನಾಹಂ ನ ಸಂಭಾಷಣಕಾರಣಂ ॥೩೦॥

ನ ಚೋರ್ಧ್ವಮಂತಃಕರಣಂ ನ ಚ ಚಿನ್ಮಾತ್ರಭಾವನಂ ।
ನ ಬ್ರಹ್ಮಾಹಮಿತಿ ದ್ವೈತಂ ನ ಚಿನ್ಮಾತ್ರಮಿತಿ ದ್ವಯಂ ॥೩೧॥

ನಾನ್ನಕೋಶಂ ನ ಚ ಪ್ರಾಣಂ ನ ಮನೋಮಯಕೋಶಕಂ ।
ನ ವಿಜ್ಞಾನಮಯಃ ಕೋಶಃ ನ ಚಾನಂದಮಯಂ ಪೃಥಕ್ ॥೩೨॥

---

ಎಲ್ಲವೂ-ಎಂಬುದಿಲ್ಲ. ಯತ್ಕಿಂಚಿತ್-ಎಂಬುದಿಲ್ಲ. ಚತುರ್ಮುಖನಿಲ್ಲ. ಹರಿಯು ಇಲ್ಲ. ಶಿವನಿಲ್ಲ. ಎಂಟು ಮಂದಿ ದಿಕ್ಪಾಲಕರು ಇಲ್ಲ. ವಿಶ್ವತೈಜಸರೆಂಬ ಭೇದವು ಪರಮಾತ್ಮನಿಗಿಲ್ಲ. ॥೨೮॥

ಪ್ರಾಜ್ಞನೂ ಇಲ್ಲ, ಈ ಮೂರವಸ್ಥೆಗಳೂ ಇಲ್ಲದವನೆಂಬುದಿಲ್ಲ. ಬ್ರಾಹ್ಮಣ ಕ್ಷತ್ರಿಯ ವೈಶ್ಯರೆನ್ನುವುದಿಲ್ಲ— ಹೀಗೆಲ್ಲಾ ತಿಳಿಯುವುದೇ ನಿಜವಾದ ಬ್ರಹ್ಮಜ್ಞಾನವು. ನಾಶರಹಿತವಾದ ಆತ್ಮವೇ ಜ್ಞಾನಾಮೃತಮನೋಮಯವಾಗಿರುವುದು. ॥೨೯॥

ಪುನಃ ಜನಿಸುವುದೆನ್ನುವುದೂ ಇಲ್ಲ. ಆಮೇಲಾಗುವುದೆನ್ನುವುದೂ ಇಲ್ಲ. ಕಾಲಕಲ್ಪನೆಯೇ ಇಲ್ಲ. ಸಂಭಾಷಣೆಯ ಕಾರಣಗಳೂ ಇಲ್ಲ. ॥೩೦॥

ಮೇಲುಭಾಗವೆಂಬುದಿಲ್ಲ. ಅಂತಃಕರಣವಿಲ್ಲ. ಕೇವಲ ಚೈತನ್ಯಸ್ವರೂಪ ನೆಂಬುದೂ ಇಲ್ಲ. ಬ್ರಹ್ಮನೇ ನಾನು-ಎನ್ನುವುದೂ ಇಲ್ಲ. ದ್ವೈತವೂ ಇಲ್ಲ ದ್ವಿತ್ವವೂ ಇಲ್ಲ. ಭೇದವೂ ಇಲ್ಲ. ॥೩೧॥

ಪರಮಾತ್ಮವಸ್ತುವಿನ ಹೊರತಾಗಿ ಅನ್ನಮಯಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯಗಳೆಂಬ ಐದು ಕೋಶಗಳೂ ಇಲ್ಲ. ॥೩೨॥

ನ ಬೋಧರೂಪಂ ಬೋಧ್ಯಂ ವಾ ಬೋಧಕಂ ವಾತ್ರಯದ್ರುಮಾಃ? ।
ನ ಬಾಧ್ಯಂ ಬಾಧಕಂ ಮಿಥ್ಯಾ ತ್ರಿಪುಟೀಜ್ಞಾನನಿರ್ಣಯಃ ॥೩೩॥

ನ ಪ್ರಮಾತಾ ಪ್ರಮಾಣಂ ವಾ ನ ಪ್ರಮೇಯಂ ಫಲೋದಯಂ ।
ಇದಮೇವ ಪರಂ ಬ್ರಹ್ಮ ಜ್ಞಾನಾಮೃತಮನೋಮಯಂ ॥೩೪॥

ನ ಗುಹ್ಯಂ ನ ಪ್ರಕಾಶಂ ವಾ ನ ಮಹತ್ತ್ವಂ ನ ಚಾಣುತಾ ।
ನ ಪ್ರಪಂಚೋ ವಿದ್ಯಮಾನಂ ನ ಪ್ರಪಂಚಃ ಕದಾಚನ ॥೩೫॥

ನಾಂತಃಕರಣಸಂಸಾರಃ ನ ಮತ್ತೋ ಜಗತಾಂ ಭ್ರಮಃ ।
ನ ಚಿತ್ತರೂಪಸಂಸಾರಃ ಬುದ್ಧಿರೂಪಂ ಪ್ರಪಂಚಕಂ ॥೩೬॥

ನ ಜೀವರೂಪಂ ಸಂಸಾರಂ ವಾಸನಾರೂಪಸಂಸೃತಿಃ ।
ನ ಲಿಂಗದೇಹಸಂಸಾರಂ ನಾಜ್ಞಾನಮಯಸಂಸೃತಿಃ ॥೩೭॥

---

ಬೋಧನೆ, ಬೋಧನಾವಿಷಯ, ಬೋಧಕಗಳೆಂಬ ಮೂರು ಜ್ಞಾನಕಾರಣಗಳು ಇಲ್ಲ. ಬಾಧೆ, ಬಾಧಕ ಮಿಥ್ಯೆಗಳೆಂಬ ಅಸತ್ಯವಸ್ತುಸ್ಥಾಪನಾಕಾರಗಳೂ ಇಲ್ಲ. ಮಿತಿಮಾನಮೇಯಗಳೆಂಬ ಜ್ಞಾನದ ಮೂರಂಶಗಳು ಇಲ್ಲ. ॥೩೩॥

ಪ್ರಮಾಣಿಸುವವನಿಲ್ಲ, ಪ್ರಮಾಣವಿಲ್ಲ, ಪ್ರಮಾಣಿಸಲ್ಪಡುವ ವಸ್ತುವಿಷಯಗಳೂ ಇಲ್ಲ. ಎಲ್ಲವೂ ಪರಮಾತ್ಮವಸ್ತುವೇ. ॥೩೪॥

ಗುಟ್ಟೂ ಇಲ್ಲ. ಪ್ರಕಾಶವಿಲ್ಲ. ಮಹತ್ತ್ವವಿಲ್ಲ, ಅಣುತ್ವವಿಲ್ಲ. ಈಗ ಪ್ರಪಂಚವು ಇಲ್ಲ. ಮುಂದೂ ಇಲ್ಲ. ಹಿಂದೆಯೂ ಇಲ್ಲ. ಪರವಸ್ತುವೊಂದೇ ಇರುವುದು. ॥೩೫॥

ಅಂತಃಕರಣದ ಸಂಸಾರವು ಇಲ್ಲ. ಜಗತ್ತಿನ ಭ್ರಮೆಯು ಇಲ್ಲ. ಚಿತ್ತಸಂಸಾರವು ಇಲ್ಲ. ಬುದ್ಧಿಯ ಪ್ರಪಂಚವು ಇಲ್ಲ. ಪರಮಾತ್ಮನೊಬ್ಬನೇ ಇರುವವನು. ॥೩೬॥

ಜೀವರೂಪವಾದ ಸಂಸಾರವೂ ಇಲ್ಲ. ವಾಸನಾಮಯವಾದ ಸಂಸಾರವೂ ಇಲ್ಲ. ಲಿಂಗದೇಹರೂಪವಾದ ಸಂಸಾರವೂ ಇಲ್ಲ. ಅಜ್ಞಾನರೂಪವಾದ ಸಂಸಾರವೂ ಇಲ್ಲ. ಪರಮಾತ್ಮನೊಬ್ಬನೇ ಇರುವವನು. ॥೩೭॥

ನ ವೇದರೂಪಂ ಸಂಸಾರಂ ನ ಶಾಸ್ತ್ರಾಗಮಸಂಸ್ಕೃತಿಃ ।
ನಾನ್ಯದಸ್ತೀತಿ ಸಂಸಾರಂ ಅನ್ಯದಸ್ತೀತಿ ಭೇದಕಂ ॥೩೮॥

ನ ಭೇದಾಭೇದಕಲನಂ ನ ದೋಷಾದೋಷಕಲ್ಪನಂ ।
ನ ಶಾಂತಾಶಾಂತಸಂಸಾರಂ ನ ಗುಣಾಗುಣಸಂಸ್ಕೃತಿಃ ॥೩೯॥

ನ ಸ್ತ್ರೀಲಿಂಗಂ ನ ಪುಲ್ಲಿಂಗಂ ನ ನಪುಂಸಕಸಂಸ್ಕೃತಿಃ ।
ನ ಸ್ಥಾವರಂ ಜಂಗಮಂ ಚ ನ ದುಃಖಂ ನ ಸುಖಂ ಕ್ವಚಿತ್ ॥೪೦॥

ನ ಶಿಷ್ಟಾಶಿಷ್ಟರೂಪಂ ವಾ ನ ಯೋಗ್ಯಾಯೋಗ್ಯನಿಶ್ಚಯಃ ।
ನ ದ್ವೈತರೂಪವೃತ್ತಿರ್ವಾ ಸಾಕ್ಷಿವೃತ್ತಿತ್ವಲಕ್ಷಣಂ ॥೪೧॥

ಅಖಂಡಾಕಾರವೃತ್ತಿತ್ವಂ ನ ಖಂಡೈಕರಸಂ ಸುಖಂ ।
ದೇಹೋಹಮಿತಿ ಯಾ ವೃತ್ತಿರ್ಬ್ರಹ್ಮಾಹಮಿತಿ ಶಬ್ದಕಂ ॥೪೨॥

---

ವೇದರೂಪವಾದ ಸಂಸಾರವಿಲ್ಲ. ಶಾಸ್ತ್ರಾಗಮರೂಪವಾದ ಸಂಸಾರವೂ ಇಲ್ಲ. ಬೇರೇ ವಸ್ತುವಿಲ್ಲವೆನ್ನುವ ಅಭೇದಸಂಸಾರವು ಇಲ್ಲ. ಬೇರೆವಸ್ತುವಿದೆಯೆನ್ನುವ ಭೇದಸಂಸಾರವೂ ಇಲ್ಲ. ಪರವಸ್ತುವೊಂದೇ ಇರುವುದು. ॥೩೮॥

ಭೇದಾಭೇದರೂಪವಾದ ಪ್ರಪಂಚವೂ ಇಲ್ಲ. ದೋಷಾದೋಷರೂಪವಾದ ಸಂಸಾರವೂ ಇಲ್ಲ. ಗುಣಾಗುಣರೂಪವಾದ ಸಂಸಾರವೂ ಇಲ್ಲ. ಶಾಂತಿ ಅಶಾಂತಿರೂಪವಾದ ಸಂಸಾರವೂ ಇಲ್ಲ. ಪರಮಾತ್ಮನೋರ್ವನೇ ಇರುವವನು. ॥೩೯॥

ಸ್ತ್ರೀಲಿಂಗವು ಇಲ್ಲ. ಪುಲ್ಲಿಂಗವು ಇಲ್ಲ. ನಪುಂಸಕಲಿಂಗವು ಇಲ್ಲ. ಸ್ಥಿರ ವಸ್ತುವು ಇಲ್ಲ. ಪರವಸ್ತುವು ಇಲ್ಲ. ಸುಖವು ಇಲ್ಲ. ದುಃಖವು ಇಲ್ಲ. ॥೪೦॥

ಶಿಷ್ಟನು ಅಶಿಷ್ಟನು ಎಂಬುದಿಲ್ಲ. ಯೋಗ್ಯನು ಆಯೋಗ್ಯನು ಎಂಬುದಿಲ್ಲ. ಭೇದಜ್ಞಾನವು ಇಲ್ಲ. ಸಾಕ್ಷಿವ್ಯವಹಾರವು ಇಲ್ಲ. ॥೪೧॥

ಧಾರಾಕಾರವಾದ ಬ್ರಹ್ಮಜ್ಞಾನವೆಂಬುದಿಲ್ಲ. ಖಂಡಖಂಡವಾದ ವಿಷಯ ಸುಖಾನುಭವವೆಂಬುದಿಲ್ಲ. ದೇಹಾಭಿಮಾನವಿಲ್ಲ. ಬ್ರಹ್ಮನು ನಾನು ಎಂಬುದಿಲ್ಲ. ॥೪೨॥

ನ ಬೋಧರೂಪಂ ಬೋಧ್ಯಂ ವಾ ಬೋಧಕಂ ವಾತ್ರಯದ್ರುಮಾಃ? ।
ನ ಬಾಧ್ಯಂ ಬಾಧಕಂ ಮಿಥ್ಯಾ ತ್ರಿಪುಟೀಜ್ಞಾನನಿರ್ಣಯಃ ॥೩೩॥

ನ ಪ್ರಮಾತಾ ಪ್ರಮಾಣಂ ವಾ ನ ಪ್ರಮೇಯಂ ಫಲೋದಯಂ ।
ಇದಮೇವ ಪರಂ ಬ್ರಹ್ಮ ಜ್ಞಾನಾಮೃತಮನೋಮಯಂ ॥೩೪॥

ನ ಗುಹ್ಯಂ ನ ಪ್ರಕಾಶಂ ವಾ ನ ಮಹತ್ತ್ವಂ ನ ಚಾಣುತಾ ।
ನ ಪ್ರಪಂಚೋ ವಿದ್ಯಮಾನಂ ನ ಪ್ರಪಂಚಃ ಕದಾಚನ ॥೩೫॥

ನಾಂತಃಕರಣಸಂಸಾರಃ ನ ಮತ್ತೋ ಜಗತಾಂ ಭ್ರಮಃ ।
ನ ಚಿತ್ತರೂಪಸಂಸಾರಃ ಬುದ್ಧಿರೂಪಂ ಪ್ರಪಂಚಕಂ ॥೩೬॥

ನ ಜೀವರೂಪಂ ಸಂಸಾರಂ ವಾಸನಾರೂಪಸಂಸ್ಕೃತಿಃ ।
ನ ಲಿಂಗದೇಹಸಂಸಾರಂ ನಾಜ್ಞಾನಮಯಸಂಸ್ಕೃತಿಃ ॥೩೭॥

---

ಬೋಧನೆ, ಬೋಧನಾವಿಷಯ, ಬೋಧಕಗಳೆಂಬ ಮೂರು ಜ್ಞಾನಕಾರಣಗಳು ಇಲ್ಲ. ಬಾಧೆ, ಬಾಧಕ ಮಿಥ್ಯೆಗಳೆಂಬ ಅಸತ್ಯವಸ್ತುಸ್ಥಾಪನಾಕಾರಗಳೂ ಇಲ್ಲ. ಮಿತಿಮಾನಮೇಯಗಳೆಂಬ ಜ್ಞಾನದ ಮೂರಂಶಗಳು ಇಲ್ಲ. ॥೩೩॥

ಪ್ರಮಾಣಿಸುವವನಿಲ್ಲ, ಪ್ರಮಾಣವಿಲ್ಲ, ಪ್ರಮಾಣಿಸಲ್ಪಡುವ ವಸ್ತುವಿಷಯಗಳೂ ಇಲ್ಲ. ಎಲ್ಲವೂ ಪರಮಾತ್ಮವಸ್ತುವೇ. ॥೩೪॥

ಗುಟ್ಟೋ ಇಲ್ಲ. ಪ್ರಕಾಶವಿಲ್ಲ. ಮಹತ್ತ್ವವಿಲ್ಲ, ಅಣುತ್ವವಿಲ್ಲ. ಈಗ ಪ್ರಪಂಚವು ಇಲ್ಲ. ಮುಂದೂ ಇಲ್ಲ. ಹಿಂದೆಯೂ ಇಲ್ಲ. ಪರವಸ್ತುವೊಂದೇ ಇರುವುದು. ॥೩೫॥

ಅಂತಃಕರಣದ ಸಂಸಾರವು ಇಲ್ಲ. ಜಗತ್ತಿನ ಭ್ರಮೆಯು ಇಲ್ಲ. ಚಿತ್ತಸಂಸಾರವು ಇಲ್ಲ. ಬುದ್ಧಿಯ ಪ್ರಪಂಚವು ಇಲ್ಲ. ಪರಮಾತ್ಮನೊರ್ವನೇ ಇರುವವನು. ॥೩೬॥

ಜೀವರೂಪವಾದ ಸಂಸಾರವೂ ಇಲ್ಲ. ವಾಸನಾಮಯವಾದ ಸಂಸಾರವೂ ಇಲ್ಲ. ಲಿಂಗದೇಹರೂಪವಾದ ಸಂಸಾರವೂ ಇಲ್ಲ. ಅಜ್ಞಾನರೂಪವಾದ ಸಂಸಾರವೂ ಇಲ್ಲ. ಪರಮಾತ್ಮನೊರ್ವನೇ ಇರುವವನು. ॥೩೭॥

ನ ವೇದರೂಪಂ ಸಂಸಾರಂ ನ ಶಾಸ್ತ್ರಾಗಮಸಂಸ್ಕೃತಿಃ ।
ನಾನ್ಯದಸ್ತೀತಿ ಸಂಸಾರಂ ಅನ್ಯದಸ್ತೀತಿ ಭೇದಕಂ ॥೩೮॥

ನ ಭೇದಾಭೇದಕಲನಂ ನ ದೋಷಾದೋಷಕಲ್ಪನಂ ।
ನ ಶಾಂತಾಶಾಂತಸಂಸಾರಂ ನ ಗುಣಾಗುಣಸಂಸ್ಕೃತಿಃ ॥೩೯॥

ನ ಸ್ತ್ರೀಲಿಂಗಂ ನ ಪುಲ್ಲಿಂಗಂ ನ ನಪುಂಸಕಸಂಸ್ಕೃತಿಃ ।
ನ ಸ್ಥಾವರಂ ಜಂಗಮಂ ಚ ನ ದುಃಖಂ ನ ಸುಖಂ ಕ್ವಚಿತ್ ॥೪೦॥

ನ ಶಿಷ್ಯಾಶಿಷ್ಯರೂಪಂ ವಾ ನ ಯೋಗ್ಯಾಯೋಗ್ಯನಿಶ್ಚಯಃ ।
ನ ದ್ವೈತರೂಪವೃತ್ತಿರ್ವಾ ಸಾಕ್ಷಿವೃತ್ತಿತ್ವಲಕ್ಷಣಂ ॥೪೧॥

ಅಖಂಡಾಕಾರವೃತ್ತಿತ್ವಂ ನ ಖಂಡೈಕರಸಂ ಸುಖಂ ।
ದೇಹೋಹಮಿತಿ ಯಾ ವೃತ್ತಿರ್ಬ್ರಹ್ಮಾಹಮಿತಿ ಶಬ್ದಕಂ ॥೪೨॥

---

ವೇದರೂಪವಾದ ಸಂಸಾರವಿಲ್ಲ. ಶಾಸ್ತ್ರಾಗಮರೂಪವಾದ ಸಂಸಾರವೂ ಇಲ್ಲ. ಬೇರೇ ವಸ್ತುವಿಲ್ಲವೆನ್ನುವ ಅಭೇದಸಂಸಾರವು ಇಲ್ಲ. ಬೇರೆವಸ್ತುವಿದೆಯೆನ್ನುವ ಭೇದಸಂಸಾರವೂ ಇಲ್ಲ. ಪರವಸ್ತುವೊಂದೇ ಇರುವುದು. ॥೩೮॥

ಭೇದಾಭೇದರೂಪವಾದ ಪ್ರಪಂಚವೂ ಇಲ್ಲ. ದೋಷಾದೋಷರೂಪವಾದ ಸಂಸಾರವೂ ಇಲ್ಲ. ಗುಣಾಗುಣರೂಪವಾದ ಸಂಸಾರವೂ ಇಲ್ಲ. ಶಾಂತಿ ಅಶಾಂತಿರೂಪವಾದ ಸಂಸಾರವೂ ಇಲ್ಲ. ಪರಮಾತ್ಮನೋರ್ವನೇ ಇರುವವನು. ॥೩೯॥

ಸ್ತ್ರೀಲಿಂಗವು ಇಲ್ಲ. ಪುಲ್ಲಿಂಗವು ಇಲ್ಲ. ನಪುಂಸಕಲಿಂಗವು ಇಲ್ಲ. ಸ್ಥಿರ ವಸ್ತುವು ಇಲ್ಲ. ಪರವಸ್ತುವು ಇಲ್ಲ. ಸುಖವು ಇಲ್ಲ. ದುಃಖವು ಇಲ್ಲ. ॥೪೦॥

ಶಿಷ್ಯನು ಅಶಿಷ್ಯನು ಎಂಬುದಿಲ್ಲ. ಯೋಗ್ಯನು ಅಯೋಗ್ಯನು ಎಂಬುದಿಲ್ಲ. ಭೇದಜ್ಞಾನವು ಇಲ್ಲ. ಸಾಕ್ಷಿವ್ಯವಹಾರವು ಇಲ್ಲ. ॥೪೧॥

ಧಾರಾಕಾರವಾದ ಬ್ರಹ್ಮಜ್ಞಾನವೆಂಬುದಿಲ್ಲ. ಖಂಡಖಂಡವಾದ ವಿಷಯ ಸುಖಾನುಭವವೆಂಬುದಿಲ್ಲ. ದೇಹಾಭಿಮಾನವಿಲ್ಲ. ಬ್ರಹ್ಮನು ತಾನು ಎಂಬುದಿಲ್ಲ. ॥೪೨॥

ಅಖಂಡನಿಶ್ಚಯಾ ವೃತ್ತಿರ್ನಾಖಂಡೈಕರಸಂ ಮಹತ್ ।
ನ ಸರ್ವವೃತ್ತಿಭವನಂ ಸರ್ವವೃತ್ತಿವಿನಾಶಕಂ ॥೪೩॥

ಸರ್ವವೃತ್ತ್ಯನುಸಂಧಾನಂ ಸರ್ವವೃತ್ತಿವಿಮೋಚನಂ ।
ಸರ್ವವೃತ್ತಿವಿನಾಶಾಂತಂ ಸರ್ವವೃತ್ತಿವಿಶೂನ್ಯಕಂ ॥೪೪॥

ನ ಸರ್ವವೃತ್ತಿಸಾಹಸ್ರಂ ಕ್ಷಣಕ್ಷಣವಿನಾಶನಂ ।
ನ ಸರ್ವವೃತ್ತಿಸಾಕ್ಷಿತ್ವಂ ನ ಚ ಬ್ರಹ್ಮಾತ್ಮಭಾವನಂ ॥೪೫॥

ನ ಜಗನ್ನ ಮನೋ ನಾಂತೋ ನ ಕಾರ್ಯಕಲನಂ ಕ್ವಚಿತ್ ।
ನ ದೂಷಣಂ ಭೂಷಣಂ ವಾ ನ ನಿರಂಕುಶಲಕ್ಷಣಂ ॥೪೬॥

ನ ಬ್ರಹ್ಮ ಚಿತ್ತ ಆತ್ಮನ್ಯೋ ನ ಪರೋ ಸ್ವಪ್ನಲಕ್ಷಣಂ ।
ನ ವರ್ಯಪರೋ ರೋಧೋ ವರಿಷ್ಠೋ ನಾರ್ಥತತ್ಪರಃ ॥೪೭॥

---

ಅಖಂಡಬ್ರಹ್ಮಾನುಭವವನ್ನುಂಟುಮಾಡುವ ಅಖಂಡಜ್ಞಾನವೆಂಬುದೂ ಇಲ್ಲ. ಎಲ್ಲ ಜ್ಞಾನಗಳನ್ನೂ ಉಪಮರ್ದಿಸುವ, ಎಲ್ಲವೂ ಬ್ರಹ್ಮವೆಂಬ ನಿಶ್ಚಯವೂ ಇಲ್ಲ. ಪರಮಾತ್ಮನೋರ್ವನೇ ಇರುವವನು. ॥೪೩॥

ಎಲ್ಲ ಭಾವನೆಗಳ ಅನುಸಂಧಾನವೂ, ಎಲ್ಲ ಭಾವನೆಗಳ ತ್ಯಾಗವೂ, ಎಲ್ಲ ವೃತ್ತಿಗಳ ಇಲ್ಲದಿರುವಿಕೆಯೂ ವಾಸ್ತವವಾಗಿ ಇಲ್ಲ. ॥೪೪॥

ಕ್ಷಣಕ್ಷಣಗಳಲ್ಲೂ ನಾಶವಾಗುವಂತಹ ಸಾವಿರಾರು ವೃತ್ತಿಗಳಿವೆಯೆನ್ನುವುದೂ ಸುಳ್ಳು. ಎಲ್ಲವೃತ್ತಿಗಳಿಗೆ ಸಾಕ್ಷಿಯೋರ್ವನಿರುವನೆಂಬುದೂ ಇಲ್ಲ, ನಾನೇ ಬ್ರಹ್ಮನೆಂಬ ಭಾವನೆಯೂ ಇಲ್ಲ, ಬ್ರಹ್ಮವಸ್ತುವೊಂದೇ ಸ್ಥಿರವಾಗಿ ಇರುವುದು. ॥೪೫॥

ಜಗತ್ತಿಲ್ಲ, ಮನಸ್ಸಿಲ್ಲ, ಅಂತವಿಲ್ಲ, ಕಾರ್ಯಕಲ್ಪನೆಯಿಲ್ಲ, ದೂಷಣವಿಲ್ಲ, ಭೂಷಣವು ಇಲ್ಲ, ನಿರಂಕುಶತೆಯು ಇಲ್ಲ. ॥೪೬॥

ಬ್ರಹ್ಮನಲ್ಲಿ ಆತ್ಮಲೀನತೆಯೆಂಬ ಸುಷುಪ್ತಿಯೂ ಇಲ್ಲ, ಸ್ವಪ್ನವು ಇಲ್ಲ, ಕನಿಷ್ಠನೆಂಬುದಿಲ್ಲ, ಧನಾಸಕ್ತನಾದ ಧನಿಕನೆಂಬುದೂ ಇಲ್ಲ. ॥೪೭॥

ಆತ್ಮಜ್ಞಾನವಿಹೀನೋ ಯಃ ಸ ಏವ ಹಿ ದರಿದ್ರಕಃ ।
ಆತ್ಮಜ್ಞಾನವಿಹೀನೋ ಯೋ ಮಹಾಪಾತಕ ಏವ ಸಃ ॥೪೮॥

ಏತಾವತ್‌ಜ್ಞಾನಹೀನೋ ಯೋ ಮಹಾರೋಗೀ ಸ ಏವ ಹಿ ।
ಅಹಂ ಬ್ರಹ್ಮ ನ ಸಂದೇಹ ಅಖಂಡೈಕರಸಾತ್ಮಕಃ ॥೪೯॥

ಸದ್ಯೋ ಮುಕ್ತೋ ನ ಸಂದೇಹಃ ಸದ್ಯಃ ಪ್ರಜ್ಞಾನವಿಗ್ರಹಃ ।
ಬ್ರಹ್ಮೈವ ಸರ್ವಮೇವೇತಿ ನಿಶ್ಚಯಾನುಭವಾತ್ಮಕಃ ॥೫೦॥

ಸ ಏವ ಜ್ಞಾನವಾನ್ ಲೋಕೇ ಸ ಏವ ಪರಮೇಶ್ವರಃ ।
ಇದಮೇವ ಪರಂ ಬ್ರಹ್ಮ ಜ್ಞಾನಾಮೃತಮನೋಮಯಂ ॥೫೧॥

ಏತತ್ಪ್ರಕರಣಂ ಯಸ್ತು ಶೃಣುತೇ ಬ್ರಹ್ಮ ಏವ ಸಃ ॥೫೨॥

ಏಕತ್ವಂ ನ ಬಹುತ್ವಮಪ್ಯಣುಮಹತ್ಕಾರ್ಯಂ ನ ವೈ ಕಾರಣಂ
ವಿಶ್ವಂ ವಿಶ್ವಪತಿತ್ವಮಪ್ಯರಸಕಂ ನೋ ಗಂಧರೂಪಂ ಸದಾ ।

---

ಆತ್ಮಜ್ಞಾನವೇ ಧನವು, ಆತ್ಮಜ್ಞಾನವಿಲ್ಲದವನೇ ದರಿದ್ರನು, ಆತ್ಮಜ್ಞಾನವಿಲ್ಲದಿರುವುದೇ ಮಹಾಪಾಪವು, ಮಹಾಪಾಪವಿಲ್ಲದವನೇ ಮಹಾಪಾಪಿಯು. ॥೪೮॥

ಇಲ್ಲಿಯವರೆಗೆ ನಾನು ಹೇಳಿದಂತಹ ಜ್ಞಾನವು ಯಾವನಿಗಿಲ್ಲವೋ ಆತನೇ ಮಹಾರೋಗಿಯು. ನಾನು ಅಖಂಡಾನುಭವರೂಪವಾದ ಬ್ರಹ್ಮವಸ್ತುವು. ॥೪೯॥

ಎಲ್ಲವೂ ಬ್ರಹ್ಮಸ್ವರೂಪವೇ ಎಂಬ ನಿಶ್ಚಯಾನುಭವರೂಪನಾಗಿ ನಾನು ಸದ್ಯಃ ಮುಕ್ತನೇ ಆಗಿರುವೆನು. ॥೫೦॥

ಇಂತಹ ಬ್ರಹ್ಮಾನುಭವವುಳ್ಳವನೇ ಜ್ಞಾನಿಯು, ಅವನೇ ಪರಮೇಶ್ವರನು. ಈ ಜಗತ್ತೆಲ್ಲವೂ ಆನಂದಜ್ಞಾನರೂಪವಾದ ಪರಬ್ರಹ್ಮವಸ್ತುವೇ. ॥೫೧॥

ಈ ಪ್ರಕರಣವನ್ನು ಕೇಳುವವನೂ ಸಹ ಬ್ರಹ್ಮನೇ ಆಗುವನು. ॥೫೨॥

ಪರಶಿವನೆಂಬ ಬ್ರಹ್ಮತೇಜವು ಒಂದೂ ಅಲ್ಲ. ಅನೇಕವೂ ಇಲ್ಲ. ಅಣುವಲ್ಲ ಮಹತ್ತಲ್ಲ, ಕಾರ್ಯವಲ್ಲ, ಕಾರಣವಲ್ಲ, ಜಗತ್ತಲ್ಲ, ಜಗತ್ಪತಿಯಲ್ಲ, ರಸವಲ್ಲ, ಗಂಧವಲ್ಲ, ರೂಪವಲ್ಲ, ಬಂಧನಹೊಂದಿಲ್ಲ, ಮುಕ್ತವಲ್ಲ, ಉತ್ತಮವಲ್ಲ, ನೀಚವಲ್ಲ,

ಬದ್ಧಂ ಮುಕ್ತಮನುತ್ತಮೋತ್ತಮಮಹಾನಂದೈಕವೇೂದಂ ಸದಾ
ಭೂಮಾನಂದಸದಾಶಿವಂ ಜನಿಜರಾರೋಗಾದ್ಯಸಂಗಂ ಮಹಃ ॥೫೩॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಷಡ್ವಿಂಶೋಽಧ್ಯಾಯಃ

---

ಜನನಮರಣಾದಿಗಳಿಲ್ಲದುದು, ಸದಾ ಆನಂದರೂಪವಾದುದು, ಇಂತಹ ಶಂಕರ ರೂಪವಾದ ಸ್ಥಿರ ತೇಜಸ್ಸನ್ನು ನಾನು ಸದಾ ವಂದಿಸುವೆನು. ॥೫೩॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಆರನೆಯ ಅಂಶದಲ್ಲಿ ಇಪ್ಪತ್ತಾರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಸಪ್ತವಿಂಶೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ಪ್ರಕರಣಂ ಸತ್ಯಂ ಬ್ರಹ್ಮಾನಂದಮಯಂ ಸದಾ ।
ಕಾರ್ಯಕಾರಣನಿರ್ಮುಕ್ತಂ ನಿತ್ಯಾನಂದಮಹಂ ತ್ವಿದಂ ॥೧॥

ಅಕ್ಷಯಾನಂದಮೇವಾಹಮಾತ್ಮಾನಂದಪ್ರಕಾಶಕಂ ।
ಜ್ಞಾನಾನಂದಸ್ವರೂಪೋಽಹಂ ಲಕ್ಷ್ಯಾನಂದಮಯಂ ಸದಾ ॥೨॥

ವಿಷಯಾನಂದಶೂನ್ಯೋಽಹಂ ಮಿಥ್ಯಾನಂದಪ್ರಕಾಶಕಃ ।
ವೃತ್ತಿಶೂನ್ಯಂ ಸುಖಾತ್ಮಾಽಹಂ ವೃತ್ತಿಹೀನಂ ಸುಖಾತ್ಪರಂ ॥೩॥

---

## ಇಪ್ಪತ್ತೇಳನೆಯ ಅಧ್ಯಾಯವು

ಎಲೈ ನಿದಾಘಮುನಿಯೇ, ಸತ್ಯವಸ್ತುವನ್ನು ಪ್ರತಿಪಾದಿಸುವ ಪ್ರಕರಣವನ್ನು ಹೇಳುವೆನು, ಕೇಳು. ನನಗೆ ಜನನಾದಿ ವಿಕಾರಗಳಿಲ್ಲ, ಕಾರ್ಯಕಾರಣತ್ವಗಳಿಲ್ಲದ ನಿತ್ಯಾನಂದ ಸ್ವರೂಪವಾದ ಬ್ರಹ್ಮಸ್ವರೂಪನು ನಾನು. ॥೧॥

ಕ್ಷಯಿಸದ ಆನಂದವು ನಾನು, ಆತ್ಮಾನಂದವನ್ನು ಪ್ರಕಾಶಪಡಿಸುವವನು ನಾನು, ಜ್ಞಾನಾನಂದಸ್ವರೂಪನು ನಾನು, ಲಕ್ಷ್ಯಾನಂದನು ನಾನು, ಅಂದರೆ ಆನಂದವನ್ನನುಭವಿಸುವವನೂ ಆನಂದವೂ ನಾನೇ. ॥೨॥

ಅಸತ್ಯವಾದ ವಿಷಯಾನಂದವು ನನಗಿಲ್ಲ. ಆದರೆ ಆನಂದವನ್ನು ಪ್ರಕಾಶಪಡಿಸುವ ಮುಖ್ಯಾನಂದವು ನಾನು, ಇಂದ್ರಿಯಸಂಯೋಗದಿಂದಾಗದ ಆಕಾರವಿಲ್ಲದ ಸುಖಜ್ಞಾನಸ್ವರೂಪನು ನಾನು, ಆದರೆ ವಿಷಯಸುಖಸ್ವರೂಪನಲ್ಲ. ॥೩॥

ಜಡಾನಂದಪ್ರಕಾಶಾತ್ಮಾ ಆತ್ಮಾನಂದರಸೋಽಸ್ಮ್ಯಹಂ ।
ಅಸ್ತ್ಯಾನಂದವಿಹೀನೋಽಹಂ ನಾಸ್ತ್ಯಾನಂದಾತ್ಮವಿಗ್ರಹಃ ॥೪॥

ಕಾರ್ಯಾನಂದವಿಹೀನೋಽಹಂ ಕಾರ್ಯಾನಂದಕಲಾತ್ಮಕಃ ।
ಗುಹ್ಯಾನಂದವಿಹೀನೋಽಹಂ ಗುಹ್ಯಾನಂದಸ್ವರೂಪವಾನ್ ॥೫॥

ಗುಪ್ತಾನಂದಸ್ವರೂಪೋಽಹಂ ಕೃತ್ಯಾನಂದಮಹಾನಹಂ ।
ಜ್ಞೇಯಾನಂದವಿಹೀನೋಽಹಂ ಗೋಪ್ಯಾನಂದವಿವರ್ಜಿತಃ ॥೬॥

ಸರ್ವಾನಂದಸ್ವರೂಪೋಽಹಂ ಮುದಾನಂದನಿಜಾತ್ಮಕಃ ।
ಲೋಕಾನಂದೋ ಮಹಾನಂದೋ ಲೋಕಾತೀತಮಹಾನಹಂ ॥೭॥

ಭೇದಾನಂದಸುಖಾನಂದೋ ಚಿದಾನಂದೋಽಹಮದ್ವಯಃ ।
ಕ್ರಿಯಾನಂದೋಽಕ್ಷಯಾನಂದೋ ವೃತ್ತ್ಯಾನಂದವಿವರ್ಜಿತಃ ॥೮॥

---

ಜಡವಸ್ತುವಿನ ಆನಂದವನ್ನು ಪ್ರಕಾಶಗೊಳಿಸುವ ಆನಂದ ಘನನು ನಾನು. ಇದೆ-ಎನ್ನುವ ಆನಂದವು ನಾನಲ್ಲ. ಇಲ್ಲ ಎನ್ನುವ ಆನಂದ ವಿಗ್ರಹವೇ ನಾನು. ॥೪॥

ಕಾರ್ಯವಸ್ತುಗಳ ಆನಂದವು ನಾನಲ್ಲ. ಆದರೆ ಆ ಕಾರ್ಯಾನಂದವನ್ನು ಪ್ರಕಾಶಗೊಳಿಸುವವನು ನಾನು. ಗುಣಗಳ ಆನಂದವು ನಾನಲ್ಲ. ಆದರಾಗುಣಗಳ ಆನಂದವನ್ನು ಪ್ರಕಾಶಪಡಿಸುವವನು ನಾನು. ॥೫॥

ಗುಪ್ತವಸ್ತುಗಳ ಆನಂದಗಳ ಸ್ವರೂಪನು ನಾನು. ಕಾರ್ಯಾನಂದಗಳ ಮೂಲಸ್ವರೂಪವು ನಾನು. ಜ್ಞೇಯವಸ್ತುವಿನ ಆನಂದವೂ ಸಮಷ್ಟಿಯಾದ ಆನಂದವೂ ನಾನಲ್ಲ. ॥೬॥

ಎಲ್ಲ ಆನಂದಗಳ ಮೊತ್ತವಾದ ಸುಖರೂಪವಾದ ಆನಂದ ಘನನು ನಾನು. ಲೋಕಗಳ ಆನಂದವನ್ನು ಪ್ರಕಾಶಗೊಳಿಸುವ ಮಹಾನಂದವು ನಾನು. ಆದರೆ ಲೋಕವನ್ನು ಅತಿಕ್ರಮಿಸಿ ನಿಂತಿರುವ ಮಹಾತ್ಮನು ನಾನು. ॥೭॥

ಭೇದಭಾವನೆಯ ಆನಂದವು ನಾನು, ಅದ್ವಿತೀಯವಾದ ಜ್ಞಾನಾನಂದಸ್ವರೂಪವು ನಾನು, ಕ್ರಿಯೆಯ ಆನಂದವು ನಾನು, ಆದರೆ ಕ್ರಿಯೆಯಂತೆ ಕ್ಷಯಿಸುವವನು ನಾನಲ್ಲ. ॥೮॥

ಸರ್ವಾನಂದೋಽಕ್ಷಯಾನಂದಶ್ಚಿದಾನಂದೋಽಹಮದ್ವಯಃ ।
ಸತ್ಯಾನಂದಃ ಪರಾನಂದಃ ಸದ್ಯೋಽನಂದಃ ಪರಾತ್ಪರಃ ॥೯॥

ಅನುಲಾತ್ಮಾ ಪರಾನಂದಶ್ಚಿದಾನಂದೋಽಹಮದ್ವಯಃ ।
ವೃತ್ತ್ಯಾನಂದಃ ಪರಾನಂದೋ ವಿದ್ಯಾತೀತೋ ಹಿ ನಿರ್ಮಲಃ ॥೧೦॥

ವಾಕ್ಯಾನಂದೋ ಮಹಾನಂದಶ್ಚಿದಾನಂದೋಽಹಮದ್ವಯಃ ।
ಶಿವಾನಂದೋತ್ತರಾನಂದ ಆದ್ಯಾನಂದಾದಿವರ್ಜಿತಃ ॥೧೧॥

ಕಾರಣಾತೀತ ಆನಂದಶ್ಚಿದಾನಂದಾದಿವರ್ಜಿತಃ ।
ಸರ್ವಾನಂದಃ ಪರಾನಂದೋ ಬ್ರಹ್ಮಾನಂದಾತ್ಮಭಾವನಃ ॥೧೨॥

ಜೀವಾನಂದೋ ಲಯಾನಂದಶ್ಚಿದಾನಂದಸ್ವರೂಪವಾನ್ ।
ಶುದ್ಧಾನಂದಸ್ವರೂಪಾತ್ಮಾ ಬುದ್ಧ್ಯಾನಂದೋ ಮನೋಮಯಃ॥೧೩॥

---

ಎಲ್ಲ ಆನಂದವು ನಾನು. ಕ್ಷಯಿಸದ ಆನಂದವು ನಾನು, ಸತ್ಯಾನಂದವು ನಾನು, ಸರ್ವೋತ್ತಮವಾದ ಆನಂದವು ನಾನು, ಅದ್ವಿತೀಯವಾದ ಜ್ಞಾನಾನಂದವು ನಾನು. ॥೯॥

ನಿರ್ಮಲವಾದ ಸರ್ವೋತ್ತಮವಾದ ಆನಂದವು ನಾನು. ಖಂಡಜ್ಞಾನಾಕಾರವಾದ ಆನಂದವು ನಾನು. ವಿದ್ಯೆಗೆ ನಿಲುಕದ ಅದ್ವಿತೀಯವಾದ ಆನಂದವು ನಾನು. ॥೧೦॥

ವಾಕ್ಯಗಳಿಂದಾಗುವ ಆನಂದವು ನಾನು, ಮಂಗಳರೂಪವಾದ ಆನಂದವು ನಾನು, ಮೊದಲನೆಯ ಆನಂದ, ಕೊನೆಯ ಆನಂದ ಎಂಬ ಭೇದವಿಲ್ಲದವನು ನಾನು, ಅದ್ವಿತೀಯವಾದ ಜ್ಞಾನಾನಂದಸ್ವರೂಪವೇ ನಾನು. ॥೧೧॥

ಕಾರಣಗಳಿಗೆ ಅಂಕಿತವಲ್ಲದ ಆನಂದವು ನಾನು, ಎಲ್ಲ ಆನಂದಗಳ ಮೊತ್ತವಾದ ಮಹಾನಂದವು ನಾನು. ಆತ್ಮಾನಂದವು ನಾನು, ಬ್ರಹ್ಮಾನಂದವು ನಾನು. ॥೧೨॥

ಜೀವನ ಆನಂದವು ನಾನು, ಕ್ಷಣಿಕವಾದ ಆನಂದವು ನನ್ನ ಅಂಶವು, ಶುದ್ಧಾನಂದಸ್ವರೂಪವು ನಾನು, ಬುದ್ಧಿಯ ಆನಂದವು ನಾನು, ಮನಸ್ಸಿನ ಆನಂದವು ನಾನು. ॥೧೩॥

ದ್ವೈತಾನಂದಪ್ರಭಾವಾತ್ಮಾ ಚಿದಾನಂದೋಽಹಮದ್ವಯಃ ।
ಏವಮಾದಿ ಸದಾನಂದಃ ಅಹಮೇವೇತಿ ಭಾವಯ ॥೧೪॥

ಶಬ್ದಾನಂದೋಽಹಮಾನಂದಶ್ಚಿದಾನಂದೋಽಹಮದ್ವಯಃ ।
ಆನಂದಾನಂದಶೂನ್ಯಾತ್ಮಾ ಭೇದಾನಂದವಿಶೂನ್ಯಕಃ ॥೧೫॥

ಶತಾನಂದೋಽಹಮೇವೇತಿ ಚಿದಾನಂದಪ್ರಭಾಸ್ವರಃ ।
ಏಕಾನಂದಃ ಪರಾನಂದಃ ಏಕ ಏವ ಚಿದವ್ಯಯಃ ॥೧೬॥

ಏಕ ಏವ ಮಹಾನಾತ್ಮಾ ಏಕ ಸಂಖ್ಯಾವಿವರ್ಜಿತಃ ।
ಏಕತತ್ತ್ವಮಹಾನಂದೋ ತತ್ತ್ವಭೇದವಿವರ್ಜಿತಃ ॥೧೭॥

ವಿಜಿತಾನಂದಹೀನೋಽಹಂ ನಿರ್ಜಿತಾನಂದಹೀನಕಃ ।
ಹೀನಾನಂದಪ್ರಶಾಂತೋಽಹಂ ಶಾಂತೋಽಹಮಿತಿಶಾಂತಕಃ ॥೧೮॥

---

ಭಿನ್ನಭಾವನೆಯಿಂದಾಗುವ ಆನಂದವೂ ನಾನು, ಅದ್ವಿತೀಯವಾದ ಜ್ಞಾನಾನಂದವೇ ನಾನು, ಎಲ್ಲ ಆನಂದವೂ ನಾನು ಎಂದು ಭಾವಿಸು. ॥೧೪॥

ಶಬ್ದಗಳಿಂದಾಗುವ ಆನಂದವು ನಾನು, ಆನಂದಗಳ ಆನಂದವು ನಾನು, ಭಿನ್ನಭಿನ್ನವಾದ ಆನಂದಗಳು ನನ್ನಲ್ಲಿಲ್ಲ. ಅದ್ವಿತೀಯವಾದ ಆತ್ಮಾನಂದವು ನಾನು. ॥೧೫॥

ನೂರಾರು ಆನಂದಗಳ ಮೊತ್ತವು ನಾನು, ಉತ್ಕೃಷ್ಟವಾದ ನಿತ್ಯವಾದ ಆನಂದವು ನಾನು, ಅದ್ವಿತೀಯವಾದ ಜ್ಞಾನಾನಂದವು ನಾನು. ॥೧೬॥

ಓರ್ವನೇ ಆದ ಪರಮಾತ್ಮನು ನಾನು. ಆದರೆ ಒಂದು ಎಂಬ ಸಂಖ್ಯೆಯೂ ನನ್ನಲ್ಲಿಲ್ಲ. ಆನಂದವೆಂಬ ಒಂದೇ ತತ್ವವುಳ್ಳವನು ನಾನು, ನೂರೆಂಟು ತತ್ವಭೇದಗಳು ನನ್ನಲ್ಲಿಲ್ಲ. ॥೧೭॥

ಜಯಪಡೆದ ಆನಂದವೆನ್ನುವುದು ನಾನಲ್ಲ, ಸೋಲಿಸಿದ ಆನಂದವೆಂಬುದೂ ನನಗಿಲ್ಲ, ಹೀನವಾದ ಆನಂದಗಳೂ ನನಗಿಲ್ಲ, ಸದಾ ಶಾಂತಮೂರ್ತಿಯು ನಾನು. ॥೧೮॥

ಮಮತಾನಂದಶಾಂತೋಹಂ ಶಾಂತೋಹಮಿತಿವರ್ಜಿತಃ ।
ಬ್ರಹ್ಮೈವಾಹಂ ನ ಸಂಸಾರೀ ಇತ್ಯೇವಮಿತಿ ಶಾಂತಕಃ ॥೧೯॥

ಸರ್ವದಾ ದೇಹಶಾಂತೋಹಮಹಮಾದಿಪ್ರಕಾಶಕಃ ।
ಅಂತರಾದಂತರೋಹಂ ವೈ ಅಂತರಾದಂತರೋಂತರಃ ॥೨೦॥

ಏಕ ಏವ ಮಹಾನಂದ ಏಕ ಏವಾಹಮಕ್ಷರಃ ।
ಏಕ ಏವಾಕ್ಷರಂ ಬ್ರಹ್ಮ ಏಕ ಏವಾಕ್ಷರೋಽಕ್ಷರಃ ॥೨೧॥

ಏಕ ಏವ ಮಹಾನಾತ್ಮಾ ಏಕ ಏವ ಮನೋಹರಃ ।
ಏಕ ಏವಾದ್ವಯೋಹಂ ವೈ ಏಕ ಏವ ನ ಚಾಪರಃ ॥೨೨॥

ಏಕ ಏವ ನ ಭೂರಾದಿ ಏಕ ಏವ ನ ಬುದ್ಧಕಃ ।
ಏಕ ಏವ ಪ್ರಶಾಂತೋಹಮೇಕ ಏವ ಸುಖಾತ್ಮಕಃ ॥೨೩॥

---

ಮಮತೆಯ ಆನಂದವು ನನಗಿಲ್ಲ, ಶಾಂತನು ನಾನು ಎನ್ನುವುದೂ ನನಗಿಲ್ಲ. ಬ್ರಹ್ಮವಸ್ತುವೇ ನಾನು. ಸಂಸಾರಿಯಲ್ಲ. ಯಾವಾಗಲೂ ದೇಹವು ನನಗಿಲ್ಲ. ನಾನು ಎಂದೇ ಪ್ರಕಾಶಿಸುವೆನು. ಎಲ್ಲ ವಸ್ತುಗಳ ಹೊರಗಿನಲ್ಲಿ ಒಳಗೆ ಇರುವ ಸರ್ವಾಂತರ್ಯಾಮಿಯು ನಾನು, ಅತಿ ರಹಸ್ಯವಸ್ತುವು ನಾನು. ॥೨೦॥

ಅದ್ವಿತೀಯುವಾದ ಮಹಾನಂದವು ನಾನು. ನಾಶವಿಲ್ಲದ ಅದ್ವಿತೀಯಸ್ವರೂಪವು ನಾನು. ನಾಶವಿಲ್ಲದ ಪರಬ್ರಹ್ಮವಸ್ತುವು ನಾನು. ಓಂಕಾರವು ನಾನು. ನಾಶ ರಹಿತನು ನಾನು. ॥೨೧॥

ಓರ್ವನೇ ಆದ ಮಹಾತ್ಮನು ನಾನು. ಓರ್ವನೇ ಆದ ಮನೋಹರನು ನಾನು. ಓರ್ವನೇ ಆದ ಅದ್ವಿತೀಯಸ್ವರೂಪನು ನಾನು. ನನ್ನ ಹೊರತಾಗಿ ಯಾರೂ ಇಲ್ಲ. ॥೨೨॥

ನಾನೋರ್ವನೇ ನಾನಿರುವವನು. ಭೂರಾದಿಲೋಕಗಳಿಲ್ಲ. ಓರ್ವನೇ ಆದ ಶಾಂತಮೂರ್ತಿಯು ನಾನು. ಸುಖಸ್ವರೂಪನು ನಾನು. ॥೨೩॥

ಏಕ ಏವ ನ ಕಾಮಾತ್ಮಾ ಏಕ ಏವ ನ ಕೋಪಕಃ ।
ಏಕ ಏವ ನ ಲೋಭಾತ್ಮಾ ಏಕ ಏವ ನ ಮೋಹಕಃ ॥೨೪॥

ಏಕ ಏವ ಮದೋ ನಾಹಂ ಏಕ ಏವ ನ ಮೇ ರಸಃ ।
ಏಕ ಏವ ನ ಚಿಂತಾತ್ಮಾ ಏಕ ಏವ ನ ಚಾನ್ಯಕಃ ॥೨೫॥

ಏಕ ಏವ ನ ಸತ್ತಾತ್ಮಾ ಏಕ ಏವಾಜರಾಮರಃ ।
ಏಕ ಏವ ಹಿ ಪೂರ್ಣಾತ್ಮಾ ಏಕ ಏವ ಹಿ ನಿಶ್ಚಯಃ ॥೨೬॥

ಏಕ ಏವ ಮಹಾನಂದ ಏಕ ಏವೇಽಹಮೇಕವಾನ್ ।
ದೇಹೋಽಹಮಿತಿ ಹೀನೋಽಹಂ ಮಹಾಹಮಿತಿ ನಿಶ್ಚಿತಃ ॥೨೭॥

ಸಾರೋಽಹಮಿತಿ ಹೀನೋಽಹಂ ಶಾಂತೋಽಹಮಿತಿ ಶಾಶ್ವತಃ ।
ಶಿವೋಽಹಮಿತಿ ಶಾಂತೋಽಹಮಾತ್ಮೈವಾಹಮಿತ್ಯಕ್ರಿಯಃ ॥೨೮॥

---

ಓರ್ವನೇ ಆದ ನಾನು ಕಾಮವಲ್ಲ. ನನಗೆ ಕ್ರೋಧವಿಲ್ಲ. ಲೋಭವಿಲ್ಲ. ಮೋಹವಿಲ್ಲ. ಮದವಿಲ್ಲ. ಮಾತ್ಸರ್ಯವಿಲ್ಲ. ರಸವಿಲ್ಲ. ಚಿಂತೆಯಿಲ್ಲ. ಯಾವುದೂ ಅಲ್ಲ. ||೨೪-೨೫||

ಓರ್ವನೇ ಆದ ನಾನು "ಇದೆ" ಎನ್ನುವ ಭಾವವು ಅಲ್ಲ. ಜನನಮರಣಗಳಿಲ್ಲದ ಅದ್ವಿತೀಯಪುರುಷನು ನಾನು. ಪರಿಪೂರ್ಣಸ್ವರೂಪನು ನಾನು. ಒಂದೇ ಆದ ಬ್ರಹ್ಮನಿಶ್ಚಯಸ್ವರೂಪನು ನಾನು. ||೨೬||

ಅದ್ವಿತೀಯವಾದ ಮಹಾನಂದವು ನಾನು. ಏಕತ್ವವುಳ್ಳವನು ನಾನೋರ್ವನೇ. ದೇಹವು ನಾನಲ್ಲ. ಪರಮಾತ್ಮನು ನಾನು. ||೨೭||

ಅಹಂಕಾರವು ನನಗಿಲ್ಲ. ಶಾಂತನೂ ಶಾಶ್ವತನೂ ನಾನಾಗಿರುವೆನು. ಶಿವನು ನಾನೆಂದು ಶಾಂತನಾಗಿರುವೆನು. ಆತ್ಮವೇ ನಾನೆಂದು ತಿಳಿದಿರುವೆನು. ಆದರಿಂದಲೇ ಯಾವ ಕ್ರಿಯೆಯೂ ಇಲ್ಲದವನಾಗಿರುವೆನು. ||೨೮||

ಜೀವೋಽಹಮಿತಿ ಶಾಂತೋಽಹಂ ನಿತ್ಯಂ ತೂನ್ಯಹೃದಂತರಃ ।
ಏವಂ ಭಾವಯ ನಿಶ್ಶಂಕಂ ಸದ್ಯೋ ಮುಕ್ತಸ್ತ್ವಮದ್ವಯೇ ॥೨೯॥

ಏವಮಾದಿ ಸುಶಬ್ದಂ ವಾ ನಿತ್ಯಂ ಪಠತು ನಿಶ್ಚಲಃ ।
ಜನ್ಮಮೃತ್ಯುಜರಾವ್ಯಾಧಿಸಂಸಾರಾಬ್ಧಿಂ ತರಿಷ್ಯಸಿ ॥೩೦॥

॥ ಸೂತ ಉವಾಚ ॥

ಕಾಲಾತ್ಸ್ವಭಾವಾನ್ನಿಯತೇಶ್ಚ ಭೂತೈರ್ಜಗದ್ವಿಜಾಯೇತ ಇತಿಶ್ರುತೀರಿತಂ।
ತದ್ವೈ ಮೃಷಾ ಸ್ಯಾಜ್ಜಗತೋ ಜಡತ್ವತ ಇಚ್ಛಾಭವಂ ಚೈತದಥೇಶ್ವರಸ್ಯ
॥೩೧॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಸಪ್ತವಿಂಶೋಽಧ್ಯಾಯಃ

---

ನಾನು ಜೀವನು ಅಲ್ಲ. ಸದಾ ಪರಮಾತ್ಮನು ನಾನು ಎಂದು ಭಾವಿಸು. ಸದ್ಯಃ ನೀನು ಅದ್ವಿತೀಯಸ್ವರೂಪದಲ್ಲಿ ಮುಕ್ತನಾಗುವೆ. ॥೨೯॥

ಈಗ ಹೇಳಿದ ಶಬ್ದಗಳನ್ನಾದರೂ ಏಕಚಿತ್ತತೆಯಿಂದ ಪಠಿಸು. ಅದರಿಂದ ಜನನಮರಣವಾರ್ಧಕ್ಯರೋಗಗಳಮಯವಾದೀ ಸಂಸಾರಸಾಗರವನ್ನು ದಾಟುವೆ. ॥೩೦॥

ಕಾಲ, ಸ್ವಭಾವ, ಅದೃಷ್ಟ, ಭೂತಗಳಿಂದ ಈ ಜಗತ್ತು ಜನಿಸುವುದೆಂದು ಪುರಾಣಗಳು ಹೇಳುವುವು. ಅದು ಸುಳ್ಳು, ಕೇವಲ ಜಡವಾದ ಈ ಕಾಲಾದಿಗಳು ಜಗತ್ತನ್ನು ಸೃಷ್ಟಿಸಲಾರವು, ಈಶ್ವರನ ಇಚ್ಛೆಯಿಂದಲೇ ಜಗತ್ತು ಜನಿಸುವುದು. ಇದು ವೇದಾಂತಸಿದ್ಧಾಂತವು. ಎಂದು ಸೂತಮಹಾಮುನಿಗಳು ಸಕಲ ಮಹರ್ಷಿಗಳಿಗೂ ಬೋಧಿಸಿದರು. ॥೩೧॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯಂಶದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಅಷ್ಟವಿಂಶೋಽಧ್ಯಾಯಃ

॥ ಋಭುರುವಾಚ ॥

ಬ್ರಹ್ಮೈವಾಹಂ ಚಿದೇವಾಹಂ ನಿರ್ಮಲೋಽಹಂ ನಿರಂತರಂ ।
ಶುದ್ಧಸ್ವರೂಪಮೇವಾಹಂ ನಿತ್ಯರೂಪಪರೋಽಸ್ಮ್ಯಹಂ ॥೧॥

ನಿತ್ಯಂ ನಿರ್ಮಲರೂಪೋಽಹಂ ನಿತ್ಯಚೈತನ್ಯವಿಗ್ರಹಃ ।
ಆದ್ಯಂತರೂಪಹೀನೋಽಹಂ ಆದ್ಯಂತದ್ವೈತಹೀನಕಃ ॥೨॥

ಅಜಸ್ರಂ ಸುಖರೂಪೋಽಹಂ ಅಜಸ್ರಾನಂದರೂಪವಾನ್ ।
ಅಹಮೇವಾದಿನಿರ್ಮುಕ್ತ ಅಹಂಕಾರೇಣ ವರ್ಜಿತಃ ॥೩॥

---

## ಇಪ್ಪತ್ತೆಂಟನೆಯ ಅಧ್ಯಾಯ

ಬ್ರಹ್ಮವಸ್ತುವೇ ನಾನು. ಚೈತನ್ಯವೇ ನಾನು, ನಿರ್ಮಲನು ನಾನು, ನಾನು ಶುದ್ಧಸ್ವರೂಪನು, ನಿತ್ಯಸ್ವರೂಪದಲ್ಲಾಸಕ್ತನು ನಾನು. ॥೧॥

ಯಾವಾಗಲೂ ನಿರ್ಮಲಸ್ವರೂಪನು ನಾನು. ನಿತ್ಯಚೈತನ್ಯಸ್ವರೂಪನು ನಾನು. ಆದಿ ಅಂತ್ಯಗಳಿಲ್ಲದವನು ನಾನು, ಅದ್ವಿತೀಯಸ್ವರೂಪನು ನಾನು. ॥೨॥

ಯಾವಾಗಲೂ ಸುಖರೂಪನು ನಾನು, ಯಾವಾಗಲೂ ಆನಂದರೂಪನು ನಾನು, ಆದಿಯು ನನಗಿಲ್ಲ. ಅಹಂಕಾರವು ನನಗಿಲ್ಲ. ॥೩॥

ಅಹಮೇವ ಪರಂ ಬ್ರಹ್ಮ ಅಹಮೇವಾಹಮೇವ ಹಿ ।
ಇತ್ಯೇವಂ ಭಾವಯನ್ನಿತ್ಯಂ ಸುಖಮಾತ್ಮನಿ ನಿರ್ಮಲಃ ॥೪॥

ಸುಖಂ ತಿಷ್ಠ ಸುಖಂ ತಿಷ್ಠ ಸುಚಿರಂ ಸುಖಮಾವಹ ।
ಸರ್ವವೇದಮನನ್ಯಸ್ತ್ವಂ ಸರ್ವದಾ ನಾಸ್ತಿ ಕಲ್ಪನಂ ॥೫॥

ಸರ್ವದಾ ನಾಸ್ತಿ ಚಿತ್ತಾಖ್ಯಂ ಸರ್ವದಾ ನಾಸ್ತಿ ಸಂಸೃತಿಃ ।
ಸರ್ವದಾ ನಾಸ್ತಿ ನಾಸ್ತ್ಯೇವ ಸರ್ವದಾ ಜಗದೇವ ನ ॥೬॥

ಜಗತ್ಪ್ರಸಂಗಂ ನಾಸ್ತ್ಯೇವ ದೇಹವಾರ್ತಾ ತತಃ ಕುತಃ ।
ಬ್ರಹ್ಮೈವ ಸರ್ವಂ ಚಿನ್ಮಾತ್ರಂ ಅಹಮೇವ ಹಿ ಕೇವಲಃ ॥೭॥

ಚಿತ್ತಮಿತ್ಯಪಿ ನಾಸ್ತ್ಯೇವ ಚಿತ್ತಮಸ್ತಿ ಹಿ ನಾಸ್ತಿ ಹಿ ।
ಅಸ್ತಿತ್ವಭಾವನಾ ನಷ್ಟಾ ಜಗದಸ್ತಿತ್ವವಾಕ್ ಮೃಷಾ ॥೮॥

ಅಸ್ತಿತ್ವವಕ್ತೃವಾರ್ತಾ ಹಿ ಜಗದಸ್ತೀತಿ ಭಾವನಾ ।
ಸ್ವಾತ್ಮನೋಽನ್ಯಜ್ಜಗದ್ರಕ್ಷಾ ದೇಹೋಽಹಮಿತಿ ನಿಶ್ಚಿತಃ ॥೯॥

---

ನಾನೇ ಪರಬ್ರಹ್ಮನು, ನಾನೆಂಬುವವನು ನಾನೇ, ಎಂದು ನಿತ್ಯವೂ ಭಾವಿಸುತ್ತಾ ಆತ್ಮಸುಖದಲ್ಲಿ ವಿಹರಿಸುತ್ತಾ ನಿರ್ಮಲನಾಗಿ ಸುಖವಾಗಿರು. ಯಾವಾಗಲೂ ಆತ್ಮಸುಖಾನುಭವವನ್ನನುಭವಿಸು. ॥೪॥

ಯಾವ ವೇದಗಳೂ ಇಲ್ಲ. ಯಾವ ಕಲ್ಪನೆಯೂ ಇಲ್ಲ. ಚಿತ್ತವೆಂಬುದು ಯಾವಾಗಲೂ ಇಲ್ಲ. ಸಂಸಾರವೆಂಬುದಾವಾಗಲೂ ಇಲ್ಲ. ಜಗತ್ತು ಯಾವಾಗಲೂ ಇಲ್ಲವೇ ಇಲ್ಲ. ॥೫-೬॥

ಜಗತ್ತಿಗೆ ಪ್ರಸಕ್ತಿಯೇ ಇಲ್ಲ. ಇನ್ನು ದೇಹವಿದೆಯೆಂಬ ಸುದ್ದಿಯೂ ಇಲ್ಲ. ಎಲ್ಲವೂ ಚೈತನ್ಯರೂಪವಾದ ಬ್ರಹ್ಮವಸ್ತುವೇ, ಆ ಬ್ರಹ್ಮವಸ್ತುವೇ ನಾನು. ॥೭॥

ಚಿತ್ತವೆಂಬುದೂ ಇಲ್ಲ. ಚಿತ್ತವು ಇದೆಯೋ ಇದೆ, ಇಲ್ಲವೋ ಇಲ್ಲ. ಅಂದರೆ ವ್ಯಾವಹಾರಿಕವಾಗಿ ಇದೆ ಎನ್ನಬೇಕು. ಪಾರಮಾರ್ಥಿಕವಾಗಿ ಇಲ್ಲ. ಜಗತ್ತು ಇದೆಯೆಂಬ ಭಾವನೆಯೂ ಸುಳ್ಳು. ॥೮॥

ಆತ್ಮನ ಹೊರತು ಇನ್ನಾವುದೂ ಇದೆಯೆಂಬ ವಾರ್ತೆಯೇ ಇಲ್ಲ. ದೇಹಾಭಿ

ಮಹಾಚಂಡಾಲ ಏವಾಸೌ ಮಹಾವಿಪ್ರೋऽಪಿ ನಿಶ್ಚಯಃ ।
ತಸ್ಮಾದಿತಿ ಜಗನ್ನೇತಿ ಚಿತ್ತಂ ವಾ ಬುದ್ಧಿರೇವ ವಾ ॥೧೦॥

ನಾಸ್ತಿ ನಾಸ್ತೀತಿ ಸಹಸಾ ನಿಶ್ಚಯಂ ಕುರು ನಿರ್ಮಲಃ ।
ದೃಶ್ಯಂ ನಾಸ್ತ್ಯೇವ ನಾಸ್ತ್ಯೇವ ನಾಸ್ತಿ ನಾಸ್ತೀತಿ ಭಾವಯ ॥೧೧॥

ಅಹಮೇವ ಪರಂ ಬ್ರಹ್ಮ ಅಹಮೇವ ಹಿ ನಿಷ್ಕಲಃ ।
ಅಹಮೇವ ನ ಚಾಹಂ ಚ ಅಹಮೇವ ಸುಖಾಸುಖಂ ॥೧೨॥

ಅಹಮೇವ ಹಿ ದಿವ್ಯಾತ್ಮಾ ಅಹಮೇವ ಹಿ ಕೇವಲಃ ।
ವಾಚಾಮಗೋಚರೋऽಹಂ ವೈ ಅಹಮೇವ ನ ಚಾಪರಃ ॥೧೩॥

ಅಹಮೇವ ಹಿ ಸರ್ವಾತ್ಮಾ ಅಹಮೇವ ಸದಾ ಪ್ರಿಯಃ ।
ಅಹಮೇವ ಹಿ ಭಾನಾತ್ಮಾ ಅಹಂ ವೃತ್ತಿವಿವರ್ಜಿತಃ ॥೧೪॥

---

ಮಾನದಿಂದಲೇ ಈ ಜಗತ್ತು ನಡೆಯುತ್ತಿರುವುದು, ಆ ಅಭಿಮಾನವನ್ನು ತೊರೆದಂದು ಜಗತ್ತೇ ಇಲ್ಲ. ॥೯॥

ದೇಹವೇ ಆತ್ಮವೆಂದು ತಿಳಿದವನೂ, ಜಗತ್ತೇ ಸರ್ವಸ್ವವೆಂದು ತಿಳಿದವನೂ ಮಹಾವಿಪ್ರನಾದರೂ ಚಂಡಾಲನೇ ಸರಿ. ಆದುದರಿಂದ ಈ ಜಗತ್ತಾವುದೂ ಇಲ್ಲ. ದೇಹವು ನಾನಲ್ಲ. ಆತ್ಮನೋರ್ವನೇ ಇರುವವನು, ನಾನು ಆತ್ಮನು, ಕಣ್ಣಿಗೆ ಕಾಣಿಸುವ ಈ ವಸ್ತುಗಳಾವುವೂ ಇಲ್ಲ—ಎಂದು ನಿತ್ಯವೂ ಭಾವಿಸು. ॥೧೦-೧೧॥

ನಾನೇ ಪರಬ್ರಹ್ಮನು, ನಾನು ನಿರವಯುವನು, ನಾನು ನಾನೇ, ನಾನೆಂಬ ವ್ಯವಹಾರವೂ ನನಗಿಲ್ಲ. ಸುಖವು ನಾನು, ದುಃಖವು ನನ್ನಲ್ಲಿಲ್ಲ. ॥೧೨॥

ನಾನು ದಿವ್ಯಸ್ವರೂಪನು, ಅದ್ವಿತೀಯಸ್ವರೂಪನು ನಾನು, ವಾಕ್ಕಿಗೆ ಅಗೋಚರನು ನಾನು, ನಾನು ನಾನೇ, ಬೇರೆಯಲ್ಲ. ॥೧೩॥

ಎಲ್ಲ ಪ್ರಾಣಿಗಳಿಗೂ ಅತಿ ಪ್ರಿಯವಾಗಿರುವ; ಎಲ್ಲ ಪ್ರಾಣಿದೇಹದಲ್ಲೂ ಇರುವ ಆತ್ಮನು ನಾನೇ, ಜ್ಞಾನಸ್ವರೂಪನು ನಾನು, ಆದರೆ ಜ್ಞಾನವೃತ್ತಿಯು ನನಗಿಲ್ಲ. ॥೧೪॥

ಅಹಮೇವಾಪರಿಚ್ಛಿನ್ನೋ ಅಹಮೇವ ನಿರಂತರಃ ।
ಅಹಮೇವ ಹಿ ನಿಶ್ಚಿಂತಃ ಅಹಮೇವ ಹಿ ಸದ್ಗುರುಃ ॥೧೫॥

ಅಹಮೇವ ಸದಾ ಸಾಕ್ಷೀ ಅಹಮೇವಾಹಮೇವ ಹಿ ।
ನಾಹಂ ಗುಪ್ತೋ ನಚಾಗುಪ್ತೋ ನ ಪ್ರಕಾಶಾತ್ಮಕಂ ಸದಾ ॥೧೬॥

ನಾಹಂ ಜಡೋ ನ ಚಿನ್ಮಾತ್ರಃ ಕ್ವಚಿತ್ಕಿಂಚಿತ್ತದಸ್ತಿ ಹಿ ।
ನಾಹಂ ಪ್ರಾಣೋ ಜಡತ್ವಂ ತದತ್ಯಂತಂ ಸರ್ವದಾ ಭ್ರಮಃ ॥೧೭॥

ಅಹಮತ್ಯಂತಮಾನಂದಮಹಮತ್ಯಂತನಿರ್ಮಲಃ ।
ಅಹಮತ್ಯಂತವೇದಾತ್ಮಾ ಅಹಮತ್ಯಂತಶಾಂತಕಃ ॥೧೮॥

ಅಹಮಿತ್ಯಪಿ ಮೇ ಕಿಂಚಿದಹಮಿತ್ಯಪಿ ನ ಸ್ಮೃತಿಃ ।
ಸರ್ವಹೀನೋಽಹಮೇವಾಗ್ರೇ ಸರ್ವಹೀನಸ್ಸುಖಾಚ್ಛುಭಾತ್ ॥೧೯॥

---

ನಾನು ಸಣ್ಣತನವಿಲ್ಲದ ಮಹಾವ್ಯಾಪಕಮೂರ್ತಿಯು, ಎಲ್ಲೆಲ್ಲಿಯೂ ನಾನಿರುವೆನು, ಯಾವ ಚಿಂತೆಯೂ ನನಗಿಲ್ಲ. ಎಲ್ಲರಿಗೂ ಸದ್ಗುರುವು ನಾನು. ॥೧೫॥

ಎಲ್ಲಕ್ಕೂ ಸಾಕ್ಷಿಯು ನಾನು, ನಾನು ನಾನೇ, ನಾನು ರಹಸ್ಯನೂ ಅಲ್ಲ, ಪ್ರಕಟನೂ ಅಲ್ಲ. ಪ್ರಕಾಶವೂ ಅಲ್ಲ. ಪ್ರಕಾಶಸ್ವರೂಪನು. ॥೧೬॥

ನಾನು ಜಡನಲ್ಲ, ಚೈತನ್ಯವಲ್ಲ, ಚೈತನ್ಯಸ್ವರೂಪನು, ಜಡವಾದ ಪ್ರಾಣವು ನಾನಲ್ಲ. ಪ್ರಾಣವು ನಾನೆಂಬುದು ಭ್ರಮೆಯು. ॥೧೭॥

ಸರ್ವೋತ್ತಮವಾದ ಆನಂದವು ನಾನು, ಅತ್ಯಂತ ನಿರ್ಮಲನು ನಾನು, ಅಖಂಡಜ್ಞಾನಸ್ವರೂಪನು ನಾನು, ಅತ್ಯಂತ ಶಾಂತನು ನಾನು. ॥೧೮॥

ನಾನು, ನನ್ನದು-ಎಂಬ ಮಮತೆ ಅಹಂಕಾರಗಳೂ ನನಗಿಲ್ಲ. ಸೃಷ್ಟ್ಯಾದಿಯಲ್ಲಿ ನಾನು ಯಾವ ವಿಶೇಷವೂ ಇಲ್ಲದವನಾಗಿದ್ದೆನು. ॥೧೯॥

ಪರಾತ್ಪರತರೋ ಬ್ರಹ್ಮಾ ಪರಾತ್ಪರತರಃ ಪುಮಾನ್ ।
ಪರಾತ್ಪರೋಽಹಂ ವೈ ಸರ್ವಂ ಸರ್ವಸ್ಮಾತ್ಪರತಃ ಪರಃ ॥೨೦॥

ಸರ್ವದೇಹವಿಹೀನೋಽಹಂ ಸರ್ವಕರ್ಮವಿವರ್ಜಿತಃ ।
ಸರ್ವಮಂತ್ರಃ ಪ್ರಶಾಂತಾತ್ಮಾ ಸರ್ವಾಂತಃಕರಣಾತ್ಪರಃ ॥೨೧॥

ಸರ್ವಸ್ತೋತ್ರವಿಹೀನೋಽಹಂ ಸರ್ವದೇವಪ್ರಕಾಶಕಃ ।
ಸರ್ವಸ್ನಾನವಿಹೀನಾತ್ಮಾ ಏಕಮುಗ್ನೋಽಹಮದ್ವಯಃ ॥೨೨॥

ಆತ್ಮತೀರ್ಥೇ ಹ್ಯಾತ್ಮಜಲೇ ಆತ್ಮಾನಂದಮನೋಹರೇ ।
ಆತ್ಮೈವಾಹಮಿತಿ ಜ್ಞಾತ್ವಾ ಆತ್ಮಾಕಾರೋ ವಸಾಮ್ಯಹಂ ॥೨೩॥

ಅಹಮಾತ್ಮಾಹಮಾತ್ಮಾಹಮಹಮಾತ್ಮಾ ನಲೌಕಿಕಃ ।
ಸರ್ವಾತ್ಮಾಹಂ ಸದಾತ್ಮಾಹಂ ನಿತ್ಯಾತ್ಮಾಹಂ ಗುಣಾಂತರಃ ॥೨೪॥

---

ಬ್ರಹ್ಮವಸ್ತುವು ಉತ್ತಮವಸ್ತುಗಳಲ್ಲೆಲ್ಲಾ ಉತ್ತಮವಾದದ್ದು, ಪರಮಾತ್ಮನು ಸರ್ವೋತ್ತಮನು, ನಾನೂ ಸರ್ವೋತ್ತಮನು, ಅಂದರೆ ನಾನೂ ಬ್ರಹ್ಮವಸ್ತುವೂ ಪರಮಾತ್ಮನೂ ಒಂದೇ. ॥೨೦॥

ಯಾವ ದೇಹಗಳೂ ನನಗಿಲ್ಲ. ಯಾವ ಕರ್ಮಗಳೂ ನನಗಿಲ್ಲ. ಎಲ್ಲರ ಹೃದಯದಲ್ಲೂ ಶಾಂತನಾಗಿರುವೆನು. ಎಲ್ಲ ಅಂತಃಕರಣಗಳಿಗಿಂತಲೂ ನಾನು ಭಿನ್ನನು. ॥೨೧॥

ಯಾವ ಸ್ತೋತ್ರವೂ ನನಗಿಲ್ಲ. ಎಲ್ಲ ಇಂದ್ರಿಯಗಳನ್ನು ನಾನು ಪ್ರಕಾಶಗೊಳಿಸುವೆನು. ಯಾವ ಸ್ನಾನವೂ ನನಗಿಲ್ಲ, ಅದ್ವಿತೀಯನು ನಾನು. ॥೨೨॥

ಆತ್ಮನೇ ಜಲವಾಗುಳ್ಳ, ಆತ್ಮಾನಂದದಿಂದ ಮನೋಹರವಾದ ಆತ್ಮತೀರ್ಥದಲ್ಲಿ, ಆತ್ಮನೇ ನಾನೆಂದು ತಿಳಿದು ಆತ್ಮರೂಪದಿಂದ ನಿತ್ಯವೂ ವಾಸಮಾಡುವೆನು ಮತ್ತು ಸ್ನಾನಮಾಡುವೆನು. ॥೨೩॥

ನಾನು ಆತ್ಮನು, ಆತ್ಮನು ನಾನು, ಅದ್ವಿತೀಯಾತ್ಮನು ನಾನು, ಲೌಕಿಕವಾದ ಭಿನ್ನಭಿನ್ನನಾದ ಆತ್ಮನು ನಾನಲ್ಲ. ಎಲ್ಲರ ಆತ್ಮವು ನಾನು, ಯಾವಾಗಲೂ ಆತ್ಮನು ನಾನು, ನಿತ್ಯನಾದ ಆತ್ಮನು ನಾನು. ॥೨೪॥

ಆತ್ಮೈವ ಭೋಜ್ಯಂ ಹ್ಯಾತ್ಮಾಹಿ ತೃಪ್ತಿರಾತ್ಮಸುಖಾತ್ಮಕಃ ।
ಆತ್ಮೈವ ಹ್ಯಾತ್ಮನೋ ಹ್ಯಾತ್ಮಾ ಆತ್ಮೈವ ಪರಮೋಽಹ್ಯಹಂ ॥೨೫॥

ಏವಂ ನಿತ್ಯಂ ಭಾವಯಿತ್ವಾ ಸರ್ವದಾಭಾವಸಿದ್ಧಯೇ ।
ಸಿದ್ಧಂ ತಿಷ್ಠತಿ ಚಿನ್ಮಾತ್ರೋ ನಿಶ್ಚಯಂ ಮಾತ್ರಮೇವ ಸಾ ॥೨೬॥

ನಿಶ್ಚಯಂ ಚ ಲಯಂ ಯಾತಿ ಸ್ವಯಮೇವ ಸುಖೀಭವ ॥೨೭॥

ಶಾಖಾಶಿಖಾಭಿಃ ಶ್ರುತಯೋಽಪ್ಯನಂತಾಃ
ತ್ವಾಮೇಕಮೇವ ಭಗವನ್ ಬಹುಧಾ ವದಂತಿ ।
ವಿಷ್ಣ್ವಿಂದ್ರಧಾತೃರವಿಸೂನ್ವನಲಾನಿಲಾದಿ
ಭೂತಾತ್ಮನಾಭಗಣನಾಥಲಲಾಮ ಶಂಭೋ ॥೨೮॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇಽಷ್ಟಾವಿಂಶೋಽಧ್ಯಾಯಃ

---

ಭೋಗಿಸುವ ವಸ್ತುವೂ ಆತ್ಮನೇ, ಭೋಗಿಸುವವನೂ ಆತ್ಮನೇ, ತೃಪ್ತಿಯೂ ಸುಖರೂಪನಾದ ಆತ್ಮನೇ, ಆತ್ಮನೇ ಆತ್ಮನ (ನನ್ನ) ಆತ್ಮನು, ಪರಮಾತ್ಮನು ನಾನು. ॥೨೫॥

ಹೀಗೆ ನಿತ್ಯವೂ ಭಾವಿಸುತ್ತಾ ಯಾವಾಗಲೂ ಆತ್ಮಭಾವಸಿದ್ಧಿಗಾಗಿ ಆತ್ಮ ನಿಶ್ಚಯವುಳ್ಳವನಾಗಿರು, ಅಭ್ಯಾಸದಿಂದ ನಿಶ್ಚಯವು ಲಭಿಸುವುದು. ॥೨೬॥

ಕೊನೆಯಲ್ಲಾ ನಿಶ್ಚಯವೂ ಲಯವಾಗಿ ಕೇವಲ ಆತ್ಮಸ್ವರೂಪವೊಂದೇ ಉಳಿಯುವುದು, ನೀನೇ ನೀನಾಗುವೆ, ಹೀಗಾಗಿ ಸುಖಿಯಾಗು. ॥೨೭॥

ಹರಿ, ಬ್ರಹ್ಮ, ಇಂದ್ರ, ಸೂರ್ಯ, ಯಮ, ಅಗ್ನಿ, ವಾಯು, ರುದ್ರ, ಗಣನಾಥ ಮುಂತಾದ ದೇವನಾಯಕರಿಗೆ ಒಡೆಯನಾದ ದೇವದೇವನಾದ ಓ ಶಂಭುವೆ, ಶಾಖಾಶಿರಸ್ಸುಗಳಿಂದ ಭಿನ್ನಭಿನ್ನವಾಗಿರುವ ವೇದಗಳು ನಿನ್ನನ್ನು ನಾನಾಬಗೆಯಾಗಿ ಹೇಳುವುವು. ಆದರೆ ಮಹಾಮಹಿಮನಾದ ನೀನು ಮಾತ್ರ ಅದ್ವಿತೀಯಶಂಕರನು. ॥೨೮॥

ಇಲ್ಲಿಗೆ ಶ್ರೀ ಶಿವರಹಸ್ಯದ ಆರನೆಯಂಶದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಏಕೋನತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ಅತ್ಯಂತಂ ತನ್ಮಯಂ ವಕ್ಷ್ಯೇ ದುರ್ಲಭಂ ಯೋಗಿನಾಮಪಿ ।
ವೇದಶಾಸ್ತ್ರೇಷು ದೇವೇಷು ರಹಸ್ಯಮತಿದುರ್ಲಭಂ ॥೧॥

ಯತ್ಪರಂ ಬ್ರಹ್ಮ ಸರ್ವಾತ್ಮಾ ಸಚ್ಚಿದಾನಂದವಿಗ್ರಹಃ ।
ಸರ್ವಾತ್ಮಾ ಪರಮಾತ್ಮಾ ಹಿ ತನ್ಮಯೋ ಭವ ಸರ್ವದಾ ॥೨॥

ಆತ್ಮರೂಪಮಿದಂ ಸರ್ವಮಾದ್ಯಂತರಹಿತೋಽಜಯಂ ।
ಕಾರ್ಯಾಕಾರ್ಯಮಿದಂ ನಾಸ್ತಿ ತನ್ಮಯೋ ಭವ ಸರ್ವದಾ ॥೩॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ಈಗ ಯೋಗಿಗಳಿಗೂ ದುರ್ಲಭವಾದ ವೇದಶಾಸ್ತ್ರಗಳ ರಹಸ್ಯವಾದ ತನ್ಮಯತೆಯನ್ನು ಹೇಳುವೆನು ಕೇಳು. ॥೧॥

ಸರ್ವಾತ್ಮವಾದ ಸತ್ಯಜ್ಞಾನಾನಂದಸ್ವರೂಪವಾದ ಪರಬ್ರಹ್ಮವಾದ ಯಾವ ಪರಮಾತ್ಮವಸ್ತುವಿದೆಯೋ ಆ ವಸ್ತುವಿನ ಸ್ವರೂಪನೇ ನೀನು ಆಗು ಇದೇ ನಿಜವಾದ ತನ್ಮಯತೆಯು. ॥೨॥

ಕಾರ್ಯ ಮತ್ತು ಅಕಾರ್ಯಗಳಿಲ್ಲದೆ ಆದಿ ಅಂತ್ಯಗಳಿಲ್ಲದೆ ಆತ್ಮರೂಪವಾದ ಯಾವ ವಸ್ತುವಿದೆಯೋ ಆ ವಸ್ತುವಿನ ಸ್ವರೂಪನಾಗು. ॥೩॥

ಯತ್ರದ್ವೈತಭಯಂ ನಾಸ್ತಿ ಯತ್ರದ್ವೈತಪ್ರಬೋಧನಂ ।
ಶಾಂತಾಶಾಂತದ್ವಯಂ ನಾಸ್ತಿ ತನ್ಮಯೋ ಭವ ಸರ್ವದಾ ॥೪॥

ಯತ್ರ ಸಂಕಲ್ಪಕಂ ನಾಸ್ತಿ ಯತ್ರ ಭ್ರಾಂತಿರ್ನವಿದ್ಯತೇ ।
ತದೇವ ಹಿ ಮತಿರ್ನಾಸ್ತಿ ತನ್ಮಯೋ ಭವ ಸರ್ವದಾ ॥೫॥

ಯತ್ರ ಬ್ರಹ್ಮಣಿ ನಾಸ್ತ್ಯೇವ ಯತ್ರ ಭಾತಿ ವಿಕಲ್ಪನಂ ।
ಯತ್ರ ಸರ್ವಂ ಜಗನ್ನಾಸ್ತಿ ತನ್ಮಯೋ ಭವ ಸರ್ವದಾ ॥೬॥

ಯತ್ರ ಭಾವಮಭಾವಂ ವಾ ಮನೋ ಭ್ರಾಂತಿವಿಕಲ್ಪನಂ ।
ಯತ್ರ ವಾರ್ತಾ ನವಾರ್ತಾ ವಾ ತನ್ಮಯೋ ಭವ ಸರ್ವದಾ ॥೭॥

ಯತ್ರ ನಾಸ್ತಿ ಸುಖಂ ನಾಸ್ತಿ ದೇಹೋಹಮಿತಿ ಕಲ್ಪನಂ ।
ಸರ್ವಸಂಕಲ್ಪನಿರ್ಮುಕ್ತಂ ತನ್ಮಯೋ ಭವ ಸರ್ವದಾ ॥೮॥

---

ಎರಡನೆಯ ವಸ್ತುವಿನ ಭಯವಿಲ್ಲ. ಭೇದಕಲ್ಪನೆಯೇ ಇಲ್ಲದ ಯಾವ ವಸ್ತುವಿರುವುದೋ ಆ ಪರವಸ್ತುವಿನ ತನ್ಮಯನಾಗು. ॥೪॥

ಎಲ್ಲಿ ನಾನಾ ಕಲ್ಪನೆಗಳಿಲ್ಲವೋ, ಎಲ್ಲಿ ಭ್ರಾಂತಿಯೇ ಇಲ್ಲವೊ, ಎಲ್ಲಿ ಜಡವಾದ ಬುದ್ಧಿಯಿಲ್ಲವೋ ಆ ಪರವಸ್ತುವಿನಲ್ಲಿ ನಿರತನಾಗು. ॥೫॥

ಎಲ್ಲಿ ನಾನಾ ಬಗೆಯ ಜಗತ್ತೂ ವಿಕಲ್ಪಗಳೂ ಇಲ್ಲವೊ, ಅಂತಹ ಬ್ರಹ್ಮವಸ್ತುವಿನಲ್ಲಿ ನೀನು ಸದಾ ಲೀನನಾಗು. ॥೬॥

ಭಾವವಾಗಲೀ ಅಭಾವವಾಗಲೀ ಎಲ್ಲಿಲ್ಲವೋ, ಸುವಾರ್ತೆಯಾಗಲೀ ದುರ್ವಾರ್ತೆಯಾಗಲೀ ಎಲ್ಲಿಲ್ಲವೋ, ಮನಸ್ಸಿನ ಭ್ರಾಂತಿಕಲ್ಪನೆಗಳು ಎಲ್ಲಿಲ್ಲವೋ ಅಂಥ ಪರವಸ್ತುವಿನ ತನ್ಮಯನಾಗು. ॥೭॥

ಅನಿತ್ಯಸುಖವಾಗಲೀ ದೇಹಾತ್ಮಭ್ರಾಂತಿಯಾಗಲೀ ಭ್ರಾಂತಿಯ ಸಂಕಲ್ಪಗಳಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನ ಸ್ವರೂಪನಾಗು. ॥೮॥

ಯತ್ರ ಬ್ರಹ್ಮಾದಿನಾಭಾವಂ ಯತ್ರ ದೋಷೋ ನ ವಿದ್ಯತೇ ।
ಯತ್ರ ದ್ವಂದ್ವಭಯಂ ನಾಸ್ತಿ ತನ್ಮಯೋ ಭವ ಸರ್ವದಾ ॥೯॥

ಯತ್ರ ವಾಕ್ಕಾಯಕಾರ್ಯಂ ವಾ ಕಲ್ಪೋ ಯತ್ರ ಲಯಂಗತಃ ।
ಯತ್ರ ಪ್ರಪಂಚಂ ನೋತ್ಪನ್ನಂ ತನ್ಮಯೋ ಭವ ಸರ್ವದಾ ॥೧೦॥

ಯತ್ರ ಮಾಯಾಪ್ರಕಾಶೋ ನ ಮಾಯಾಕಾರ್ಯಂ ನ ಕಿಂಚನ ।
ಯತ್ರ ದೃಶ್ಯಮದೃಶ್ಯಂ ವಾ ತನ್ಮಯೋ ಭವ ಸರ್ವದಾ ॥೧೧॥

ವಿದ್ವಾನ್ ವಿದ್ಯಾಪಿ ನಾಸ್ತ್ಯೇವ ಯತ್ರ ಪಕ್ಷವಿಪಕ್ಷಕೌ ।
ನ ಯತ್ರ ದೋಷಾದೋಷೌ ವಾ ತನ್ಮಯೋ ಭವ ಸರ್ವದಾ ॥೧೨॥

ಯತ್ರ ವಿಷ್ಣುತ್ವಭೇದೋ ನ ಯತ್ರ ಬ್ರಹ್ಮಾ ನ ವಿದ್ಯತೇ ।
ಯತ್ರ ಶಂಕರಭೇದೋ ನ ತನ್ಮಯೋ ಭವ ಸರ್ವದಾ ॥೧೩॥

---

ಬ್ರಹ್ಮದೇವಾದಿ ದೇವತೆಗಳ ನಾನಾ ಭೇದವು ಎಲ್ಲಿಲ್ಲವೋ, ದೋಷಗಳಾಗಲೀ ಸುಖದುಃಖಾದಿ ದ್ವಂದ್ವಗಳ ಭಯವಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನ ತನ್ಮಯನಾಗು. ॥೯॥

ವಾಕ್ಕು ಶರೀರಗಳ ಕಾರ್ಯವಾಗಲೀ, ಕಲ್ಪನೆಗಳಾಗಲೀ ಪ್ರಪಂಚೋತ್ಪತ್ತಿಯಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನ ತನ್ಮಯನಾಗು. ॥೧೦॥

ಮಾಯೆಯ ಪ್ರಕಾಶವಾಗಲೀ, ಕಾರ್ಯವಾಗಲೀ, ದೃಶ್ಯವಾಗಲೀ, ಅದೃಶ್ಯ ಜಗತ್ತಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನ ತನ್ಮಯನಾಗು. ॥೧೧॥

ವಿದ್ಯೆಯಾಗಲೀ, ವಿದ್ಯಾವಂತನಾಗಲೀ ಎಲ್ಲಿಲ್ಲವೋ, ಪಕ್ಷಪ್ರತಿಪಕ್ಷಗಳಾಗಲೀ, ದೋಷಗುಣಗಳಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನ ಸ್ವರೂಪನು ನೀನಾಗು. ॥೧೨॥

ವಿಷ್ಣುವೆಂಬ ಭೇದವಾಗಲೀ, ಬ್ರಹ್ಮದೇವನೆಂಬ ಭೇದವಾಗಲೀ ಶಂಕರನೆಂಬ ಭೇದವಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನಲ್ಲಿ ಲೀನನಾಗು. ॥೧೩॥

ನ ಯತ್ರ ಸದಸದ್ಭೇದೋ ನ ಯತ್ರ ಕಲನಾಪದಂ ।
ನ ಯತ್ರ ಜೀವಕಲನಾ ತನ್ಮಯೋ ಭವ ಸರ್ವದಾ ॥೧೪॥

ನ ಯತ್ರ ಶಂಕರಧ್ಯಾನಂ ನ ಯತ್ರ ಪರಮಂ ಪದಂ ।
ನ ಯತ್ರ ಕಲನಾಕಾರಂ ತನ್ಮಯೋ ಭವ ಸರ್ವದಾ ॥೧೫॥

ನ ಯತ್ರಾಣುರ್ಮಹತ್ತ್ವಂ ಚ ಯತ್ರ ಸಂತೋಷಕಲ್ಪನಂ ।
ಯತ್ರ ಪ್ರಪಂಚನಾಭಾಸಂ ತನ್ಮಯೋ ಭವ ಸರ್ವದಾ ॥೧೬॥

ನ ಯತ್ರ ದೇಹಕಲನಂ ನ ಯತ್ರ ಹಿ ಕುತೂಹಲಂ ।
ನ ಯತ್ರ ಚಿತ್ತಕಲನಂ ತನ್ಮಯೋ ಭವ ಸರ್ವದಾ ॥೧೭॥

ನ ಯತ್ರ ಬುದ್ಧಿವಿಜ್ಞಾನಂ ನ ಯತ್ರಾತ್ಮಾ ಮನೋಮಯಃ ।
ನ ಯತ್ರ ಕಾಮಕಲನಂ ತನ್ಮಯೋ ಭವ ಸರ್ವದಾ ॥೧೮॥

---

ಸತ್ಯ–ಅಸತ್ಯಗಳೆಂಬ ಭೇದವು ಎಲ್ಲಿಲ್ಲವೋ, ಜೀವನೆಂಬ ಭೇದಕಲ್ಪನೆಯಾಗಲೀ ಇತರ ಕಲ್ಪನೆಯಾಗಲೀ ಎಲ್ಲಿಲ್ಲವೋ, ಆ ವಸ್ತುವಿನ ತನ್ಮಯನಾಗು. ॥೧೪॥

ಶಂಕರನ ಧ್ಯಾನವೆಂಬುದಾಗಲೀ, ಪರಮಪದವಿಯೆಂಬುದಾಗಲೀ, ಇವುಗಳ ತಿಳಿವಳಿಕೆಯಾಗಲೀ ಎಲ್ಲಿಲ್ಲವೋ ಅಂತಹ ಪರವಸ್ತುವಿನ ಸ್ವರೂಪನಾಗು. ॥೧೫॥

ಸೂಕ್ಷ್ಮತೆಯಾಗಲೀ, ಮಹತ್ತ್ವವಾಗಲೀ ಎಲ್ಲಿಲ್ಲವೋ, ಸಂತೋಷವೆಂಬ ಅಸತ್ಯಕಲ್ಪನೆಯಾಗಲೀ, ಪ್ರಪಂಚಕಲ್ಪನೆಯಾಗಲೀ ಎಲ್ಲಿಲ್ಲವೋ, ಅಂತಹ ಪರವಸ್ತುವಿನಲ್ಲಿ ಸದಾ ನಿರತನಾಗು. ॥೧೬॥

ದೇಹಕಲ್ಪನೆಯಾಗಲೀ, ಮನಸ್ಸಿನ ಕಲ್ಪನೆಗಳಾಗಲೀ, ಕುತೂಹಲವಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನಲ್ಲಿ ತನ್ಮಯನಾಗು. ॥೧೭॥

ಬುದ್ಧಿಯ ವಿಜ್ಞಾನವಾಗಲೀ, ಮನಸ್ಸೇ ಆತ್ಮವೆಂಬ ಕಲ್ಪನೆಯಾಗಲೀ, ಕಾಮಾಸಕ್ತಿಯಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನಲ್ಲಿ ಲೀನನಾಗು. ॥೧೮॥

ನ ಯತ್ರ ಮೋಕ್ಷವಿಶ್ರಾಂತಿರ್ಯತ್ರ ಬಂಧತ್ವನಿಗ್ರಹಃ ।
ನ ಯತ್ರ ಶಾಶ್ವತಜ್ಞಾನಂ ತನ್ಮಯೋ ಭವ ಸರ್ವದಾ ॥೧೯॥

ನ ಯತ್ರ ಕಾಲಕಲನಂ ಯತ್ರ ದುಃಖತ್ವಭಾವನಂ ।
ನ ಯತ್ರ ದೇಹಕಲನಂ ತನ್ಮಯೋ ಭವ ಸರ್ವದಾ ॥೨೦॥

ನ ಯತ್ರ ಜೀವವೈರಾಗ್ಯಂ ಯತ್ರ ಶಾಸ್ತ್ರವಿಕಲ್ಪನಂ ।
ಯತ್ರಾಹಮಹಮಾತ್ಮತ್ವಂ ತನ್ಮಯೋ ಭವ ಸರ್ವದಾ ॥೨೧॥

ನ ಯತ್ರ ಜೀವನ್ಮುಕ್ತಿರ್ವಾ ಯತ್ರ ದೇಹವಿಮೋಚನಂ ।
ಯತ್ರ ಸಂಕಲ್ಪಿತಂ ಕಾರ್ಯಂ ತನ್ಮಯೋ ಭವ ಸರ್ವದಾ ॥೨೨॥

ನ ಯತ್ರ ಭೂತಕಲನಂ ಯತ್ರಾನ್ಯತ್ತತ್ಪ್ರಭಾವನಂ ।
ನ ಯತ್ರ ಜೀವಭೇದೋ ವಾ ತನ್ಮಯೋ ಭವ ಸರ್ವದಾ ॥೨೩॥

---

ಮುಕ್ತಿಯ ವಿಶ್ರಾಂತಿಯಾಗಲೀ ಬಂಧದ ತಾಪತ್ರಯಗಳಾಗಲೀ ನಿತ್ಯಜ್ಞಾನವೆಂಬುದಾಗಲೀ ಎಲ್ಲಿಲ್ಲವೋ ಆ ವಸ್ತುವಿನಲ್ಲಿ ಲೀನನಾಗು. ॥೧೯॥

ಕಾಲದ ಕಲ್ಪನೆಯಾಗಲೀ ಮರಣಾಧೀನತೆಯಾಗಲೀ ದುಃಖಭಾವನೆಯಾಗಲೀ ದೇಹಕಲ್ಪನೆಯಾಗಲೀ ಎಲ್ಲಿಲ್ಲವೋ ಅಲ್ಲಿ ತನ್ಮಯನಾಗು. ॥೨೦॥

ಜೀವನೆಂದಾಗಲೀ ವೈರಾಗ್ಯವೆಂದಾಗಲೀ ಶಾಸ್ತ್ರಕಲ್ಪನೆಗಳೆಂಬುದಾಗಲೀ ವಸ್ತುತಃ ಎಲ್ಲಿಲ್ಲವೋ ಆ ಪರವಸ್ತುವಿನ ತನ್ಮಯನಾಗು. ॥೨೧॥

ಜೀವನ್ಮುಕ್ತಿಯೆಂಬುದಾಗಲೀ, ವಿದೇಹಕೈವಲ್ಯವೆಂಬುದಾಗಲೀ ಕಾರ್ಯಸಂಕಲ್ಪವೆಂದಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನಲ್ಲಿ ನಿರತನಾಗು. ॥೨೨॥

ಮಹಾಭೂತಗಳೆನ್ನುವುದೂ ಅವುಗಳಿಂದ ಸೃಷ್ಟಿಯಾಗುವುದೆನ್ನುವುದೂ ಜೀವಭೇದವಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನಲ್ಲಿ ಲೀನನಾಗು. ॥೨೩॥

ಯತ್ರಾನಂದಪದಂ ಬ್ರಹ್ಮ ಯತ್ರಾನಂದಂ ಪರಂ ಸುಖಂ ।
ಯತ್ರಾನಂದಂ ಗುಣಂ ನಿತ್ಯಂ ತನ್ಮಯೋ ಭವ ಸರ್ವದಾ ॥೨೪॥

ನ ಯತ್ರ ವಸ್ತುಪ್ರಭವಂ ನ ಯತ್ರಾಪಜಯೋಜಯಃ ।
ನ ಯತ್ರ ವಾಕ್ಯಕಥನಂ ತನ್ಮಯೋ ಭವ ಸರ್ವದಾ ॥೨೫॥

ನ ಯತ್ರಾತ್ಮವಿಚಾರಾಂಗಂ ನ ಯತ್ರ ಶ್ರವಣಾಕುಲಂ ।
ನ ಯತ್ರ ಚ ಮಹಾನಂದಂ ತನ್ಮಯೋ ಭವ ಸರ್ವದಾ ॥೨೬॥

ನ ಹಿ ಯತ್ರ ಸಜಾತೀಯಂ ವಿಜಾತೀಯಂ ನ ಯತ್ರ ಹಿ ।
ನ ಯತ್ರ ಸ್ವಗತಂ ಭೇದಂ ತನ್ಮಯೋ ಭವ ಸರ್ವದಾ ॥೨೭॥

ನ ಯತ್ರ ನರಕಂ ಘೋರಂ ನ ಯತ್ರ ಸ್ವರ್ಗಸಂಪದಃ ।
ನ ಯತ್ರ ಬ್ರಹ್ಮಲೋಕಂ ವಾ ತನ್ಮಯೋ ಭವ ಸರ್ವದಾ ॥೨೮॥

---

ಎಲ್ಲಿ ಆನಂದ ಪದಾರ್ಥವು ಬ್ರಹ್ಮವಸ್ತುವಾಗಿರುವುದೋ, ಎಲ್ಲಿ ಆನಂದವೇ ಪರಮಸುಖವೋ, ಆನಂದವೇ ನಿತ್ಯಗುಣವೋ ಆ ಪರಮಾತ್ಮ ವಸ್ತುವಿನಲ್ಲಿ ಲೀನನಾಗು. ॥೨೪॥

ವಸ್ತುಗಳ ಉತ್ಪತ್ತಿಯಾಗಲೀ ಜಯಾಪಜಯವೆಂಬವಾಗಲೀ, ವಾಕ್ಯಾರ್ಥವಾಗಲೀ ಎಲ್ಲಿಲ್ಲವೋ ಆ ಪರವಸ್ತುವಿನಲ್ಲಿ ನಿರತನಾಗು. ॥೨೫॥

ಆತ್ಮವಿಚಾರವಾಗಲೀ, ಆತ್ಮವಿಚಾರ ಸಾಧನಗಳಾಗಲೀ, ಆತ್ಮಾನಂದಕ್ಕೆ ಮಿಗಿಲಾದ ಆನಂದವೆಂಬುದಾಗಲೀ ಎಲ್ಲಿಲ್ಲವೋ ಆ ಪರಮಾತ್ಮವಸ್ತುವಿನ ಸ್ವರೂಪನಾಗು. ॥೨೬॥

ಸಜಾತೀಯ ಭೇದವಾಗಲೀ, ವಿಜಾತೀಯಭೇದವಾಗಲಿ, ಸ್ವಗತಭೇದವಾಗಲೀ ಎಲ್ಲಿಲ್ಲವೋ ಅಂತಹ ಅದ್ವಿತೀಯವಸ್ತುವಿನಲ್ಲಿ ತನ್ಮಯನಾಗು. ॥೨೭॥

ಘೋರ ನರಕವೆಂಬುದಾಗಲೀ ಸ್ವರ್ಗಸಂಪತ್ತುಗಳೆಂಬುದಾಗಲೀ ಬ್ರಹ್ಮಲೋಕವೆಂದಾಗಲೀ ಸ್ವರ್ಗಸಂಪತ್ತುಗಳೆಂಬುದಾಗಲೀ ಬ್ರಹ್ಮಲೋಕವೆಂದಾಗಲೀ ಎಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ತನ್ಮಯನಾಗು. ॥೨೮॥

ನ ಯತ್ರ ವಿಷ್ಣುಸಾಯುಜ್ಯಂ ಯತ್ರ ಕೈಲಾಸಪರ್ವತಃ ।
ಬ್ರಹ್ಮಾಂಡಮಂಡಲಂ ಯತ್ರ ತನ್ಮಯೋ ಭವ ಸರ್ವದಾ ॥೨೯॥

ನ ಯತ್ರ ದೂಷಣಂ ಚೈತದ್ಭೂಷಣಂ ವಾ ನ ವಿದ್ಯತೇ ।
ನ ಯತ್ರ ಸಮತಾದೋಷಂ ತನ್ಮಯೋ ಭವ ಸರ್ವದಾ ॥೩೦॥

ನ ಯತ್ರ ಮನಸಾ ಭಾವೋ ನ ಯತ್ರ ಸವಿಕಲ್ಪನಂ ।
ನ ಯತ್ರಾನುಭವಂ ದುಃಖಂ ತನ್ಮಯೋ ಭವ ಸರ್ವದಾ ॥೩೧॥

ಯತ್ರ ಪಾಪಭಯಂ ನಾಸ್ತಿ ಪಂಚಪಾಪಾದಪಿ ಕ್ವಚಿತ್ ।
ನ ಯತ್ರ ಸಂಗದೋಷಂ ವಾ ತನ್ಮಯೋ ಭವ ಸರ್ವದಾ ॥೩೨॥

ಯತ್ರ ತಾಪತ್ರಯಂ ನಾಸ್ತಿ ಯತ್ರ ಜೀವತ್ರಯಂ ಕ್ವಚಿತ್ ।
ಯತ್ರ ವಿಶ್ವವಿಕಲ್ಪಾಖ್ಯಂ ತನ್ಮಯೋ ಭವ ಸರ್ವದಾ ॥೩೩॥

---

ವಿಷ್ಣುವಿನ ವೈಕುಂಠವೆಂಬುದಾಗಲೀ ಕೈಲಾಸಪರ್ವತವೆಂದಾಗಲೀ ಬ್ರಹ್ಮಾಂಡ ಮಂಡಲವೆಂದಾಗಲೀ ಎಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ತನ್ಮಯನಾಗು. ॥೨೯॥

ದೋಷವೆಂಬುದಾಗಲೀ, ಭೂಷಣವೆಂಬುದಾಗಲೀ ಸಮತೆಯೆಂಬುದಾಗಲೀ ಎಲ್ಲಿಲ್ಲವೋ ಅಂತಹ ಪರಮಾತ್ಮವಸ್ತುವಿನ ಸ್ವರೂಪನಾಗು. ॥೩೦॥

ಮನಸ್ಸಿನ ಭಾವನೆಗಳಾಗಲೀ ಸವಿಷಯಕಜ್ಞಾನವಾಗಲೀ ದುಃಖಾನುಭವ ವೆಂದಾಗಲೀ ಎಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ತನ್ಮಯನಾಗು. ॥೩೧॥

ಬ್ರಹ್ಮಹತ್ಯಾದಿ ಮಹಾಪಾಪಗಳ ಭಯವಾಗಲೀ, ಅಂತಹ ಪಾಪಿಗಳ ಸಂಗ ದಿಂದ ಪಾಪವುಂಟಾಗುವುದೆನ್ನುವುದಾಗಲೀ ಎಲ್ಲಿಲ್ಲವೋ ಅಂತಹ ವಸ್ತುವಿನ ಸ್ವರೂಪನಾಗು. ॥೩೨॥

ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕಗಳೆಂಬ ತಾಪತ್ರಯಗಳಾಗಲೀ, ವಿಶ್ವ ತೈಜಸಪ್ರಾಜ್ಞರೆಂಬ ಜೀವಭೇದಗಳಾಗಲೀ, ಜಗತ್ತಿನ ಪ್ರಕಾರಗಳಾಗಲೀ, ಎಲ್ಲಿಲ್ಲವೋ ಅಂತಹ ಪರಮಾತ್ಮವಸ್ತುವಿನಲ್ಲಿ ಲೀನನಾಗು. ॥೩೩॥

ನ ಯತ್ರ ಬೋಧಮುತ್ಪನ್ನಂ ನ ಯತ್ರ ಜಗತಾಂ ಭ್ರಮಃ ।
ನ ಯತ್ರ ಕಾರಣಾಕಾರಂ ತನ್ಮಯೋ ಭವ ಸರ್ವದಾ ॥೩೪॥

ನ ಯತ್ರ ಹಿ ಮನೋರಾಜ್ಯಂ ಯತ್ರೈವ ಪರಮಂ ಸುಖಂ ।
ಯತ್ರೈವ ಶಾಶ್ವತಂ ಸ್ಥಾನಂ ತನ್ಮಯೋ ಭವ ಸರ್ವದಾ ॥೩೫॥

ಯತ್ರೈವ ಕರಣಂ ಶಾಂತಂ ಯತ್ರೈವ ಸಕಲಂ ಸುಖಂ ।
ಯದ್ಗತ್ವಾ ನ ನಿವರ್ತಂತೇ ತನ್ಮಯೋ ಭವ ಸರ್ವದಾ ॥೩೬॥

ಯಜ್ಜ್ಞಾತ್ವಾ ಮುಚ್ಯತೇ ಸರ್ವಂ ಯಜ್ಜ್ಞಾತ್ವಾನ್ಯನ್ನ ವಿದ್ಯತೇ ।
ಯಜ್ಜ್ಞಾತ್ವಾ ನಾನ್ಯವಿಜ್ಞಾನಂ ತನ್ಮಯೋ ಭವ ಸರ್ವದಾ ॥೩೭॥

ಯತ್ರೈವ ದೋಷಂ ನೋತ್ಪನ್ನಂ ಯತ್ರೈವ ಸ್ಥಾನನಿಶ್ಚಲಃ ।
ಯತ್ರೈವ ಜೀವಸಂಘಾತಂ ತನ್ಮಯೋ ಭವ ಸರ್ವದಾ ॥೩೮॥

---

ಜ್ಞಾನವುದಯಿಸಿದೆಂದಾಗಲೀ, ಜಗತ್ತಿನ ಭ್ರಮೆಯಾಗಲೀ, ಜಗತ್ತಿಗೆ ಇದು ಕಾರಣವೆಂಬ ಕಲ್ಪನೆಯಾಗಲೀ ಎಲ್ಲಿಲ್ಲವೋ ಅಂತಹ ವಸ್ತುವಿನ ಸ್ವರೂಪನಾಗು. ॥೩೪॥

ಮನೋರಾಜ್ಯವು ಎಲ್ಲಿಲ್ಲವೋ, ಪರಮಸುಖವು ಎಲ್ಲಿಮಾತ್ರವಿರುವುದೋ ಅಂತಹ ಪರಮಾತ್ಮವಸ್ತುವಿನಲ್ಲಿ ಅಭಿನ್ನನಾಗು. ॥೩೫॥

ಇಂದ್ರಿಯಾದಿಗಳಿಗೆ ವಿಷಯವಲ್ಲದ ಸಕಲಸುಖಗಳಿಗೆ ನೆಲೆಯಾದ, ಪಡೆದವರು ಹಿಂದಿರುಗದಿರುವಂತಹ ಪರವಸ್ತುವಿನಲ್ಲಿ ತನ್ಮಯನಾಗು. ॥೩೬॥

ಯಾವುದನ್ನು ತಿಳಿದಮಾತ್ರದಿಂದ ಮುಕ್ತಿಯು ಲಭಿಸುವುದೋ, ಯಾವುದನ್ನು ತಿಳಿದಮೇಲೆ ಜಗತ್ತಾವುದೂ ಇಲ್ಲವೋ, ಯಾವುದನ್ನು ತಿಳಿದಮೇಲೆ ಇನ್ನಾವುದನ್ನೂ ತಿಳಿಯಬೇಕಾಗಿಲ್ಲವೋ ಅಂತಹ ಪರಮವಸ್ತುವಿನಲ್ಲಿ ಲೀನನಾಗು. ॥೩೭॥

ಉತ್ಪತ್ತಿ ಮೊದಲಾದ ವಿಕಾರಗಳು ಎಲ್ಲಿಲ್ಲವೋ, ಸ್ಥಿರವಾದ ಸ್ಥಾನವು ಯಾವುದೊಂದೇ ಇರುವುದೋ, ಜೀವಸಮೂಹವೆಲ್ಲಾ ಎಲ್ಲಿ ಐಕ್ಯವಾಗಿರುವುದೋ ಅಂತಹ ಪರಮಾತ್ಮವಸ್ತುವಿನಲ್ಲಿ ಲೀನನಾಗು. ॥೩೮॥

ಯತ್ರೈವ ನಿತ್ಯತೃಪ್ತಾತ್ಮಾ ಯತ್ರೈವಾನಂದನಿಶ್ಚಲಃ ।
ಯತ್ರೈವ ನಿಶ್ಚಲಂ ಶಾಂತಂ ತನ್ಮಯೋ ಭವ ಸರ್ವದಾ ॥೩೯॥

ಯತ್ರೈವ ಸರ್ವಸೌಖ್ಯಂ ಚ ಯತ್ರೈವ ಸ ನಿರೂಪಣಂ ।
ಯತ್ರೈವ ನಿಶ್ಚಯಾಕಾರಂ ತನ್ಮಯೋ ಭವ ಸರ್ವದಾ ॥೪೦॥

ಸ ಯತ್ರಾಹಂ ನಯತ್ರತ್ವಂ ನಯತ್ರತ್ವಂ ಸ್ವಯಂ ಸ್ವಯಂ ।
ಯತ್ರೈವ ನಿಶ್ಚಯಂ ಶಾಂತಂ ತನ್ಮಯೋ ಭವ ಸರ್ವದಾ ॥೪೧॥

ಯತ್ರೈವ ಮೋದತೇ ನಿತ್ಯಂ ಯತ್ರೈವ ಸುಖಮೇಧತೇ ।
ಯತ್ರ ದುಃಖಭಯಂ ನಾಸ್ತಿ ತನ್ಮಯೋ ಭವ ಸರ್ವದಾ ॥೪೨॥

ಯತ್ರೈವ ಚಿನ್ಮಯಾಕಾರಂ ಯತ್ರೈವಾನಂದಸಾಗರಂ ।
ಯತ್ರೈವ ಪರಮಂ ಸಾಕ್ಷಾತ್ ತನ್ಮಯೋ ಭವ ಸರ್ವದಾ ॥೪೩॥

---

ಯಾವುದು ನಿತ್ಯತೃಪ್ತಸ್ವರೂಪವೋ, ಯಾವುದು ಆನಂದಸ್ವರೂಪವೋ, ಯಾವುದು ಶಾಂತಮೂರ್ತಿಯೋ ಅಂತಹ ವಸ್ತುವಿನಲ್ಲಿ ಲೀನನಾಗು. ॥೩೯॥

ಸರ್ವಸೌಖ್ಯವೂ ಎಲ್ಲಿ ಮಾತ್ರವಿರುವುದೋ, ನಿಶ್ಚಯ ಸ್ವರೂಪವು ಎಲ್ಲಿ ಮಾತ್ರ ಕಾಣುವುದೋ ಅಂತಹ ವಸ್ತುವಿನ ಸ್ವರೂಪನಾಗು. ॥೪೦॥

ನಾನು-ನೀನು ಎಂಬ ಭೇದಗಳಾಗಲೀ, ನಾನೇ ನಾನು ಎಂಬ ಅಹಂಕಾರವಾಗಲೀ, ಎಲ್ಲಿಲ್ಲವೋ ಎಲ್ಲಿ ಸೋಹಂ ಎಂಬ ನಿಶ್ಚಯವಿರುವುದೋ, ಅಂತಹ ಪರಮಾತ್ಮವಸ್ತುವಿನಲ್ಲಿ ಲೀನನಾಗು. ॥೪೧॥

ಮುಕ್ತನು ಎಲ್ಲಿ ನಿತ್ಯವೂ ವಿಹರಿಸುವನೋ, ಎಲ್ಲಿ ಮಾತ್ರ ನಿತ್ಯಸುಖವನ್ನು ಪಡೆಯುವನೋ, ದುಃಖಭಯವು ಎಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ಲೀನನಾಗು. ॥೪೨॥

ಯಾವುದು ಚೈತನ್ಯಸ್ವರೂಪವೂ ಆನಂದಸಾಗರವೂ ಸಾಕ್ಷಾತ್ ಪರಮಾತ್ಮವಸ್ತುವೂ ಆಗಿದೆಯೋ ಅಂತಹ ಬ್ರಹ್ಮವಸ್ತುವಿನಲ್ಲಿ ನಿರತನಾಗು. ॥೪೩॥

ಯತ್ರೈವ ಸ್ವಯಮೇವಾತ್ರ ಸ್ವಯಮೇವ ತದೇವ ಹಿ ।
ಸ್ವಸ್ಯಾತ್ಮನೋಕ್ತಭೇದೋ ನ ತನ್ಮಯೋ ಭವ ಸರ್ವದಾ ॥೪೪॥

ಯತ್ರೈವ ಪರಮಾನಂದಂ ಸ್ವಯಮೇವ ಸುಖಂ ಪರಂ ।
ಯತ್ರೈವಾಭೇದಕಲನಂ ತನ್ಮಯೋ ಭವ ಸರ್ವದಾ ॥೪೫॥

ನ ಯತ್ರ ಚಾಣುಮಾತ್ರಂ ವಾ ಯತ್ರ ನ ಮನಸೋ ಮಲಂ ।
ನ ಯತ್ರ ಚ ದದಾಮ್ಯೇವ ತನ್ಮಯೋ ಭವ ಸರ್ವದಾ ॥೪೬॥

ಯತ್ರ ಚಿತ್ತಂ ಮೃತಂ ದೇಹಂ ಮನೋಮರಣಮಾತ್ಮನಃ ।
ಯತ್ರ ಸ್ಮೃತಿರಯಂ ನಾಸ್ತಿ ತನ್ಮಯೋ ಭವ ಸರ್ವದಾ ॥೪೭॥

ಯತ್ರೈವಾಹಂ ಮೃತೋನೂನಂ ಯತ್ರ ಕಾಮೋ ಲಯಂಗತಃ ।
ಯತ್ರೈವ ಪರಮಾನಂದಂ ತನ್ಮಯೋ ಭವ ಸರ್ವದಾ ॥೪೮॥

---

ಎಲ್ಲಿ ತಾನೇ ತಾನಾಗಿರಬಹುದೋ, ಎಲ್ಲಿ ತಾನು ತನ್ನದು-ಎಂಬ ಭೇದವು ಇಲ್ಲವೋ ಅಂತಹ ವಸ್ತುವಿನಲ್ಲಿ ಲೀನನಾಗು. ॥೪೪॥

ಎಲ್ಲಿ ಪರಮಾನಂದವಿರುವುದೋ, ತಾನೇ ಪರಮಸುಖವು ಎಲ್ಲಿ ಮಾತ್ರವೋ, ಭೇದಕಲ್ಪನೆಯೇ ಎಲ್ಲಿಲ್ಲವೋ ಅಂತಹ ವಸ್ತುವಿನಲ್ಲಿ ಲೀನನಾಗು. ॥೪೫॥

ಚಿಕ್ಕತನವಾಗಲೀ, ಮನಸ್ಸಿನ ದೋಷಗಳಾಗಲೀ, ಕೊಡುವುದು ತೆಗೆದು ಕೊಳ್ಳುವುದು-ಎಂಬ ಭೇದವಾಗಲೀ ಎಲ್ಲಿಲ್ಲವೋ ಅಂತಹ ವಸ್ತುವಿನ ಸ್ವರೂಪ ನಾಗು. ॥೪೬॥

ಚಿತ್ತ, ಮೃತದೇಹ, ಮನಸ್ಸು, ಮರಣ, ಸ್ಮೃತಿ-ಗಳೆನ್ನುವುವು ಎಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ಯಾವಾಗಲೂ ಲೀನನಾಗಿರು. ॥೪೭॥

ಅಹಂಕಾರವಾಗಲೀ ಕಾಮವಾಗಲೀ ಎಲ್ಲಿಲ್ಲವೋ, ಪರಮಾನಂದವು ಎಲ್ಲಿ ಮಾತ್ರವೇ ಇರುವುದೋ ಅಂತಹ ಪರವಸ್ತುವಿನಲ್ಲಿ ಸದಾ ನಿರತನಾಗಿರು. ॥೪೮॥

ಯತ್ರ ದೇವಾಸ್ತ್ರಯೋ ಲೀನಂ ಯತ್ರದೇಹಾದಯೋ ಮೃತಾಃ ।
ನ ಯತ್ರ ವ್ಯವಹಾರೋಽಸ್ತಿ ತನ್ಮಯೋ ಭವ ಸರ್ವದಾ ॥೪೯॥

ಯತ್ರ ಮಗ್ನೋ ನಿರಾಯಾತಂ ಯತ್ರ ಮಗ್ನೋ ನ ಪಶ್ಯತಿ ।
ಯತ್ರ ಮಗ್ನೋ ನ ಜನ್ಮಾದಿ ತನ್ಮಯೋ ಭವ ಸರ್ವದಾ ॥೫೦॥

ಯತ್ರ ಮಗ್ನೋ ನ ಚಾ ಭಾತಿ ಯತ್ರ ಜಾಗ್ರನ್ನ ವಿದ್ಯತೇ ।
ಯತ್ರೈವ ಮೋಹಮರಣಂ ತನ್ಮಯೋ ಭವ ಸರ್ವದಾ ॥೫೧॥

ಯತ್ರೈವ ಕಾಲಮರಣಂ ಯತ್ರ ಯೋಗಲಯಂಗತಃ ।
ಯತ್ರ ಸತ್ಸಂಗತಿರ್ನಷ್ಟಾ ತನ್ಮಯೋ ಭವ ಸರ್ವದಾ ॥೫೨॥

ಯತ್ರ ವಿಘ್ನಾತಿಮರಣಂ ಯತ್ರ ವಿಶ್ವಂ ಲಯಂಗತಂ ।
ಯತ್ರ ಭ್ರಾಂತಿನಿವೃತ್ತಿತ್ವಂ ತನ್ಮಯೋ ಭವ ಸರ್ವದಾ ॥೫೩॥

---

ತ್ರಿಮೂರ್ತಿಗಳೆಂಬ ದೇವಭೇದವಾಗಲೀ, ಮೂರುದೇಹಭೇದಗಳಾಗಲೀ, ವ್ಯವಹಾರವಾಗಲೀ ಎಲ್ಲಿಲ್ಲವೋ ಆ ಬ್ರಹ್ಮವಸ್ತುವಿನಲ್ಲಿ ಸದಾ ನಿರತನಾಗು. ॥೪೯॥

ಎಲ್ಲಿ ಲೀನನಾದವನಿಗೆ ಪುನಃ ಸಂಸಾರಪ್ರಾಪ್ತಿಯಿಲ್ಲವೋ, ಅನಿತ್ಯವಸ್ತು ದರ್ಶನವಿಲ್ಲವೋ, ಜನನಾದಿವಿಕಾರಗಳಿಲ್ಲವೋ ಅಂತಹ ಪರಮಾತ್ಮವಸ್ತುವಿನಲ್ಲಿ ಯಾವಾಗಲೂ ನಿರತನಾಗಿರು. ॥೫೦॥

ಎಲ್ಲಿ ಲೀನನಾದವನು ಬೇರೆಯಾಗಿ ತೋರುವುದಿಲ್ಲವೋ, ಜಾಗ್ರದವಸ್ಥೆಯೆಂಬುದೆಲ್ಲಿಲ್ಲವೋ, ಮೋಹವೆಂಬುದಕ್ಕೆ ಎಲ್ಲಿ ಮರಣವೋ, ಅಂತಹ ಪರವಸ್ತುವಿನಲ್ಲಿ ನಿರತನಾಗು. ॥೫೧॥

ಕಾಲವಾಗಲೀ, ಯೋಗವಾಗಲೀ, ಸಜ್ಜನಸಹವಾಸವೆಂಬುದಾಗಲೀ ಎಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ಲೀನನಾಗು. ॥೫೨॥

ವಿಘ್ನವೆಂಬುದು ಎಲ್ಲಿಲ್ಲವೋ, ಜಗತ್ತೆಲ್ಲವೂ ಎಲ್ಲಿ ಲೀನವಾಗುವುದೋ, ಭ್ರಾಂತಿಯೆಂಬುದೆಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ಲೀನನಾಗು. ॥೫೩॥

ಯತ್ರ ಪ್ರಾಣಾದಯೋ ನಷ್ಟಾ ಯತ್ರ ದೇಹಾಸ್ತ್ರಯೋಮೃತಾಃ ।
ಯತ್ರ ಮಾನಾವಮಾನಂ ಸ ತನ್ಮಯೋ ಭವ ಸರ್ವದಾ ॥೫೪॥

ಯತ್ರೈವ ಬ್ರಹ್ಮಣೋರೂಪಂ ಯತ್ರೈವಾನಂದಮಾತ್ರಕಂ ।
ಯತ್ರೈವ ಪರಮಾನಂದಂ ತನ್ಮಯೋ ಭವ ಸರ್ವದಾ ॥೫೫॥

ಯತ್ರ ವಿಶ್ವಂ ಕ್ವಚಿನ್ನಾಸ್ತಿ ಯತ್ರ ನಾಸ್ತಿ ಮನೋಜಗತ್ ।
ಯತ್ರಾಂತಃಕರಣಂ ನಾಸ್ತಿ ತನ್ಮಯೋ ಭವ ಸರ್ವದಾ ॥೫೬॥

ಯತ್ರೈವ ಸುಖಮಾತ್ರಂ ಚ ಯತ್ರೈವಾನಂದಮಾತ್ರಕಂ ।
ಯತ್ರೈವ ಪರಮಾನಂದಂ ತನ್ಮಯೋ ಭವ ಸರ್ವದಾ ॥೫೭॥

ಯತ್ರಸನ್ಮಾತ್ರಚೈತನ್ಯಂ ಯತ್ರ ಚಿನ್ಮಾತ್ರಮಾತ್ರಕಂ ।
ಯತ್ರಾನಂದಮಯಂ ಭಾತಿ ತನ್ಮಯೋ ಭವ ಸರ್ವದಾ ॥೫೮॥

---

ಪ್ರಾಣಾದಿಗಳು ಎಲ್ಲಿ ಲಯವನ್ನೈದುವುವೋ, ಕಾರಣಸೂಕ್ಷ್ಮಸ್ಥೂಲದೇಹಗಳು ಎಲ್ಲಿ ವಿಲೀನವಾಗುವವೋ, ಮಾನಾವಮಾನಗಳ ಭೇದವು ಎಲ್ಲಿಲ್ಲವೋ ಅಂತಹ ಪರವಸ್ತುವಿನಲ್ಲಿ ಸದಾ ನೀನು ನಿರತನಾಗಿರು. ॥೫೪॥

ಎಲ್ಲಿ ಬ್ರಹ್ಮವಸ್ತುವಿನ ರೂಪವು ಕೇವಲಾನಂದವೋ, ಪರಮಾನಂದವು ಎಲ್ಲಿ ಮಾತ್ರವೇ ಇರುವುದೋ ಅಂತಹ ಪರವಸ್ತುವಿನಲ್ಲಿ ಲೀನನಾಗು. ॥೫೫॥

ಎಲ್ಲಿ ಯಾವಾಗಲೂ ಜಗತ್ತೆಂಬುದಿಲ್ಲವೋ, ಮನಸ್ಸಾಗಲೀ ಅಂತಃಕರಣವಾಗಲೀ ಎಲ್ಲಿಲ್ಲವೋ, ಅಂತಹ ಪರವಸ್ತುವಿನಲ್ಲಿ ಸದಾ ಐಕ್ಯನಾಗು. ॥೫೬॥

ಎಲ್ಲಿ ಸುಖವೇ ಮಾತ್ರವಾಗಿಯೂ, ಆನಂದವೇ ಮುಖ್ಯವಾಗಿಯೂ, ಪರಮಾನಂದವು ಮಾತ್ರವೇ ಇರುವುದೋ ಅಂತಹ ವಸ್ತುವಿನಲ್ಲಿ ನೀನು ಸದಾ ನಿರತನಾಗಿರು. ॥೫೭॥

ಎಲ್ಲಿ ಸತ್ಯಜ್ಞಾನಾನಂದಗಳು ಸ್ವರೂಪವಾಗಿ ಪರಿಪೂರ್ಣತೆಯಿಂದ ಪ್ರಕಾಶಿಸುವುವೋ ಅಂತಹ ಪರವಸ್ತುವಿನಲ್ಲಿ ವಿಲೀನನಾಗು. ॥೫೮॥

ಯತ್ರ ಸಾಕ್ಷಾತ್ಪರಂ ಬ್ರಹ್ಮ ಯತ್ರ ಸಾಕ್ಷಾತ್ಸ್ವಯಂ ಪರಂ ।
ಯತ್ರ ಶಾಂತಂ ಪರಂ ಲಕ್ಷ್ಯಂ ತನ್ಮಯೋ ಭವ ಸರ್ವದಾ ॥೫೯॥

ಯತ್ರ ಸಾಕ್ಷಾದಖಂಡಾರ್ಥಂ ಯತ್ರ ಸಾಕ್ಷಾತ್ಪರಾಯಣಂ ।
ಯತ್ರ ನಾಶಾದಿಕಂ ನಾಸ್ತಿ ತನ್ಮಯೋ ಭವ ಸರ್ವದಾ ॥೬೦॥

ಯತ್ರ ಸಾಕ್ಷಾತ್ಪರಂ ತತ್ವಂ ಯತ್ರ ಸಾಕ್ಷಾತ್ ಸ್ವಯಂ ಮಹತ್ ।
ಯತ್ರ ಸಾಕ್ಷಾತ್ತು ವಿಜ್ಞಾನಂ ತನ್ಮಯೋ ಭವ ಸರ್ವದಾ ॥೬೧॥

ಯತ್ರ ಸಾಕ್ಷಾದ್ಗುಣಾತೀತಂ ಯತ್ರ ಸಾಕ್ಷಾದ್ಧಿನಿರ್ಮಲಂ ।
ಯತ್ರ ಸಾಕ್ಷಾತ್ಸದಾ ಶುದ್ಧಂ ತನ್ಮಯೋ ಭವ ಸರ್ವದಾ ॥೬೨॥

ಯತ್ರ ಸಾಕ್ಷಾತ್ ಸ್ವಯಂ ಮಾತ್ರಂ ಯತ್ರ ಸಾಕ್ಷಾತ್ ಸ್ವಯಂ ಸ್ವಯಂ ।
ಯತ್ರ ಸಾಕ್ಷಾನ್ಮಹಾನಾತ್ಮಾ ತನ್ಮಯೋ ಭವ ಸರ್ವದಾ ॥೬೩॥

---

ಯಾವುದು ಸಾಕ್ಷಾತ್ ಪರಬ್ರಹ್ಮವಸ್ತುವೋ, ಎಲ್ಲಿ ಮಗ್ನನಾದರೆ ಆ ಸ್ವರೂಪವೇ ತನ್ನ ಸ್ವರೂಪವಾಗುವುದೋ, ಶಾಂತಮೂರ್ತಿಯಾದ ಯಾವ ವಸ್ತುವನ್ನೇ ಎಲ್ಲ ಸಾಧಕರೂ ಸಾಧಿಸಬಯಸುವರೋ ಅಂತಹ ಪರವಸ್ತುವಿನಲ್ಲಿ ಮಗ್ನನಾಗು. ॥೫೯॥

ಯಾವುದು ಅಖಂಡವಾದ ಅಂದರೆ ಪರಿಪೂರ್ಣವಾದ ವಸ್ತುವೋ, ಎಲ್ಲರಿಗೂ ಯಾವುದುಮಾತ್ರವೇ ಗತಿಯೋ, ಮರಣನಾಶಾದಿಗಳು ಯಾವುದಕ್ಕಿಲ್ಲವೋ, ಅಂತಹ ಪರಮಾತ್ಮವಸ್ತುವಿನಲ್ಲಿ ಮಗ್ನನಾಗು. ॥೬೦॥

ಎಲ್ಲಿ ಸಾಕ್ಷಾತ್ತಾಗಿ ಪರತತ್ವವು ಗೋಚರಿಸುವುದೋ, ಎಲ್ಲಿ ಸಾಕ್ಷಾತ್ತಾಗಿ ನಮ್ಮ ಮಹತ್ತಾದ ಸ್ವರೂಪವು ಕಂಡುಬರುವುದೋ ಅಂತಹ ಪರಮಾತ್ಮವಸ್ತುವಿನಲ್ಲಿ ನೀನು ಸದಾ ಮಗ್ನನಾಗಿರು. ॥೬೧॥

ಗುಣಗಳಿಲ್ಲದೆಯೇ ನಿರ್ಮಲವಾಗಿ ನಿರ್ಗುಣವಾಗಿ ಯಾವ ಪರಮಾತ್ಮವಸ್ತುವಿದೆಯೋ ಆ ವಸ್ತುವಿನಲ್ಲಿ ಮಗ್ನನಾಗು. ॥೬೨॥

ಎಲ್ಲಿ ನಮ್ಮ ಸ್ವರೂಪವು ಮಾತ್ರ ಸಾಕ್ಷಾತ್ತಾಗಿ ಪ್ರಕಾಶಿಸುವುದೋ ಎಲ್ಲಿ ನಮ್ಮ ಪರಮಾತ್ಮತೆಯು ಆವಿರ್ಭವಿಸುವುದೋ ಅಂತಹ ಪರವಸ್ತುವಿನಲ್ಲಿ ನೀನು ಸದಾ ಮಗ್ನನಾಗಿರು. ॥೬೩॥

ಯತ್ರ ಸಾಕ್ಷಾನ್ಮಹಾನಾತ್ಮಾ ಯತ್ರ ಸಾಕ್ಷಾತ್ಸುಖಾತ್ಸುಖಂ ।
ಯತ್ರೈವ ಜ್ಞಾನವಿಜ್ಞಾನಂ ತನ್ಮಯೋ ಭವ ಸರ್ವದಾ ॥೬೪॥

ಯತ್ರೈವ ಹಿ ಸ್ವಯಂ ಜ್ಯೋತಿರ್ಯತ್ರೈವ ಸ್ವಯಮದ್ವಯಂ ।
ಯತ್ರೈವ ಪರಮಾನಂದಂ ತನ್ಮಯೋ ಭವ ಸರ್ವದಾ ॥೬೫॥

ಏವಂ ತನ್ಮಯಭಾವೋಕ್ತಂ ಏವಂ ನಿತ್ಯಮನಿತ್ಯಶಃ ।
ಬ್ರಹ್ಮಾಹಂ ಸಚ್ಚಿದಾನಂದಮಖಂಡೋಽಹಂ ಸದಾಸುಖಂ ॥೬೬॥

ಬ್ರಹ್ಮವಿಜ್ಞಾನಮಾತ್ರೋಽಹಂ ಸಂಶಾಂತಂ ಪರಮೋಸ್ಮ್ಯಹಂ ।
ಚಿದಹಂ ಚಿತ್ತಹೀನೋಽಹಂ ನಾಹಂ ಸೋಽಹಂ ಭವಾಮ್ಯಹಂ ॥೬೭॥

ತದಹಂ ಚಿದಹಂ ಸೋಽಹಂ ನಿರ್ಮಲೋಽಹಮಹಂ ಪರಂ ।
ಪರೋಽಹಂ ಪರಮೋಽಹಂ ವೈ ಸರ್ವಂ ತ್ಯಜ್ಯ ಸುಖೀಭವ ॥೬೮॥

---

ಸುಖಸ್ವರೂಪವಾದ ಜ್ಞಾನಮೂರ್ತಿಯಾದ ಸರ್ವವ್ಯಾಪಕವಾದ ನಮ್ಮ ಆತ್ಮಸ್ವರೂಪವು ಎಲ್ಲಿ ಗೋಚರಿಸುವುದೋ ಅಂತಹ ಪರವಸ್ತುವಿನಲ್ಲಿ ಮಗ್ನನಾಗು. ॥೬೪॥

ಸ್ವಯಂಪ್ರಕಾಶವೂ, ಅದ್ವಿತೀಯತೆಯೂ ಪರಮಾನಂದವೂ ಸಹ ಎಲ್ಲಿ ಮಾತ್ರವೇ ಗೋಚರಿಸುವವೋ ಅಂತಹ ಪರವಸ್ತುವಿನಲ್ಲಿ ಮಗ್ನನಾಗು. ॥೬೫॥

ಈ ರೀತಿಯಾಗಿ ತನ್ಮಯಭಾವವನ್ನು ನಿನಗೆ ವಿವರಿಸಿ ಹೇಳಿರುವೆನು. ಸತ್ಯ ಜ್ಞಾನಾನಂದಸ್ವರೂಪನಾದ ಪರಿಪೂರ್ಣನಾದ ಬ್ರಹ್ಮನು ನಾನು. ॥೬೬॥

ಬ್ರಹ್ಮಜ್ಞಾನವೇ ನಾನು, ಪರಮಾತ್ಮನು ನಾನು, ಚೈತನ್ಯವೂ ಚಿತ್ತವು ನನಗಿಲ್ಲ. ನಾನೇ ಪರಮಾತ್ಮನು, ಪರಮಾತ್ಮನು ನಾನೇ. ॥೬೭॥

ಆ ಬ್ರಹ್ಮವಸ್ತುವು ನಾನು, ಚೈತನ್ಯವು ನಾನು, ಆ ಪರಮಾತ್ಮನು ನಾನು, ನಾನು ನಿರ್ಮಲನು, ಸರ್ವೋತ್ತಮನು, ಎಂದು ನಿತ್ಯವೂ ಭಾವಿಸುತ್ತಾ ಆತ್ಮಸುಖವನ್ನನುಭವಿಸು. ॥೬೮॥

ಇದಂ ಸರ್ವಂ ಚಿತ್ತಶೇಷಂ ಶುದ್ಧತ್ವಂ ಚ ಮಲತ್ವಕಂ ।
ಏವಂ ಸರ್ವಂ ಪರಿತ್ಯಜ್ಯ ವಿಸ್ಮೃತ್ವಾ ಶುದ್ಧಕಾಷ್ಠವತ್ ॥೬೯॥

ಪ್ರೇತವದ್ದೇಹಂ ಸಂತ್ಯಜ್ಯ ಕಾಷ್ಠವಲ್ಲೋಷ್ಟವತ್ಸದಾ ।
ಸ್ಮರಣಂ ಚ ಪರಿತ್ಯಜ್ಯ ಬ್ರಹ್ಮಭಾವಪರೋ ಭವ ॥೭೦॥

ಏತತ್ಪ್ರಕರಣಂ ಯಸ್ತು ಶೃಣೋತಿ ಸಕೃದಸ್ತು ವಾ ।
ಮಹಾಪಾತಕಯುಕ್ತೋಽಪಿ ಸರ್ವಂ ತ್ಯಕ್ತ್ವಾ ಪರಂ ಗತಃ ॥೭೧॥

ಅಂಗಾವಬದ್ಧಾಭಿರುಪಾಸನಾಭಿಃ
ವದಂತಿ ವೇದಾಃ ಕಿಲ ತ್ವಾಮಸಂಗಂ ।
ಸಮಸ್ತಹೃತ್ಕ್ಲೇಶವಿಶೇಷಸಂಗಂ
ಭೂಮಾನಮಾತ್ಮಾನಮಖಂಡರೂಪಂ ॥೭೨॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ಏಕೋನತ್ರಿಂಶಃ ಅಧ್ಯಾಯಃ

---

ಈ ಜಗತ್ತೆಲ್ಲವೂ ಮನಸ್ಸಿನ ಭ್ರಾಂತಿಕಲ್ಪನೆಯು, ಅಶುದ್ಧವಾದುದು ಎಂದು ಜಗತ್ತನ್ನೂ ದೇಹವನ್ನೂ ಅಸಾರವೆಂದು ಬಿಟ್ಟುಬಿಟ್ಟು ಅವುಗಳ ಸ್ಮರಣೆಯನ್ನೂ ಮಾಡದೆ ಬ್ರಹ್ಮಭಾವವನ್ನು ಚಿಂತಿಸು. ॥೬೯॥

ನಿರ್ಜೀವವಾದ ದೇಹವನ್ನು ಕಟ್ಟಿಗೆಯಂತೆಯೂ ಮಣ್ಣುಹೆಂಟೆಯಂತೆಯೂ ದೂರಮಾಡಿ, ಬ್ರಹ್ಮಭಾವವನ್ನು ಹೊಂದಲು ಪ್ರಯತ್ನಿಸು. ॥೭೦॥

ಈ ಪ್ರಕರಣವನ್ನು ಒಂದುಬಾರಿ ಕೇಳಿದರೂ ಸಾಕು. ಹಾಗೆ ಕೇಳಿದವನು ಮಹಾಪಾಪಿಯಾದರೂ ವೈರಾಗ್ಯಶಾಲಿಯಾಗಿ ಪರಮವಸ್ತುವಿನಲ್ಲೈಕ್ಯನಾಗುವನು. ॥೭೧॥

ಓ ಪರಮೇಶ್ವರ, ವೇದಗಳು ನೀನು ಎಲ್ಲರ ಹೃದಯದಲ್ಲಿ ನೆಲಸಿರುವನೆಂದೂ ಆದರಾ ಜೀವಿಗಳ ಪಾಪಪುಣ್ಯಸಂಬಂಧವಿಲ್ಲದವನೆಂದೂ, ವ್ಯಾಪಕನೆಂದೂ, ಸರ್ವರ ಆತ್ಮನೆಂದೂ, ಪರಿಪೂರ್ಣನೆಂದೂ ಹೇಳಿ ನಿನ್ನ ಸ್ವರೂಪವನ್ನು ವರ್ಣಿಸಿ ಸಾಂಗೋಪಾಸನೆಗಳಿಂದ ನಿನ್ನನ್ನು ಸೇವಿಸಬಹುದೆಂದೂ ಹೇಳುವುವು. ಇಂತಹ ನಿನಗೆ ನಮಸ್ಕಾರವು. ॥೭೨॥

ಇಲ್ಲಿಗೆ ಶ್ರೀಶಿವರಹಸ್ಯದ ಷಷ್ಠಾಂಶದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ಪರಂ ಬ್ರಹ್ಮಮಾತ್ರಂ ಜಗತ್ಸತ್ಯಾಗಪೂರ್ವಕಂ ।
ಸಕೃಚ್ಛ್ರವಣಮಾತ್ರೇಣ ಬ್ರಹ್ಮಭಾವಂ ಪರಂ ಲಭೇತ್ ॥೧॥

ಬ್ರಹ್ಮ ಬ್ರಹ್ಮಪರಂ ಮಾತ್ರಂ ನಿರ್ಗುಣಂ ನಿತ್ಯನಿರ್ಮಲಂ ।
ಶಾಶ್ವತಂ ಸಮಮತ್ಯಂತಂ ಬ್ರಹ್ಮಣೋಽನ್ಯನ್ನ ವಿದ್ಯತೇ ॥೨॥

ಅಹಂ ಸತ್ಯಃ ಪರಾನಂದಃ ಶುದ್ಧೋ ನಿತ್ಯೋ ನಿರಂಜನಃ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೩॥

---

## ಮೂವತ್ತನೆಯ ಅಧ್ಯಾಯವು

ಎಲೈ ನಿದಾಘಮುನಿಯೇ, ಎಲ್ಲವೂ! ಬ್ರಹ್ಮವಸ್ತುವು, ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ—ಎಂಬ ವಿಷಯವನ್ನು ಈಗ ಹೇಳುವೆನು, ಇದನ್ನು ಒಂದು ಬಾರಿ ಕೇಳಿದವನೂ ಬ್ರಹ್ಮರೂಪನಾಗುವನು. ॥೧॥

ಬ್ರಹ್ಮವಸ್ತುವು ನಿರ್ಗುಣವಾದುದು, ನಿತ್ಯವಾದುದು, ನಿರ್ಮಲವಾದುದು, ಅದ್ವಿತೀಯವಾದುದು, ಬ್ರಹ್ಮವಸ್ತುವಿನ ಹೊರತು ಬೇರೆ ಏನೂ ಇಲ್ಲ. ॥೨॥

ನಾನು ಸತ್ಯನು, ಆನಂದಸ್ವರೂಪನು, ನಿರ್ಮಲನು, ನಿರ್ಗುಣನು, ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಆ ಬ್ರಹ್ಮವಸ್ತುವೇ ನಾನು, ಇದು ನಿಶ್ಚಯವು. ॥೩॥

ಅಖಂಡೈಕರಸೈವಾಸ್ಮಿ ಪರಿಪೂರ್ಣೋಽಸ್ಮಿ ಸರ್ವದಾ ।
ಬ್ರಹ್ಮೈವ ಸರ್ವಂ ನಾನ್ಯೋಽಸ್ತಿ ತದ್ಬ್ರಹ್ಮಾಹಂ ನ ಸಂಶಯಃ ॥೪॥

ಸರ್ವದಾ ಕೇವಲಾತ್ಮಾಹಂ ಸರ್ವಂ ಬ್ರಹ್ಮೇತಿ ನಿತ್ಯಶಃ ।
ಆನಂದರೂಪಮೇವಾಹಂ ನಾಸ್ತ್ಯತ್ಕಿಂಚಿಚ್ಚ ಶಾಶ್ವತಂ ॥೫॥

ಶುದ್ಧಾನಂದಸ್ವರೂಪೋಽಹಂ ಶುದ್ಧವಿಜ್ಞಾನಮಾತ್ಮನಃ ।
ಏಕಾಕಾರಸ್ವರೂಪೋಽಹಮನೇಕಸತ್ತ್ವಾವಿವರ್ಜಿತಃ ॥೬॥

ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ।
ಅಂತರಜ್ಞಾನಶುದ್ಧೋಽಹಮಹಮೇವ ಪರಾಯಣಂ ॥೭॥

ಅಹಮೇಕತ್ವಹೀನೋಽಹಂ ಏಕತ್ವಂ ಚ ನ ವಿದ್ಯತೇ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೮॥

---

ಪರಿಪೂರ್ಣವಾದ ಏಕಸ್ವರೂಪನು ನಾನು, ಆನಂದಸ್ವರೂಪನು ನಾನು, ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವಿನ ಹೊರತು ಬೇರಾವ ವಸ್ತುವೂ ಇಲ್ಲ. ಆ ಬ್ರಹ್ಮವಸ್ತುವೇ ನಾನು, ಇದು ನಿಶ್ಚಯವು. ॥೪॥

ಯಾವಾಗಲೂ ನಾನು ಅದ್ವಿತೀಯಸ್ವರೂಪನು, ಆನಂದಮೂರ್ತಿಯು, ಬ್ರಹ್ಮವಸ್ತುವು, ನನ್ನ ಹೊರತು ನಿತ್ಯವಾದ ವಸ್ತುವು ಯಾವುದೂ ಇಲ್ಲ. ॥೫॥

ಶುದ್ಧವಾದ ಆನಂದಸ್ವರೂಪನು ನಾನು, ಶುದ್ಧಜ್ಞಾನಸ್ವರೂಪನು ನಾನು, ಒಂದೇ ಬಗೆಯಾದ ಅದ್ವಿತೀಯಸ್ವರೂಪನು ನಾನು, ನಾನೇ ಬ್ರಹ್ಮವಸ್ತುವು. ॥೬॥

ಅತಿ ರಹಸ್ಯವಾದ ಬ್ರಹ್ಮಜ್ಞಾನವೇ ನಾನು, ನಾನೇ ಎಲ್ಲರಿಗೂ ಗತಿಯು, ಒರ್ವನೇ ಆದರೂ ನನ್ನಲ್ಲಿ ಏಕತ್ವವಿಲ್ಲ. ಏಕತ್ವವೆಂಬ ಸಂಖ್ಯೆಯೇ ಜಗತ್ತಿನಲ್ಲಿಲ್ಲ. ಎಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ಆ ಬ್ರಹ್ಮವಸ್ತುವೇ ನಾನು. ಇದು ನಿಶ್ಚಯ. ॥೮॥

ಸರ್ವಪ್ರಕಾರರೂಪೋಸ್ಮಿ ಸರ್ವ ಇತ್ಯಪಿ ವರ್ಜಿತಃ ।
ನಿರ್ಮಲಜ್ಞಾನರೂಪೋಽಹಂ ಅಹಮೇವ ನ ವಿದ್ಯತೇ ॥೯॥

ಶುದ್ಧಬ್ರಹ್ಮಸ್ವರೂಪೋಽಹಂ ವಿಶುದ್ಧಪರಿವರ್ಜಿತಃ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೧೦॥

ನಿತ್ಯಾನಂದಸ್ವರೂಪೋಽಹಂ ಜ್ಞಾನಾನಂದಮಹಂ ಸದಾ ।
ಸೂಕ್ಷ್ಮಾತ್ಸೂಕ್ಷ್ಮತರೋಽಹಂ ವೈ ಸೂಕ್ಷ್ಮ ಇತ್ಯಪಿ ವರ್ಜಿತಃ ॥೧೧॥

ಅಖಂಡಾನಂದಮಾತ್ರೋಽಹಮಖಂಡಾನಂದವಿಗ್ರಹಃ ।
ಸದಾಽಮೃತಸ್ವರೂಪೋಽಹಂ ಸದಾ ಕೈವಲ್ಯವಿಗ್ರಹಃ ॥೧೨॥

ಬ್ರಹ್ಮಾನಂದಮಿದಂ ಸರ್ವಂ ನಾಸ್ತಿನಾಸ್ತಿ ಕದಾಚನ ।
ಜೀವತ್ವಧರ್ಮಹೀನೋಽಹಂ ಈಶ್ವರತ್ವವಿವರ್ಜಿತಃ ॥೧೩॥

---

ಮಾಯೆಯಿಂದ ನಾನು ಎಲ್ಲ ಬಗೆಯ ರೂಪಗಳನ್ನೂ ಹೊಂದಿರುವೆನು. ಆದರೆ ಅದ್ವಿತೀಯನಾದ ನನಗೆ ವಸ್ತುತಃ ಆ ಅನೇಕ ರೂಪಗಳಿಲ್ಲ. ನಿರ್ಮಲಜ್ಞಾನ ಮೂರ್ತಿಯು ನಾನು, ನಾನು-ಎಂಬ ಅಹಂಕಾರವು ನನ್ನಲ್ಲಿಲ್ಲ. ॥೯॥

ಶುದ್ಧಬ್ರಹ್ಮಸ್ವರೂಪನು ನಾನು, ಆದರೆ ಶುದ್ಧತ್ವವೆಂಬ ಭಾವವು ನನ್ನಲ್ಲಿಲ್ಲ. ಎಲ್ಲವೂ ಬ್ರಹ್ಮವಸ್ತುವೇ ಹೊರತು ಬೇರೆಯಲ್ಲ. ಆ ಬ್ರಹ್ಮವೇ ನಾನು. ॥೧೦॥

ನಿತ್ಯಾನಂದಸ್ವರೂಪನು ನಾನು, ಜ್ಞಾನಾನಂದಸ್ವರೂಪನು ನಾನು, ಸೂಕ್ಷ್ಮವಸ್ತುಗಳಲ್ಲಿ ಅತಿ ಸೂಕ್ಷ್ಮನು ನಾನು, ಆದರೆ ಸೂಕ್ಷ್ಮತೆಯೆಂಬ ಭಾವವು ನನ್ನಲ್ಲಿಲ್ಲ. ॥೧೧॥

ಪರಿಪೂರ್ಣವಾದ ಆನಂದವೊಂದೇ ನನ್ನಲ್ಲಿರುವುದು, ಅಖಂಡಾನಂದವೇ ನನ್ನ ಸ್ವರೂಪವು, ಯಾವಾಗಲೂ ನಾನು ನಿತ್ಯನು, ಯಾವಾಗಲೂ ನಾನು ಮುಕ್ತ ಸ್ವರೂಪನು. ॥೧೨॥

ಈ ಜಗತ್ತೆಲ್ಲವೂ ಆನಂದಮೂರ್ತಿಯಾದ ಬ್ರಹ್ಮವಸ್ತುವೇ, ಬ್ರಹ್ಮವಸ್ತುವಿನ ಹೊರತು ಬೇರೆ ಏನೇನೂ ಇಲ್ಲ, ಆ ಬ್ರಹ್ಮವಸ್ತುವೇ ನಾನು, ಜೀವತ್ವವೆಂಬ ಧರ್ಮ

ವೇದಶಾಸ್ತ್ರಸ್ವರೂಪೋಽಹಂ ಶಾಸ್ತ್ರಸ್ಮರಣಕಾರಣಂ ।
ಜಗತ್ಕಾರಣಕಾರ್ಯಂಚ ಬ್ರಹ್ಮವಿಷ್ಣುಮಹೇಶ್ವರಾಃ ॥೧೪॥

ವಾಚ್ಯವಾಚಕಭೇದಶ್ಚ ಸ್ಥೂಲಸೂಕ್ಷ್ಮಶರೀರಕಂ ।
ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯಾಃ ಪ್ರಾಜ್ಞತೈಜಸವಿಶ್ವಕಾಃ ॥೧೫॥

ಸರ್ವಶಾಂತ್ಯಸ್ವರೂಪೋಽಹಂ ಸರ್ವಾನಂದಮಹಂ ಸದಾ ।
ಅತೀತನಾಮರೂಪಾರ್ಥಃ ಅತೀತಸರ್ವಕಲ್ಪನಃ ॥೧೬॥

ದ್ವೈತಾದ್ವೈತಂ ಸುಖಂ ದುಃಖಂ ಲಾಭಾಲಾಭೌ ಜಯಾಜಯೌ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೧೭॥

ಸಾತ್ವಿಕಂ ರಾಜಸಂ ಭೇದಂ ಸಂಶಯಂ ಹೃದಯಂ ಫಲಂ ।
ದೃಗ್ದೃಷ್ಟಂ ಸರ್ವದ್ರಷ್ಟಾ ಚ ಭೂತಭೌತಿಕದೈವತಂ ॥೧೮॥

---

ವಾಗಲೀ ಈಶ್ವರತ್ವವೆಂಬ ಧರ್ಮವಾಗಲೀ ನನ್ನಲ್ಲಿಲ್ಲ. ಆದರೆ ಜೀವನೂ ನಾನೇ, ಈಶ್ವರನೂ ನಾನೇ. ॥೧೩॥

ವೇದಶಾಸ್ತ್ರಗಳೂ ನಾನು, ಸ್ಮೃತಿಪುರಾಣಗಳೂ ನಾನು, ಅವುಗಳ ಕರ್ತೃವೂ ನಾನು, ಜಗತ್ಕಾರಣವೂ ನಾನು, ಎಲ್ಲ ಕಾರ್ಯಗಳೂ ನಾನು, ಬ್ರಹ್ಮವಿಷ್ಣು-ಮಹೇಶ್ವರರೂ ನಾನೇ, ನನ್ನ ಹೊರತು ಬೇರೆ ಯಾವುದೂ ಇಲ್ಲ. ॥೧೪॥

ಹೇಳುವ ವಿಷಯ, ಹೇಳುವವನು, ಹೇಳುವಿಕೆ—ಈ ಮೂರೂ ನಾನೇ. ಸ್ಥೂಲಸೂಕ್ಷ್ಮಕಾರಣ ಈ ಮೂರು ಬಗೆಯ ಶರೀರಗಳೂ ನಾನೇ. ಜಾಗ್ರತ್-ಸ್ವಪ್ನ ಸುಷುಪ್ತಿ--ಈ ಮೂರವಸ್ಥೆಗಳೂ ನಾನೇ, ಈ ಅವಸ್ಥೆಗಳಿಗೆ ಕಾರಣರಾದ ವಿಶ್ವತೈಜಸ ಪ್ರಾಜ್ಞರೂ ನಾನೇ, ನನ್ನ ಹೊರತು ಬೇರೆ ಏನೂ ಇಲ್ಲ. ॥೧೫॥

ಶಠತೆಯ ಸ್ವರೂಪವೂ ನಾನೇ, ಎಲ್ಲ ಬಗೆಯ ಆನಂದವೂ ನಾನೇ, ಹೆಸರು ರೂಪ ಅರ್ಥಗಳು ನನಗಿಲ್ಲ. ಯಾವ ಕಲ್ಪನೆಯೂ ನನಗಿಲ್ಲ. ॥೧೬॥

ಭೇದ-ಅಭೇದಗಳು, ಸುಖದುಃಖಗಳು, ಲಾಭನಷ್ಟಗಳು, ಜಯ-ಅಪಜಯಗಳು ಇವೆಲ್ಲವೂ ಬ್ರಹ್ಮವಸ್ತುವೇ, ಬೇರೆಯಲ್ಲ. ಆ ಬ್ರಹ್ಮವಸ್ತುವೇ ನಾನು. ॥೧೭॥

ಸಾತ್ವಿಕತೆ, ರಾಜಸಭೇದ, ಸಂಶಯ, ನಿಶ್ಚಯ, ದೃಷ್ಟಿ, ನೋಟ,

ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ।
ತುರ್ಯರೂಪಮಹಂ ಸಾಕ್ಷಾತ್ ಜ್ಞಾನರೂಪಮಹಂ ಸದಾ ॥೧೯॥

ಅಜ್ಞಾನಂ ಚೈವ ನಾಸ್ತ್ಯೇವ ತತ್ಕಾರ್ಯಂ ಕುತ್ರ ವಿದ್ಯತೇ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೦॥

ಚಿತ್ತವೃತ್ತಿವಿಲಾಸಂ ಚ ಬುದ್ಧೀನಾಮಪಿ ನಾಸ್ತಿ ಹಿ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೧॥

ದೇಹಸಂಕಲ್ಪಹೀನೋಽಹಂ ಬುದ್ಧಿಸಂಕಲ್ಪಹೀನಕಃ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೨॥

ಬುದ್ಧಿನಿಶ್ಚಯರೂಪೋಽಹಂ ನಿಶ್ಚಯಂ ಚ ಗಲತ್ಯಹೋ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೩॥

---

ನೋಡುವವನು, ಭೂತಗಳು, ಭೌತಿಕವಸ್ತುಗಳು, ದೇವತೆಗಳು, ಇವೆಲ್ಲವೂ ಬ್ರಹ್ಮ ಸ್ವರೂಪವೇ ಹೊರತು ಬೇರೆಯಲ್ಲ ಆ ಬ್ರಹ್ಮವಸ್ತುವೇ ನಾನು. ॥೧೮॥

ವಿಶ್ವತೈಜಸಪ್ರಾಜ್ಞರನ್ನು ಮೀರಿದ ನಾಲ್ಕನೆಯ ಪರಮಾತ್ಮನು ನಾನು. ನಾನು ಜ್ಞಾನಸ್ವರೂಪನು, ನನ್ನ ಹೊರತು ಅಜ್ಞಾನವು ಇಲ್ಲ. ಅದರ ಕಾರ್ಯವೂ ಇಲ್ಲ. ಎಲ್ಲವೂ ಬ್ರಹ್ಮವಸ್ತುವೇ. ಆ ಬ್ರಹ್ಮವಸ್ತುವೇ ನಾನು. ॥೧೯-೨೦॥

ಚಿತ್ತದ ವೃತ್ತಿವಿಲಾಸವೂ ಬುದ್ಧಿಯ ಕಲ್ಪನೆಗಳೂ ಇಲ್ಲ. ಎಲ್ಲವೂ ಬ್ರಹ್ಮ ವಸ್ತುವೇ. ಆ ಬ್ರಹ್ಮವಸ್ತುವೇ ನಾನು. ॥೨೧॥

ದೇಹಕ್ಕೆ ಸಂಬಂಧಪಟ್ಟ ಯಾವ ಆಸೆಗಳಾಗಲೀ ಬುದ್ಧಿಯ ಸಂಕಲ್ಪ ಗಳಾಗಲೀ ನನ್ನಲ್ಲಿಲ್ಲ. ಬ್ರಹ್ಮವೊಂದೇ ಇರುವುದು. ನಾನೇ ಬ್ರಹ್ಮವಸ್ತುವು. ॥೨೨॥

ಬುದ್ಧಿಯ ನಿಶ್ಚಯವು ನಾನು, ಅಂದರೆ ನನ್ನ ಹೊರತಾಗಿ ಅನಿಶ್ಚಯವಿಲ್ಲ. ಎಲ್ಲವೂ ಬ್ರಹ್ಮವಸ್ತುವೇ. ಆ ಬ್ರಹ್ಮವಸ್ತುವೇ ನಾನು. ॥೨೩॥

ಬ್ರಹ್ಮಾಹಮಪಿ ಕಾಣೋಽಹಂ ಬಧಿರೋಽಹಂ ಪರೋಽಸ್ಮ್ಯಹಂ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೪॥

ದೇಹೋಽಹಮಿತಿ ತಾದಾತ್ಮ್ಯಂ ದೇಹಸ್ಯ ಪರಮಾತ್ಮನಃ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೫॥

ಸರ್ವೋಽಹಮಿತಿ ತಾದಾತ್ಮ್ಯಂ ಸರ್ವಸ್ಯ ಪರಮಾತ್ಮನಃ ।
ಇತಿ ಭಾವಯ ಯತ್ನೇನ ಬ್ರಹ್ಮೈವಾಹಮಿತಿ ಸ್ಥಿರಂ ॥೨೬॥

ದೃಢನಿಶ್ಚಯಮೇವೇದಂ ಸತ್ಯಂ ಸತ್ಯಮಹಂ ಪರಂ ।
ದೃಢನಿಶ್ಚಯಮೇವಾತ್ರ ಸದ್ಗುರೋರ್ವಾಕ್ಯನಿಶ್ಚಯಂ ॥೨೭॥

ದೃಢನಿಶ್ಚಯಸಾಮ್ರಾಜ್ಯೇ ತಿಷ್ಠ ತಿಷ್ಠ ಸದಾ ಪರಃ ।
ಅಹಮೇವ ಪರಂ ಬ್ರಹ್ಮ ಆತ್ಮಾನಂದಪ್ರಕಾಶಕಃ ॥೨೮॥

---

ಬ್ರಹ್ಮನು ನಾನು, ಕುರುಡನು ನಾನು, ಕಿವುಡನು ನಾನು, ಅಂದರೆ ಚಕ್ಷುಸ್ಸು ಶ್ರವಣ ಮೊದಲಾದ ಇಂದ್ರಿಯಗಳು ದೇಹಹೀನನಾದ ನನಗಿಲ್ಲ. ॥೨೪॥

ದೇಹವೇ ಆತ್ಮವೆಂಬ ಬುದ್ಧಿಯು, ದೇಹಕ್ಕೂ ಪರಮಾತ್ಮನಿಗೂ ಇಲ್ಲದ ಅಭೇದವನ್ನು ವಿಷಯೀಕರಿಸುವುದು. ವಸ್ತುತಃ ದೇಹವು ಆತ್ಮವಲ್ಲ. ದೇಹವು ವಸ್ತುತಃ ಇಲ್ಲವೇ ಇಲ್ಲ. ಆದುದರಿಂದ ದೇಹಾತ್ಮರಿಗೆ ತಾದಾತ್ಮ್ಯವೂ ಇಲ್ಲ. ಇದು ನಿಶ್ಚಯವು. ॥೨೫॥

ಎಲ್ಲವೂ ನಾನು ಎಂಬುದು ಎಲ್ಲಕ್ಕೂ ಪರಮಾತ್ಮನಿಗೂ ತಾದಾತ್ಮ್ಯವನ್ನು ವಿಷಯೀಕರಿಸುವುದು, ಅಂದರೆ ಪರಮಾತ್ಮನ ಹೊರತು ಸರ್ವವೆಂಬುದಿಲ್ಲವೆಂದರ್ಥವು. ಇದನ್ನೇ ಯತ್ನಪೂರ್ವಕವಾಗಿ ಭಾವಿಸಿ ಸದಾ ನಾನೇ ಬ್ರಹ್ಮನೆಂದು ಚಿಂತಿಸು. ॥೨೬॥

ನಾನೇ ಬ್ರಹ್ಮನೆಂದು ದೃಢನಿಶ್ಚಯವುಳ್ಳವನಾಗು. ಒಳ್ಳೆಯ ಗುರುವಿನ ಉಪದೇಶದಿಂದ ಇಂತಹ ದೃಢನಿಶ್ಚಯವನ್ನು ಹೊಂದು. ಈ ದೃಢನಿಶ್ಚಯ ಸಾಮ್ರಾಜ್ಯದಲ್ಲಿ ಸದಾ ಅಭಿಷಿಕ್ತನಾಗಿರು. ॥೨೭॥

ನಾನೇ ಪರಬ್ರಹ್ಮನು. ಆತ್ಮಾನಂದವನ್ನು ಪ್ರಕಾಶಿಸುವವನು ನಾನು. ಶಿವಪೂಜೆಯು ನಾನು, ಶಿವನೂ ನಾನೇ, ವಿಷ್ಣುವೂ ವಿಷ್ಣುಪೂಜೆಯೂ ನಾನೇ. ॥೨೮॥

ಶಿವಪೂಜಾ ಶಿವಶ್ಲಾಘಂ ವಿಷ್ಣುರ್ವಿಷ್ಣು ಪ್ರಪೂಜನಂ ।
ಯದ್ಯತ್ಸಂವೇದ್ಯತೇ ಕಿಂಚಿದ್ಯದ್ಯನ್ನಿಶ್ಚೀಯತೇ ಕ್ವಚಿತ್ ॥೨೯॥

ತದೇವ ತ್ವಂ ತ್ವಮೇವಾಹಮಿತ್ಯೇವಂ ನಾಸ್ತಿ ಕಿಂಚನ।
ಇದಂ ಚಿತ್ತಮಿದಂ ದೃಶ್ಯಂ ಇತ್ಯೇವಮಪಿ ನಾಸ್ತಿ ಹಿ ॥೩೦॥

ಸದಸದ್ಭಾವಶೇಷೋಽಪಿ ತತ್ತಚ್ಛೇದಂ ನ ವಿದ್ಯತೇ ।
ಸುಖರೂಪಮಿದಂ ಸರ್ವಂ ದುಃಖರೂಪಮಿದಂ ಚ ನೈ ॥೩೧॥

ಲಕ್ಷಭೇದಂ ಸಕೃದ್ಭೇದಂ ಸರ್ವಭೇದಂ ನ ವಿದ್ಯತೇ ।
ಬ್ರಹ್ಮಾನಂದೋ ನ ಸಂದೇಹೋ ತದ್ಬ್ರಹ್ಮಾಹಂ ನ ಸಂಶಯಃ॥೩೨॥

ಬ್ರಹ್ಮಭೇದಂ ತುರ್ಯಭೇದಂ ಜೀವಭೇದಮಭೇದಕಂ ।
ಇದಮೇವ ಹಿ ನೋತ್ಪನ್ನಂ ಸರ್ವದಾ ನಾಸ್ತಿ ಕಿಂಚನ ॥೩೩॥

---

ತಿಳಿಯಲ್ಪಡುವುದೆಲ್ಲವೂ ನಿಶ್ಚಯಿಸಲ್ಪಡುವುದೆಲ್ಲವೂ ಸಹ ನೀನೇ. ನೀನೇ ನಾನು, ಬೇರೆ ಏನೂ ಇಲ್ಲ. ಇದು ಚಿತ್ತವು, ಇದು ದೃಶ್ಯವು ಎಂಬುದೂ ಇಲ್ಲ. ಎಲ್ಲವೂ ನಾನೇ, ಎಲ್ಲವೂ ನೀನೇ. ಪೂಜ್ಯಪೂಜಕವಸ್ತುಗಳೆಲ್ಲವೂ ಬ್ರಹ್ಮವಸ್ತುವೇ. ॥೨೯-೩೦॥

ಸತ್ಯ-ಅಸತ್ಯ ಎಂಬ ಭೇದವೂ ಇಲ್ಲ. ಇದು ಸುಖರೂಪವಾದುದು ಎಂಬ ಭೇದವೂ ಇಲ್ಲ. ದುಃಖವೆಂಬ ಭಾವನೆಯೂ ಇಲ್ಲ. ಸುಖದುಃಖಗಳೆರಡೂ ಬ್ರಹ್ಮವೇ. ॥೩೧॥

ಲಕ್ಷಾಂತರ ಭೇದಗಳಾಗಲೀ ಒಂದೇ ಭೇದವೆಂದಾಗಲೀ ಇಲ್ಲವೇ ಇಲ್ಲ. ಎಲ್ಲವೂ ಬ್ರಹ್ಮವಸ್ತುವೇ, ಆ ವಸ್ತುವೇ ನಾನು. ॥೩೨॥

ಜೀವಾದಿರೂಪವಾದ ಈ ಜಗತ್ತು ಜನಿಸಿಯೇ ಇಲ್ಲ. ಮಾಯೆಯಿಂದ ತೋರುತ್ತಿರುವುದು. ಆದುದರಿಂದ ಬ್ರಹ್ಮಭೇದವಾಗಲೀ, ಜೀವಭೇದವಾಗಲೀ ಇತರ ಭೇದಗಳಾಗಲೀ ಯಾವುವೂ ಇಲ್ಲ. ॥೩೩॥

ಸದೇವಮಿತಿ ನಿರ್ದೇಶೋ ನಾಸ್ತ್ಯೇವ ನಾಸ್ತಿ ಸರ್ವದಾ ।
ಅಸ್ತಿಚೇತ್ಕಿಲ ವಕ್ತವ್ಯಂ ನಾಸ್ತಿಚೇತ್ಕಥಮುಚ್ಯತೇ ॥೩೪॥

ಪರಂ ವಿಶೇಷಮೇತಿ ನಾಸ್ತಿ ಕಿಂಚಿತ್ಸದಾ ಮಯಿ ।
ಚಂಚಲಂ ಚ ಮನಶ್ಚೈವ ನಾಸ್ತಿ ನಾಸ್ತಿ ನ ಸಂಶಯಃ ॥೩೫॥

ಏವಮೇವ ಸದಾ ಪೂರ್ಣೋ ನಿರೀಹಸ್ತಿಷ್ಠ ಶಾಂತಧೀಃ ।
ಸರ್ವಂ ಬ್ರಹ್ಮಾಸ್ಮಿ ಪೂರ್ಣೋಽಸ್ಮಿ ಏವಂ ಚ ನ ಕದಾಚನ ॥೩೬॥

ಆನಂದೋಽಹಂ ವರಿಷ್ಠೋಽಹಂ ಬ್ರಹ್ಮಾಸ್ಮೀತ್ಯಪಿ ನಾಸ್ತಿಹಿ ।
ಬ್ರಹ್ಮಾನಂದಂ ಮಹಾನಂದಮಾತ್ಮಾನಂದಮಖಂಡಿತಂ ॥೩೭॥

ಇದಂ ಪರಮಹಂತಾ ಚ ಸರ್ವದಾ ನಾಸ್ತಿ ಕಿಂಚ ನ ।
ಇದಂ ಸರ್ವಮಿತಿ ಖ್ಯಾತಿರನಿಂದನ್ನಿತಿ ನೋ ಭ್ರಮಃ ॥೩೮॥

---

ಈ ಜಗತ್ತು ಹಾಗೆ ಹೀಗೆ ಎಂದು ನಿರ್ದೇಶವೂ ಇಲ್ಲ. ಜಗತ್ತಿದ್ದರೆ ತಾನೆ ಹಾಗಿದೆ ಹೀಗಿದೆ ಎನ್ನುವುದು? ವಸ್ತುತಃ ಜಗತ್ತು ಇಲ್ಲವಾದುದರಿಂದ ಜಗತ್ತು ಹಾಗಿದೆ ಹೀಗಿದೆ ಎನ್ನುವ ವ್ಯವಹಾರವೇ ಇಲ್ಲ. ॥೩೪॥

ಉತ್ಕೃಷ್ಟವಾದುದು-ನಿಕೃಷ್ಟವಾದುದು ಎಂಬ ಭೇದವೂ ಇಲ್ಲ. ಚಂಚಲವಾದ ಮನಸ್ಸೆಂಬುದೂ ಇಲ್ಲ. ಇದು ನಿಶ್ಚಯವು. ॥೩೫॥

ಹೀಗೆ ಯಾವಾಗಲೂ ದೃಢವಾಗಿ ತಿಳಿದಿದ್ದು ನಿಸ್ಪೃಹನಾಗಿ ಶಾಂತನಾಗಿ ನಾನು ಪೂರ್ಣವಾದ ಬ್ರಹ್ಮವಸ್ತುವು ಎಂದು ಅನುಸಂಧಾನಮಾಡು. ॥೩೬॥

ಆನಂದವು ನಾನು, ಸರ್ವೋತ್ತಮನು ನಾನು, ಬ್ರಹ್ಮವಸ್ತುವು ನಾನು ಎಂಬ ವ್ಯವಹಾರವು ಸತ್ಯವಲ್ಲ. ಪರಿಪೂರ್ಣವಾದ ಬ್ರಹ್ಮಾನಂದವೊಂದೇ ಇರುವುದು. ಬೇರೆ ಯಾವ ವ್ಯವಹಾರವೂ ಇಲ್ಲ. ॥೩೭॥

ಈ ಜಗತ್ತೆಲ್ಲವೂ ಜ್ಞಾನಸ್ವರೂಪವಾದುದು, ಜ್ಞಾನಸ್ವರೂಪವೆಂದರೆ ಬ್ರಹ್ಮವಸ್ತುವು. ಬ್ರಹ್ಮವಸ್ತುವಿನ ಹೊರತು ಯಾವುದೂ ಇಲ್ಲ. ಆ ಬ್ರಹ್ಮವಸ್ತುವೇ ನಾನು. ॥೩೮॥

ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ।
ಲಕ್ಷ್ಯಲಕ್ಷಣಭಾವಂ ಚ ದೃಶ್ಯದರ್ಶನದ್ರಷ್ಟೃತಾ ॥೩೯॥

ಅತ್ಯಂತಾಭಾವಮೇವೇತಿ ಸರ್ವದಾನುಭವಂ ಮಹತ್ ।
ಸರ್ವಂ ಗುಹ್ಯಂ ಮಂತ್ರಂ ಶಾಸ್ತ್ರಂ ಸತ್ಯಂ ಸ್ತೋತ್ರಂ ಕಳೇಬರಂ॥೪೦॥

ಮರಣಂ ಜನನಂ ಕಾರ್ಯಂ ಕಾರಣಂ ಪಾವನಂ ಶುಭಂ ।
ಕಾಮಕ್ರೋಧೌ ಲೋಭಮೋಹೌ ಮದಂ ಮಾತ್ಸರ್ಯಮೇವ ಹಿ ॥೪೧॥

ದ್ವೈತದೋಷಭಯಂ ಶೋಕಂ ಸರ್ವಂ ನಾಸ್ತ್ಯೇವ ಸರ್ವದಾ ।
ಇದಂ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಸಕಲಂ ಸುಖಂ ॥೪೨॥

ಇದಂ ಬ್ರಹ್ಮೇತಿ ಮನನಂ ಅಹಂ ಬ್ರಹ್ಮೇತಿ ಚಿಂತನಂ ।
ಅಹಂ ಬ್ರಹ್ಮೇತಿ ಮನನಂ ತ್ವಂಬ್ರಹ್ಮತ್ವವಿನಾಶನಂ ॥೪೩॥

ಸತ್ಯತ್ವಬ್ರಹ್ಮವಿಜ್ಞಾನಂ ಅಸತ್ಯತ್ವಂ ನ ಬಾಧ್ಯತೇ ।
ಏಕ ಏವ ಪರೋಹ್ಯಾತ್ಮಾ ಏಕತ್ವಭ್ರಾಂತಿವರ್ಜಿತಃ ॥೪೪॥

---

ಉದ್ದೇಶ ಲಕ್ಷಣಗಳೂ, ಕಾಣಿಸುವ ವಸ್ತು, ಕಾಣುವವನು, ಕಾಣುವಿಕೆ, ಈ ಮೂರು ಭೇದಗಳೂ ಸಹ ಯಾವಾಗಲೂ ಇಲ್ಲವೇ ಇಲ್ಲ. ಇದು ನಿಜವು.॥೩೯॥

ಮಂತ್ರಗಳು, ಮಂತ್ರರಹಸ್ಯಗಳು, ಶಾಸ್ತ್ರಗಳು, ಸತ್ಯ, ಪಾವನ, ಮಂಗಳ, ಮರಣ, ಜನನ, ಕಾರ್ಯಕಾರಣಗಳು, ಸ್ತೋತ್ರ, ದೇಹ, ಕಾಮಕ್ರೋಧಗಳು, ಲೋಭಮೋಹಗಳು, ಮದಮಾತ್ಸರ್ಯಗಳು, ಭೇದದಿಂದುಂಟಾಗುವ ಭಯ, ಶೋಕ ಇವೆಲ್ಲವೂ ಸಹ ಯಾವಾಗಲೂ ಇಲ್ಲವೇ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ಆ ಬ್ರಹ್ಮವಸ್ತುವೇ ನಾನು. ॥೪೦-೪೧-೪೨॥

ಇದೆಲ್ಲವೂ ಬ್ರಹ್ಮವಸ್ತುವೇ ಎಂಬ ಭಾವನೆಯೂ, ನಾನೇ ಬ್ರಹ್ಮನೆಂಬ ಭಾವನೆಯಲ್ಲಿ ಪರಿಣಮಿಸುವುದು. ನಾನೇ ಬ್ರಹ್ಮನೆಂಬ ಭಾವನೆಯು ಅದ್ವಿತೀಯತೆಯಲ್ಲಿ ಪರಿಣಮಿಸಿ ನೀನು ಎಂಬ ಭೇದವನ್ನು ತೊಡೆಯುವುದು. ॥೪೩॥

ಬ್ರಹ್ಮಸ್ವರೂಪವಾದ ಬ್ರಹ್ಮಜ್ಞಾನವು ಸತ್ಯವಾಗಿದ್ದು ಜಗತ್ತಿನ ಎಲ್ಲವಸ್ತುವನ್ನೂ ಪರಿಹರಿಸುವುದಾದರೂ ಜಗತ್ತಿನಲ್ಲಿರುವ ಅಸತ್ಯತ್ವವನ್ನು ಬಾಧಿಸಲಾರದು.

ಸರ್ವಂ ಬ್ರಹ್ಮ ಸದಾ ಬ್ರಹ್ಮ ತದ್ಬ್ರಹ್ಮಾಹಂ ನ ಸಂಶಯಃ ।
ಜೀವರೂಪಾಜೀವಭಾವಾಜೀವಶಬ್ದತ್ರಯಂ ನ ಹಿ ॥೪೫॥

ಈಶರೂಪಂ ಚೇಶಭಾವಂ ಈಶಶಬ್ದಂ ಚ ಕಲ್ಪಿತಂ ।
ನಾಕ್ಷರಂ ನ ಚ ಸರ್ವಂ ಚ ನ ಪದಂ ವಾಚ್ಯವಾಚಕಂ ॥೪೬॥

ಹೃದಯಂ ಮಂತ್ರತಂತ್ರಂ ವಾ ಚಿತ್ತಂ ಬುದ್ಧಿರ್ನ ಕಿಂಚನ ।
ಮೂಢೋ ಜ್ಞಾನೀ ವಿವೇಕೀ ವಾ ಶುದ್ಧ ಇತ್ಯಪಿ ನಾಸ್ತಿ ಹಿ ॥೪೭॥

ನಿಶ್ಚಯಂ ಪ್ರಣವಂ ತಾರಂ ಆತ್ಮಾಯಂ ಗುರುಶಿಷ್ಯಕಂ ।
ತೂಷ್ಣೀಂ ತೂಷ್ಣೀಂ ಮಹಾತೂಷ್ಣೀಂ ಮೌನಂ ವಾ ಮೌನಭಾವನಂ ॥೪೮॥

ಪ್ರಕಾಶನಂ ಪ್ರಕಾಶಂ ಚ ಆತ್ಮಾನಾತ್ಮವಿವೇಚನಂ ।
ಧ್ಯಾನಯೋಗಂ ರಾಜಯೋಗಂ ಯೋಗಮಷ್ಟಾಂಗಲಕ್ಷಣಂ ॥೪೯॥

---

ಅಂದರೆ ಜಗತ್ತು ಅಸತ್ಯವೆಂದೇ ಅಭಿಪ್ರಾಯವು. ಪರಮಾತ್ಮನು ಓರ್ವನೇ ಆದರೂ ಏಕತ್ವವೆಂಬ ಸಂಖ್ಯೆಯು ಅವನಲ್ಲಿಲ್ಲ. ಎಲ್ಲವೂ ಆ ಪರಮಾತ್ಮನೇ, ಆ ಪರಮಾತ್ಮನೇ ನಾನು. ॥೪೪॥

ಜೀವಸ್ವರೂಪ ಜೀವಭಾವ, ಜೀವಶಬ್ದ ಈಮೂರೂ ಅಸತ್ಯವಾದವುಗಳು. ಜೀವನೂ ಬ್ರಹ್ಮನೇ. ಸಕಲವೂ ಬ್ರಹ್ಮ. ॥೪೫॥

ಅಕ್ಷರಗಳಾಗಲಿ, ಶಬ್ದವಾಗಲೀ, ಪದವಾಗಲೀ, ಪದಾರ್ಥಗಳಾಗಲೀ ಮಂತ್ರ ತಂತ್ರಗಳಾಗಲೀ, ಮಂತ್ರ ಹೃದಯುಗಳಾಗಲೀ, ಚಿತ್ತವಾಗಲೀ, ಬುದ್ಧಿಯಾಗಲೀ ಇವಾವುದೂ ವಸ್ತುತಃ ಇಲ್ಲವು. ಮೂಢ, ಜ್ಞಾನಿ, ವಿವೇಕಿ, ಶುದ್ಧ, ಶ್ವಪಚ ರೆಂಬ ಭೇದಗಳೂ ಇಲ್ಲ. ॥೪೬-೪೭॥

ನಿಶ್ಚಯವಾಗಲೀ, ಓಂಕಾರವಾಗಲೀ ತಾರಕ ಮಂತ್ರ ಸ್ವರಗಳಾಗಲೀ, ತಾರಕ ಮಂತ್ರಸ್ವರೂಪಗಳಾಗಲೀ ವಸ್ತುತಃ ಇಲ್ಲವು. ॥೪೮॥

ಬೆಳಗುವಿಕೆ, ಬೆಳಕು, ಆತ್ಮ ಅನಾತ್ಮಗಳ ವಿವೇಚನೆ, ಧ್ಯಾನ, ಯೋಗ, ರಾಜಯೋಗ, ಅಷ್ಟಾಂಗಯೋಗ, ಇವಾವುವೂ ಇಲ್ಲ. ॥೪೯॥

ಅಸ್ತಿತ್ವಂ ಭಾಷಣಂ ವಾಪಿ ನಾಸ್ತಿತ್ವಸ್ಯ ಚ ಭಾಷಣಂ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೫೦॥

ಪಂಚಾಶದ್ವರ್ಣರೂಪಂ ವಾ ಚತುಷ್ಷಷ್ಟಿಕಲಾತ್ಮಕಂ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೫೧॥

ಬ್ರಹ್ಮೈವಾಹಂ ಪ್ರಸನ್ನಾತ್ಮಾ ಬ್ರಹ್ಮೈವಾಹಂ ಚಿದವ್ಯಯಃ ।
ಶಾಸ್ತ್ರಜ್ಞಾನವಿದೂರೋಽಹಂ ವೇದಜ್ಞಾನವಿದೂರಗಃ ॥೫೨॥

ಉಕ್ತಂ ಸರ್ವಂ ಪರಂ ಬ್ರಹ್ಮ ನಾಸ್ತಿ ಸಂದೇಹಲೇಶಕಃ ।
ಸರ್ವಂ ಬ್ರಹ್ಮ ನ ಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೫೩॥

ಇತ್ಯೇವಂ ಬ್ರಹ್ಮಸನ್ಮಾತ್ರಂ ತತ್ರ ತುಭ್ಯಂ ಪ್ರಿಯಂ ತತಃ ।
ಯಸ್ತು ಬಾಧ್ಯೇತ ಸತತಂ ಸರ್ವಂ ಬ್ರಹ್ಮ ನ ಸಂಶಯಃ ॥೫೪॥

ನಿತ್ಯಂ ಶೃಣ್ವಂತಿ ಯೇ ಮರ್ತ್ಯಾಸ್ತೇ ಚಿನ್ಮಾತ್ರಮಯಾಃಮಲಾಃ ॥೫೫॥

---

ಇದೆ ಎಂಬ ಮಾತೂ ಇಲ್ಲವೆಂಬ ಮಾತೂ ಇಲ್ಲ, ಎಲ್ಲವೂ ಬ್ರಹ್ಮವಸ್ತುವೇ. ಬ್ರಹ್ಮವಸ್ತುವಿನ ಹೊರತು ಏನೂ ಇಲ್ಲ. ಆ ಬ್ರಹ್ಮವಸ್ತುವೇ ನಾನು. ॥೫೦॥

ಐವತ್ತು ಅಕ್ಷರಗಳೆಂಬುದಾಗಲೀ ಅರುವತ್ತುನಾಲ್ಕು ಕಲೆಗಳೆಂಬುದಾಗಲೀ ಇಲ್ಲ. ಬ್ರಹ್ಮವಸ್ತುವೊಂದೇ ಇರತಕ್ಕುದು. ॥೫೧॥

ಪ್ರಸನ್ನರೂಪವಾದ ಬ್ರಹ್ಮರೂಪವಾದ ಜ್ಞಾನಮೂರ್ತಿಯು ನಾನು. ಶಾಸ್ತ್ರಗಳ ತರ್ಕವಿತರ್ಕಗಳಿಗೆ ಸಿಲುಕದವನು ನಾನು. ವೇದಗಳ ಕರ್ಮಜ್ಞಾನಕ್ಕೂ ದೂರವಾಗಿರುವೆನು. ॥೫೨॥

ಈಗ ಹೇಳಿರುವುದೆಲ್ಲವೂ ಬ್ರಹ್ಮವಸ್ತುವೇ. ಬ್ರಹ್ಮವಸ್ತುವಿನ ಹೊರತು ಬೇರಾವುದೂ ಇಲ್ಲ. ಆ ಬ್ರಹ್ಮವಸ್ತುವೇ ನಾನು. ಇದು ನಿಶ್ಚಯವು. ॥೫೩॥

ಹೀಗೆ ಎಲ್ಲವೂ ಸತ್ಯರೂಪವಾದ ಬ್ರಹ್ಮಸ್ವರೂಪವೇ-ಎಂಬ ಪರಮತತ್ವವನ್ನು ಪ್ರಿಯಶಿಷ್ಯನಾದ ನಿನಗೆ ಹೇಳಿರುವೆನು. ಈ ವಿಷಯವನ್ನು ಯಾರು ಶ್ರದ್ಧೆಯಿಂದ ನಿತ್ಯವೂ ಕೇಳುವರೋ ಅವರು ಬ್ರಹ್ಮವಸ್ತುವೇ ಆಗುವರು, ಇದರಲ್ಲಿ ಸಂಶಯವಿಲ್ಲ. ॥೫೪-೫೫॥

ಮಂದೇಹಸಂದೇಹಕರೋರ್ಯಭಾಸ್ವಕೈಃ
ಕರಾದಿಸಂದೋಹಜಗದ್ವಿಭಾಸಿಭಿಃ ।
ಯೋ ವೀತಮೋಹಂ ನ ಕರೋತಿ ದುರ್ಹೃದಂ
ವಿದೇಹಮುಕ್ತಿಂ ಶಿವದೃಕ್ಪ್ರಭಾವತಃ ॥೫೬॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ತ್ರಿಂಶತ್ತಮೋಽಧ್ಯಾಯಃ

---

ಸಂದೇಹಾಂಧಕಾರವೆಲ್ಲವನ್ನೂ ಕತ್ತರಿಸುವ ಈ ಜ್ಞಾನಪ್ರಭೆಯನ್ನು ಹೊಂದಿದವರಾಗಿ ಯಾರು ಬ್ರಹ್ಮವಸ್ತುವಾದ ಶಂಕರನನ್ನು ಅನನ್ಯರೂಪದಿಂದ ನಿತ್ಯವೂ ಭಾವಿಸುವರೋ, ಅವರು ಶಂಕರನ ಅನುಗ್ರಹದಿಂದ ವಿದೇಹಕೈವಲ್ಯವನ್ನು ಹೊಂದುವರು, ಅತಿ ಮೂಢರಾದರೂ ಅವರ ಮೋಹವೆಲ್ಲವೂ ತೊಲಗಿ ಮುಕ್ತಿಯು ಅವರ ಕರಗತವಾಗುವುದು. ॥೫೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಮೂವತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಏಕತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ರಹಸ್ಯಮತ್ಯಂತಂ ಸಾಕ್ಷಾದ್ಬ್ರಹ್ಮಪ್ರಕಾಶಕಂ ।
ಸರ್ವೋಪನಿಷದಾಮರ್ಥಂ ಸರ್ವಲೋಕೇಷು ದುರ್ಲಭಂ ॥೧॥

ಪ್ರಜ್ಞಾನಂ ಬ್ರಹ್ಮ ನಿಶ್ಚಿತ್ಯ ಪದದ್ವಯಸಮನ್ವಿತಂ ।
ಮಹಾವಾಕ್ಯಂ ಚತುರ್ವಾಕ್ಯಂ ಋಗ್ಯಜುಸ್ಸಾಮಸಂಭವಂ ॥೨॥

---

## ಮೂವತ್ತೊಂದನೆಯ ಅಧ್ಯಾಯವು

ಋಭುಮಹಾಮುನಿಯು ಬ್ರಹ್ಮಸ್ವರೂಪವನ್ನೇ ಮುಂದುವರಿಸುತ್ತಾ ಹೀಗೆಂದನು—ಎಲೈ ನಿದಾಘಮುನಿಯೇ, ಈಗ ಅತ್ಯಂತ ರಹಸ್ಯವಾದ ಬ್ರಹ್ಮವಸ್ತುವನ್ನು ಪ್ರಕಾಶಗೊಳಿಸುವ ಉಪನಿಷತ್ತುಗಳ ಪರಮಾರ್ಥವಾದ ಮತ್ತು ಅತಿ ದುರ್ಲಭವಾದ ವಿಷಯವನ್ನು ಹೇಳುವೆನು ಕೇಳು. ॥೧॥

"ಪ್ರಜ್ಞಾನಂ ಬ್ರಹ್ಮ" "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ"—ಈ ನಾಲ್ಕು ವೇದ ಮಹಾವಾಕ್ಯಗಳ ಅರ್ಥವನ್ನು ಈಗ ನಿನಗೆ ವಿವರಿಸುವೆನು. ॥೨॥

ಮಮ ಪ್ರಜ್ಞೈವ ಬ್ರಹ್ಮಾಹಂ ಜ್ಞಾನಮಾತ್ರಮಿದಂ ಜಗತ್ ।
ಜ್ಞಾನಮೇವ ಜಗತ್ಸರ್ವಂ ಜ್ಞಾನಾದನ್ಯನ್ನ ವಿದ್ಯತೇ ॥೩॥

ಜ್ಞಾನಸ್ಯಾನಂತರಂ ಸರ್ವಂ ದೃಶ್ಯತೇ ಜ್ಞಾನರೂಪತಃ ।
ಜ್ಞಾನಸ್ಯ ಬ್ರಹ್ಮಣಶ್ಚಾಪಿ ಮನ್ಯೈವ ಚ ಪೃಥಙ್ನಹಿ ॥೪॥

ಜೀವಃ ಪ್ರಜ್ಞಾನಶಬ್ದಸ್ಯ ಬ್ರಹ್ಮಶಬ್ದಸ್ಯ ಚೇಶ್ವರಃ ।
ಅಸ್ಮೀತ್ಯೈಕ್ಯಮಖಂಡಾರ್ಥಂ ಅಖಂಡೈಕರಸಂ ತತಂ ॥೫॥

ಅಖಂಡಾಕಾರವೃತ್ತಿಸ್ತು ಜೀವನ್ಮುಕ್ತಿರಿತೀರಿತಂ ।
ಅಖಂಡಾಕಾರಸಂವಸ್ತುವಿದೇಹೋ ಮುಕ್ತಿರುಚ್ಯತೇ ॥೬॥

ಬ್ರಹ್ಮೈವಾಹಂ ನ ಸಂಸಾರೀ ಸಚ್ಚಿದಾನಂದಮಸ್ಮ್ಯಹಂ ।
ನಿರ್ಗುಣೋಽಹಂ ನಿರೀಶೋಽಹಂ ಪರಮಾನಂದವಾನಹಂ ॥೭॥

---

"ಪ್ರಜ್ಞಾನಂ ಬ್ರಹ್ಮ" ಈ ವಾಕ್ಯದ ಅರ್ಥವೇನೆಂದರೆ —ಬ್ರಹ್ಮವಸ್ತುವು ಜ್ಞಾನರೂಪವಾದುದು, ಈ ಜಗತ್ತೆಲ್ಲವೂ ಜ್ಞಾನರೂಪವಾದುದು. ಜ್ಞಾನವನ್ನು ಬಿಟ್ಟು ಬೇರೆ ಏನೂ ಇಲ್ಲ. ಅದ್ವಿತೀಯರೂಪವೇ ಜ್ಞಾನವು. ॥೩॥

ಈ ಜಗತ್ತೆಲ್ಲವೂ ಜ್ಞಾನವನ್ನು ಬಿಟ್ಟಿಲ್ಲ. ಜ್ಞಾನರೂಪವಾಗಿಯೇ ಗೋಚರಿಸುವುದು. ಆದುದರಿಂದ ಜ್ಞಾನವೇ ಬ್ರಹ್ಮ. ಜ್ಞಾನ, ಬ್ರಹ್ಮವಸ್ತು, ನಾನು - ಈ ಮೂವರಿಗೂ ಭೇದವಿಲ್ಲ, ಮೂರೂ ಒಂದೇ. ॥೪॥

"ಪ್ರಜ್ಞಾನಂ ಬ್ರಹ್ಮ" ಎಂಬ ವಾಕ್ಯದ ಪ್ರಜ್ಞಾನವೆಂಬ ಶಬ್ದಕ್ಕೆ ಜೀವನೆಂದರ್ಥವು, ಬ್ರಹ್ಮಶಬ್ದಕ್ಕೆ ಈಶ್ವರನು ಎಂದರ್ಥವು, ಅಸ್ಮಿ—ಎಂದು ಅನುಷಂಗ ಮಾಡಿಕೊಂಡರೆ ಜೀವೇಶ್ವರರು ಅಭಿನ್ನರು, ಬೇರೆಯಲ್ಲ, ಎಂಬ ಅಖಂಡಾರ್ಥವು ಸ್ಫುಟವಾಗುವುದು. ॥೫॥

ಈರೀತಿ ಜೀವೇಶ್ವರಾಭೇದವನ್ನನುಸಂಧಾನಮಾಡುವುದೇ ಜೀವನ್ಮುಕ್ತಿಯು. ಆದರಿಂದ ದೇಹಾದಿಗಳನ್ನು ವಿಸರ್ಜಿಸಿ ಅಖಂಡಪೂರ್ಣವಸ್ತುವಾಗಿಪ್ಪರಿಣಮಿಸುವುದೇ ವಿದೇಹಮುಕ್ತಿಯು. ॥೬॥

ಬ್ರಹ್ಮವಸ್ತುವೇ ನಾನು, ಸಂಸಾರಿಯಲ್ಲ. ಸತ್ಯಜ್ಞಾನಾನಂದಸ್ವರೂಪನು,

ನಿತ್ಯೋऽಹಂ ನಿರ್ವಿಕಲ್ಪೋऽಹಂ ಚಿದಹಂ ಚಿದಹಂ ಸದಾ।
ಅಖಂಡಾಕಾರವೃತ್ತ್ಯಾಖ್ಯಂ ಚಿತ್ತಂ ಬ್ರಹ್ಮಾತ್ಮನಾ ಸ್ಥಿತಂ ॥೮॥

ಲವಣಂ ತೋಯಮಾತ್ರೇಣ ಯಥೈಕತ್ವಮಖಂಡಿತಂ।
ಅಖಂಡೈಕರಸಂ ವಕ್ಷ್ಯೇ ವಿದೇಹೋ ಮುಕ್ತಿಲಕ್ಷಣಂ ॥೯॥

ಪ್ರಜ್ಞಾಪದಂ ಪರಿತ್ಯಜ್ಯ ಬ್ರಹ್ಮೈವ ಪದಮೇವ ಹಿ।
ಅಹಮಸ್ಮಿ ಮಹಾನಸ್ಮಿ ಸಿದ್ಧೋऽಸ್ಮೀತಿ ಪರಿತ್ಯಜನ್ ॥೧೦॥

ಸ್ಮರಣಂ ಚ ಪರಿತ್ಯಜ್ಯ ಭಾವನಂ ಚಿತ್ತಕರ್ತೃಕಂ।
ಸರ್ವಮಂತಃಪರಿತ್ಯಜ್ಯ ಸರ್ವಶೂನ್ಯಂ ಪರಾಸ್ಥಿತಿಃ ॥೧೧॥

---

ನಿರ್ಗುಣನು, ನನಗೀಶ್ವರನಿಲ್ಲ. ನಾನು ನಿತ್ಯನು, ಸಂಶಯಾದಿಗಳಿಲ್ಲದ ನಿತ್ಯಚೈತನ್ಯವು ನಾನು, ಅಖಂಡಬ್ರಹ್ಮಜ್ಞಾನವೇ ನಾನು. ॥೭॥

ಸಾಧನಗಳಿಂದುಂಟಾಗುವ ಅಖಂಡಭಾವನಾರೂಪವಾದ ಚಿತ್ತವೂ ಬ್ರಹ್ಮ ರೂಪವಾಗುವುದು. ನೀರಿನಲ್ಲಿ ಉಪ್ಪನ್ನು ಕದರಿದರೆ ಹೇಗೆ ನೀರಿನ ಎಲ್ಲೆಡೆಯಲ್ಲೂ ಅಖಂಡವಾಗಿ ಉಪ್ಪುಸೇರುವುದೋ ಹಾಗೆ ಜ್ಞಾನವೃತ್ತಿಯ ಬ್ರಹ್ಮವಸ್ತುವನ್ನು ವಿಷಯಿಾಕರಿಸಲು ಆ ಬ್ರಹ್ಮರೂಪವೇ ಆಗುವುದು. ಹಾಗೆ ಅಖಂಡಬ್ರಹ್ಮರೂಪ ವಾಗುವುದರಿಂದಲೇ ಆ ಜ್ಞಾನವೃತ್ತಿಗೆ ಅಖಂಡಾಕಾರವೃತ್ತಿಯೆಂದು ಹೆಸರು. ॥೮॥

ವಿದೇಹಮುಕ್ತಿಗೆ ಪರಮಲಕ್ಷಣವಾದ ಅಖಂಡೈಕರಸವಾದ ಬ್ರಹ್ಮಸ್ವರೂಪ ವನ್ನು ಈಗ ವಿವರಿಸುವೆನು, ಮತ್ತು ಭಾವಿಸುವ ಕ್ರಮವನ್ನೂ ವಿವರಿಸುವೆನು. ॥೯॥

ಕೇವಲ ಪ್ರಜ್ಞಾನಪದವನ್ನು ಬಿಟ್ಟು ಬ್ರಹ್ಮಪದವನ್ನು ಚಿಂತಿಸಬೇಕು. ಅನಂತರ ಆ ಬ್ರಹ್ಮವಸ್ತುವನ್ನೂ ಬಿಟ್ಟು ಆ ಬ್ರಹ್ಮನೇ ನಾನೆಂದು ಚಿಂತಿಸಬೇಕು, ಮಹಾತ್ಮನು ನಾನು, ಆ ಸಿದ್ಧಸ್ವರೂಪನು ನಾನು-ಎಂದು ಸದಾ ಸ್ಮರಿಸಬೇಕು.॥೧೦॥

ಆಮೇಲಾಸ್ಮರಣೆಯನ್ನೂ ಬಿಟ್ಟು, ಚಿತ್ತಕರ್ತೃಕವಾದ ಭಾವನೆಯನ್ನೂ ದೂರೀಕರಿಸಿ, ಎಲ್ಲ ಅನಿತ್ಯವಸ್ತುಗಳ ಶೂನ್ಯತೆಯಿಂದಿರಬೇಕು. ಹೀಗೆ ಸರ್ವಶೂನ್ಯತೆ ಯಿಂದಿರುವುದೇ ಉತ್ತಮಸ್ಥಿತಿಯು. ॥೧೧॥

ತೂಷ್ಣೀಂ ಸ್ಥಿತಿಂ ಚ ಸಂತ್ಯಜ್ಯ ತತೋ ಮೌನವಿಕಲ್ಪನಂ ।
ಯತಚಿತ್ತಂ ವಿಕಲ್ಪಾಂಶಂ ಮನಸಾ ಕಲ್ಪಿತಂ ಜಗತ್ ॥೧೨॥

ದೇಹೋಽಹಮಿತ್ಯಹಂಕಾರಂ ದ್ವೈತಸ್ಥಿತಿರೀತೀರಿತಂ ।
ದ್ವೈತವೃತ್ತಿಸ್ಸಾಕ್ಷಿವೃತ್ತಿರಖಂಡಾಕಾರವೃತ್ತಿಕಂ ॥೧೩॥

ಸರ್ವಂ ಸಾಕ್ಷಿರಹಂ ಬ್ರಹ್ಮ ಇತ್ಯೇವಂ ದೃಢನಿಶ್ಚಯಂ ।
ಸರ್ವದಾಽಸಂಶಯಂ ಬ್ರಹ್ಮ ಸಾಕ್ಷಿವೃತ್ತಿರಿತೀರಿತಂ ॥೧೪॥

ಅಖಂಡೈಕರಸಂ ಚೇತಿ ಲೋಕೇ ವೃತ್ತಿತ್ರಯಂ ಭವೇತ್ ।
ಪ್ರಥಮೇ ನಿಶ್ಚಿತೇ ದ್ವೈತೇ ದ್ವಿತೀಯೇ ಸಾಕ್ಷಿಸಂಶಯಃ ॥೧೫॥

ತೃತೀಯೇ ಪದಭಾಗೇತು ದೃಢನಿಶ್ಚಯಮೀರಿತಂ ।
ಏತತ್ರಯಾರ್ಥಂ ಸಂಶೋಧ್ಯ ತಂ ಪರಿತ್ಯಜ್ಯ ನಿಶ್ಚಿನು ॥೧೬॥

---

ಆ ಶೂನ್ಯಸ್ಥಿತಿಯನ್ನೂ ಬಿಟ್ಟು ಮೌನವಾಗಿರಬೇಕು. ಮನಸ್ಸನ್ನು ಕಲ್ಪನೆಗಳಿಗೊಳಪಡಿಸದಂತೆ ಬಿಗಿಹಿಡಿಯಬೇಕು. ಏಕೆಂದರೆ ಆ ಮನಸ್ಸೇ ನೂರಾರು ಜಗತ್ತನ್ನು ಕಲ್ಪಿಸುವುದು. ॥೧೨॥

ದೇಹವು ನಾನು-ಎಂಬುದೇ ಅಹಂಕಾರವು. ಅದು ಅನಾತ್ಮಭೇದವನ್ನು ಆತ್ಮನಿಗೆ ಕಲ್ಪಿಸುವುದಾದರೂ ಆತ್ಮಭೇದವನ್ನು ಕಲ್ಪಿಸುವುದು. ಆದುದರಿಂದ ಆ ಅಹಂಕಾರವು ಭೇದರೂಪವಾದುದು, ಈ ಭೇದಜ್ಞಾನವಿದ್ದರೇ ಸುಷುಪ್ತಿಯಲ್ಲಿ ಸಾಕ್ಷಿಯೋರ್ವನಿರುವನು, ಅವನು ಅಖಂಡಾಕಾರವೃತ್ತಿಯನ್ನು ವಿಷಯೀಕರಿಸುವನು-ಎಂದು ತಿಳಿಯಬಹುದು. ॥೧೩॥

ಯಾವಾಗಲೂ ನಿಶ್ಚಯರೂಪವಾದ ಬ್ರಹ್ಮವಸ್ತುವೇ ಸಾಕ್ಷಿಜ್ಞಾನವು. ಆದುದರಿಂದ ಸರ್ವಸಾಕ್ಷಿಯಾದವನು ಬ್ರಹ್ಮ. ಆ ಬ್ರಹ್ಮವಸ್ತುವೇ ನಾನು-ಎಂದು ದೃಢವಾಗಿ ತಿಳಿಯಬೇಕು. ॥೧೪॥

ಹೀಗೆ ದ್ವೈತವೃತ್ತಿ, ಸಾಕ್ಷಿವೃತ್ತಿ, ಅಖಂಡಾಕಾರವೃತ್ತಿ-ಎಂದು ಮೂರು ವೃತ್ತಿಗಳಾದವು. ಮೊದಲನೆಯದು ದ್ವೈತನಿಶ್ಚಯದಿಂದ ಕೂಡಿದ್ದು, ಎರಡನೆಯದು

ಅಖಂಡೈಕರಸಾಕಾರೋ ನಿತ್ಯಂ ತನ್ಮಯತಾಂ ವ್ರಜ ।
ಅಭ್ಯಾಸವಾಕ್ಯಮೇತತ್ತು ಸದಾಭ್ಯಾಸಸ್ಯ ಕಾರಣಂ ॥೧೭॥

ಮನನಸ್ಯ ಪರಂ ವಾಕ್ಯಂ ಯೋಽಯಂ ಚಂದನವೃಕ್ಷವತ್ ।
ಯುಕ್ತಿಭಿಶ್ಚಿಂತನಂ ವೃತ್ತಂ ಪದತ್ರಯಮುದಾಹೃತಂ ॥೧೮॥

ಅಹಂಪದಸ್ಯ ಜೀವೋಽರ್ಥೋಽ ಈಶೋ ಬ್ರಹ್ಮಪದಸ್ಯ ಹಿ ।
ಅಸ್ಮೀತಿ ಪದಭಾಗಸ್ಯ ಅಖಂಡಾಕಾರವೃತ್ತಿಕಂ ॥೧೯॥

ಪದತ್ರಯಂ ಪರಿತ್ಯಜ್ಯ ವಿಚಾರ್ಯ ಮನಸಾ ಸಹ ।
ಅಖಂಡೈಕರಸಂ ಪ್ರಾಪ್ಯ ವಿದೇಹೋ ಮುಕ್ತಿಲಕ್ಷಣಂ ॥೨೦॥

---

ಸಾಕ್ಷಿಸಂಶಯವನ್ನುಂಟುಮಾಡುವುದು, ಮೂರನೆಯದು ಅಖಂಡನಿಶ್ಚಯವನ್ನುಂಟು ಮಾಡುವುದು. ಹೀಗೆ ಮೂರನ್ನೂ ಸಂಶೋಧಿಸಿ ಈ ಮೂರನ್ನೂ ಬಿಟ್ಟು ಅದ್ವಿತೀಯ ನಿಶ್ಚಯವುಳ್ಳವನಾಗು. ॥೧೫-೧೬॥

ಹಾಗೆ ನಿಶ್ಚಯವುಳ್ಳವನಾಗಿ ಅಖಂಡಬ್ರಹ್ಮಾನಂದಸ್ವರೂಪನಾಗು. ಪ್ರಜ್ಞಾನಂ ಬ್ರಹ್ಮ ಅಸ್ಮಿ-ಈ ಮೂರು ಪದಾರ್ಥಗಳನ್ನು ಹಿಂದೆ ಹೇಳಿದ ರೀತಿಯಲ್ಲಿ ಶೋಧಿಸಿ ಅಭ್ಯಾಸಮಾಡಬೇಕು. ॥೧೭॥

ಪ್ರಜ್ಞಾನಂ ಬ್ರಹ್ಮ ಅಸ್ಮಿ ಈ ಮೂರುಪದಗಳನ್ನೇ ಸಾಧನವಾಗಿಟ್ಟುಕೊಂಡು ಅವನ್ನು ಯುಕ್ತಿಯಿಂದ ಚಿಂತಿಸಬೇಕು. ಚಂದನವೃಕ್ಷವಾದುದರಿಂದ, ಅಲ್ಲಿ ಹಾವಿದೆ ಎಂದು ಚಿಂತಿಸುವಂತೆ ಪರಬ್ರಹ್ಮವಸ್ತುವನ್ನು ಕಾರಣಗಳಿಂದ ಊಹಿಸಬೇಕು.॥೧೮॥

ಈಗ "ಅಹಂ ಬ್ರಹ್ಮಾಸ್ಮಿ" ಈ ವಾಕ್ಯದ ಅರ್ಥವನ್ನು ವಿವರಿಸುವೆನು ಕೇಳು. ಅಹಂ ಎಂದರೆ ಜೀವನು, ಬ್ರಹ್ಮನೆಂದರೆ ಈಶ್ವರನು, ಅಸ್ಮಿ-ಎನ್ನುವುದು ಜೀವೇಶ್ವರರು ಅಭಿನ್ನರು ಅಂಶಾಂಶಿಗಳಲ್ಲ, ಅಖಂಡಸ್ವರೂಪರು ಎನ್ನುವುದನ್ನು ತಿಳಿಸುವುದು. ॥೧೯॥

ಅಹಂ ಬ್ರಹ್ಮ ಅಸ್ಮಿ ಈ ಮೂರು ಪದಗಳನ್ನೂ ಬಿಟ್ಟು ಕೇವಲ ಆ ಪದಗಳ ಅರ್ಥವಾದ ಅಖಂಡಬ್ರಹ್ಮವಸ್ತುವನ್ನೇ ವಿಮರ್ಶಿಸಿ, ಅಖಂಡಬ್ರಹ್ಮಾನುಭವ ವುಳ್ಳವನಾಗಿ ವಿದೇಹಮುಕ್ತಿಯನ್ನು ಹೊಂದು. ॥೨೦॥

ಅಹಂ ಬ್ರಹ್ಮಾಸ್ಮಿ ನಿತ್ಯೋಽಸ್ಮಿ ಶಾಂತೋಽಸ್ಮಿ ಪರಮೋಽಸ್ಮ್ಯಹಂ ।
ನಿರ್ಗುಣೋಽಹಂ ನಿರೀಹೋಽಹಂ ನಿರೀಶೋಽಸ್ಮಿ ಸದಾಸ್ಮೃತಃ ॥೨೧॥

ಆತ್ಮೈವಾಸ್ಮಿ ನ ಸಂದೇಹ ಅಖಂಡೈಕರಸೋಽಸ್ಮ್ಯಹಂ ।
ಏವಂ ನಿರಂತರಂ ತಜ್ಞೋ ಭಾವಯೇತ್ಪರಮಾತ್ಮನಿ ॥೨೨॥

ಯಥಾಚಾನುಭವಂ ವಾಕ್ಯಂ ತಸ್ಮಾದನುಭವೇತ್ಸದಾ ।
ಅಭಯಂ ದ್ವಿತೀಯಸ್ಯಾನುಸ್ಮೃತಮಭ್ಯಾಸವಾಕ್ಯತಃ ॥೨೩॥

ತೃತೀಯಂ ತತ್ತ್ವಮಸೀತಿ ವಾಕ್ಯಂ ಸಾಮಾನ್ಯನಿರ್ಣಯಂ ।
ತತ್ಪದಂ ತ್ವಂಪದಂತಸ್ಯ ಪದತ್ರಯಮುದಾಹೃತಂ ॥೨೪॥

ತತ್ಪದಸ್ಯೇಶ್ವರೋ ಹ್ಯರ್ಥೋ ಜೀವೋಽರ್ಥಸ್ತ್ವಂ ಪದಸ್ಯ ಹಿ ।
ಐಕ್ಯಂ ಭಾವಪದಸ್ಯಾರ್ಥಮಖಂಡೈಕರಸಂ ಸ್ಮೃತಂ ॥೨೫॥

---

ನಾನು ಬ್ರಹ್ಮವಸ್ತುವಾಗಿರುವೆನು, ನಾನು ನಿತ್ಯನು, ಶಾಂತನು, ಪರಮಾತ್ಮನು, ನಿರ್ಗುಣನು, ನಿಸ್ಪೃಹನು, ನನಗೆ ಈಶ್ವರನಿಲ್ಲ ಎಂದು ತಿಳಿಯಬೇಕು. ॥೨೧॥

ಪರಮಾತ್ಮನು ನಾನು, ಅಖಂಡಬ್ರಹ್ಮರೂಪನು ನಾನು ಎಂದು ನಿರಂತರವೂ ತನ್ನ ಪರಮಾತ್ಮರೂಪವನ್ನು ಭಾವಿಸಿಕೊಳ್ಳಬೇಕು. ॥೨೨॥

"ಅಹಂ ಬ್ರಹ್ಮಾಸ್ಮಿ" ಎನ್ನುವ ಈ ಎರಡನೆಯ ವಾಕ್ಯವು ನಾನೇ ಬ್ರಹ್ಮನೆಂದೂ ಎರಡನೆಯ ವಸ್ತುವಿಲ್ಲವೆಂದೂ ಅದ್ವಿತೀಯತ್ವವನ್ನು ನಿರ್ದೇಶಿಸಿ ಎರಡನೆಯದರಿಂದ ಭಯವು ಇಲ್ಲ. ಎರಡನೆಯ ವಸ್ತುವೇ ಇಲ್ಲದುದರಿಂದ ಯಾವ ಭಯವೂ ಇಲ್ಲ ಎಂದು ಬ್ರಹ್ಮನ ಅಭಯಸ್ವರೂಪವನ್ನು ವಿವರಿಸುವುದು. ॥೨೩॥

ಮೂರನೆಯದು "ತತ್ತ್ವಮಸಿ" ಎಂಬ ವಾಕ್ಯವು. ಈ ವಾಕ್ಯದಲ್ಲಿ ತತ್, ತ್ವಂ, ಅಸಿ ಎಂದು ಮೂರು ಪದಗಳಿದ್ದು ಸಾಮಾನ್ಯ ನಿರ್ಣಯವನ್ನು ಹೀಗೆ ವಿವರಿಸುವುವು. ॥೨೪॥

ಈ ವಾಕ್ಯದ ತತ್ ಪದಕ್ಕೆ ಈಶ್ವರನೆಂದರ್ಥವು. ತ್ವಂ ಪದಕ್ಕೆ ಜೀವನು ಅರ್ಥ, ಅಸಿ ಎನ್ನುವುದು ಈ ಜೀವೇಶ್ವರರಿಗೆ ಅಖಂಡಾಭೇದವನ್ನು ಸೂಚಿಸುವುದು. ॥೨೫॥

ದ್ವೈತವೃತ್ತಿಸ್ಸಾಕ್ಷಿವೃತ್ತಿರಖಂಡಾಕಾರವೃತ್ತಿಕಃ ।
ಅಖಂಡಂ ಸಚ್ಚಿದಾನಂದಂ ತತ್ತ್ವಮೇವಾಸಿ ನಿಶ್ಚಯಃ ॥೨೬॥

ತ್ವಂ ಬ್ರಹ್ಮಾಸಿ ನ ಸಂದೇಹಸ್ತ್ವಮೇವಾಸಿ ಚಿದವ್ಯಯಃ ।
ತ್ವಮೇವ ಸಚ್ಚಿದಾನಂದಸ್ತ್ವಮೇವಾಖಂಡನಿಶ್ಚಯಃ ॥೨೭॥

ಇತ್ಯೇವಮುಕ್ತೋ ಗುರುಣಾ ಸ ಏವ ಪರಮೋ ಗುರುಃ ।
ಅಹಂ ಬ್ರಹ್ಮೇತಿ ನಿಶ್ಚಿತ್ಯ ಸಚ್ಛಿಷ್ಯಂ ಪರಮಾತ್ಮವಾನ್ ॥೨೮॥

ನಾನ್ಯೋ ಗುರುರ್ನಾನ್ಯಶ್ಶಿಷ್ಯಸ್ತ್ವಂ ಬ್ರಹ್ಮಾಸಿ ಗುರುಃ ಪರಃ ।
ಸರ್ವಮಂತ್ರೋಪದೇಷ್ಟಾರೋ ಗುರವಸ್ಸಗುರುಃ ಪರಃ ॥೨೯॥

ತ್ವಂ ಬ್ರಹ್ಮಾಸೀತಿ ವಕ್ತಾರಂ ಗುರುರೇವೇತಿ ನಿಶ್ಚಿನು ।
ತಥಾ ತತ್ತ್ವಮಸಿ ಬ್ರಹ್ಮ ತ್ವಮೇವಾಸಿ ಚ ಸದ್ಗುರುಃ ॥೩೦॥

---

ತ್ವಂ ಪದದ ನೀನು ಎಂಬುದು ದ್ವೈತಭಾವವು, ತತ್ಪದದ ಅವನು ಎಂಬರ್ಥವು ಸಾಕ್ಷಿಯಾದ ಈಶ್ವರರೂಪವು. ಅಸಿ (ಆಗಿರುವೆ) ಎನ್ನುವುದು ಅಖಂಡ ಬ್ರಹ್ಮಭಾವವು. ಆ ಅಖಂಡವಸ್ತುವು ಸತ್ಯಜ್ಞಾನಾನಂದಸ್ವರೂಪವಾದುದು. "ಆ ಅಖಂಡಬ್ರಹ್ಮವೇ ನೀನು" ಎಂಬುದೇ ತತ್ತ್ವಮಸಿ ವಾಕ್ಯದ ಪರಮಾರ್ಥವು. ॥೨೬॥

ನೀನೇ ಬ್ರಹ್ಮ, ನೀನು ನಾಶರಹಿತನು, ಸತ್ಯಜ್ಞಾನಾನಂದರೂಪನು ನೀನು, ಅಖಂಡಬ್ರಹ್ಮಜ್ಞಾನಸ್ವರೂಪನು ನೀನು, ಇದು ನಿಶ್ಚಯವು. ॥೨೭॥

ಹೀಗೆ ತಾನೇ ಬ್ರಹ್ಮನೆಂಬ ಆತ್ಮಾನುಭವವುಳ್ಳವನಾಗಿ ಯಾವನು ಸಚ್ಛಿಷ್ಯನಿಗೆ ಈ ವಿಷಯವನ್ನು ಉಪದೇಶಿಸುವನೋ ಅವನೇ ನಿಜವಾದ ಗುರುವು. ಶಿಷ್ಯನನ್ನು ಗುರುವನ್ನಾಗಿ ಮಾಡುವ ಚೈತನ್ಯವುಳ್ಳವನೇ ನಿಜವಾದ ಗುರುವು. ॥೨೮॥

ಗುರುವು ಬೇರೆಯಲ್ಲ. ಶಿಷ್ಯನು ಬೇರೆಯಲ್ಲ. ಅವರೀರ್ವರೂ ಪರಮ ಗುರುವಾದ ಬ್ರಹ್ಮವಸ್ತುವೇ ಆಗಿರುವರು. ನೀನೇ ಆ ಪರಮಗುರುವು. ॥೨೯॥

ನೀನೇ ಬ್ರಹ್ಮನೆಂದು ಹೇಳುವವನೇ ನಿಜವಾದ ಗುರುವು. ಆ ಗುರುವೂ ಸಹ ನಿನ್ನಿಂದ ಬೇರೆಯಲ್ಲ, ಈರ್ವರೂ ಬ್ರಹ್ಮರೂಪರೇ. ॥೩೦॥

ಸದ್ಗುರೋರ್ವಚನಂ ಯಸ್ತು ನಿಶ್ಚಯಂ ದೃಢನಿಶ್ಚಯಂ ।
ಕರೋತಿ ಸತತಂ ಮುಕ್ತೋ ನಾತ್ರ ಕಾರ್ಯಾ ವಿಚಾರಣಾ ॥೩೧॥

ಮಹಾವಾಕ್ಯಂ ಗುರೋರ್ವಾಕ್ಯಂ ತತ್ತ್ವಮಸ್ಯಾದಿವಾಕ್ಯಕಂ ।
ಸರ್ವವೇದಾಂತವಾಕ್ಯಾನಾಮದ್ವೈತೇ ಬ್ರಹ್ಮಣಿ ಸ್ಥಿತಿಃ ॥೩೨॥

ಇತ್ಯೇವಂ ಚ ಗುರೋರ್ವಕ್ತ್ರಾಚ್ಛ್ರುತಂ ಬ್ರಹ್ಮೇತಿ ತಚ್ಛ್ರವಃ ।
ಗುರುರ್ನಾನ್ಯೋ ಮಂತ್ರವಾದೀ ಏಕ ಏವ ಹಿ ಸದ್ಗುರುಃ ॥೩೩॥

ತ್ವಂ ಬ್ರಹ್ಮಾಸೀತಿ ಯೇನೋಕ್ತಂ ಏಷ ಏವ ಹಿ ಸದ್ಗುರುಃ ।
ಮಹಾವಾಕ್ಯಂ ಗುರೋರ್ವಾಕ್ಯಂ ತತ್ತ್ವಮಸ್ಯಾದಿವಾಕ್ಯಕಂ ॥೩೪॥

ಶೃಣೋತಿ ಶ್ರವಣಂ ಚಿತ್ತಂ ನಾನ್ಯಚ್ಛ್ರವಣಮುಚ್ಯತೇ ।
ವೇದಾಂತಶ್ರವಣಂ ಚೈವ ನಾನ್ಯಚ್ಛ್ರವಣಮೀರಿತಂ ॥೩೫॥

---

ಸದ್ಗುರುವಿನ ಈ ಅದ್ವಿತೀಯ ಬ್ರಹ್ಮಸ್ವರೂಪವನ್ನು ತಿಳಿಸುವ ಉಪದೇಶವನ್ನು ಯಾವನು ಶ್ರದ್ಧೆಯಿಂದ ಕೇಳುವನೋ ಅವನು ಶೀಘ್ರದಲ್ಲಿ ಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲ. ॥೩೧॥

ಗುರುವಿನ ವಾಕ್ಯವೇ ಮಹಾವಾಕ್ಯವು. "ತತ್ತ್ವಮಸಿ ಮೊದಲಾದ ವೇದಾಂತಗಳಿಗೆ ಅದ್ವಿತೀಯ ಬ್ರಹ್ಮವಸ್ತುವಿನಲ್ಲಿಯೇ ತಾತ್ಪರ್ಯವು" ಎಂದು ಉಪದೇಶಿಸುವ ಗುರುವಿನ ಮಾತನ್ನು ಕೇಳುವುದೇ ನಿಜವಾದ ಕಿವಿಯು. ॥೩೨॥

ಗುರುವೆಂದರೆ ಸುಮ್ಮನೆ ಅರ್ಥವಿಲ್ಲದೆ ಮಂತ್ರವನ್ನು ಹೇಳಿಕೊಡುವವನಲ್ಲ. ತಾನೂ ಅದ್ವಿತೀಯ ಬ್ರಹ್ಮಾನುಭವವುಳ್ಳವನಾಗಿ "ನೀನೇ ಬ್ರಹ್ಮವಸ್ತು"ವು ಎಂದಾವನು ಉಪದೇಶಿಸುವನೋ ಅವನೇ ಸದ್ಗುರುವು. ॥೩೩॥

ಗುರುವಿನ ಅದ್ವಿತೀಯಬ್ರಹ್ಮಪರವಾದ ತತ್ತ್ವಮಸ್ಯಾದಿಮಹಾವಾಕ್ಯಗಳನ್ನು ಕೇಳುವಂತಹ ಮನಸ್ಸೇ ಶ್ರವಣವು. ಬೇರೆಯಾವುದೂ ಶ್ರವಣವಲ್ಲ. ॥೩೪॥

ವೇದಾಂತವಾಕ್ಯಗಳನ್ನು ಕೇಳುವುದೇ ಶ್ರವಣವು, ಆ ವಾಕ್ಯಗಳಿಗೆ ಬ್ರಹ್ಮನಲ್ಲಿಯೇ ತಾತ್ಪರ್ಯವೆಂದು ಯುಕ್ತಿಗಳಿಂದ ಚಿಂತಿಸುವುದು ಮನನವು. ॥೩೫॥

ಯುಕ್ತಿಭಿಶ್ಚಿಂತನಂ ಚೈವ ಮನನಂ ಪರಿಕಥ್ಯತೇ ।
ಏಷ ಚಂದನವೃಕ್ಷೋಽಪಿ ಶ್ರುತೋಽಪಿ ಪರಿಶೋಧ್ಯತೇ ॥೩೬॥

ತ್ವಂ ಬ್ರಹ್ಮಾಸೀತಿ ಚೋಕ್ತೋಽಪಿ ಸಂಶಯಂ ಪರಿವಸ್ಯತಿ ।
ಯುಕ್ತಿರ್ನಾಮ ವದಾಮ್ಯತ್ರ ದೇಹೋ ನಾಹಂ ವಿನಾಶತಃ ॥೩೭॥

ಸ್ಥೂಲದೇಹಂ ಸೂಕ್ಷ್ಮದೇಹಂ ಸ್ಥೂಲಸೂಕ್ಷ್ಮಂ ಚ ಕಾರಣಂ ।
ತ್ರಯಂ ಚ ತುರ್ಯೇ ನಾಸ್ತೀತಿ ಸರ್ವಂ ಚಿನ್ಮಾತ್ರಮೇವ ಹಿ ॥೩೮॥

ತ್ವಂ ಬ್ರಹ್ಮಾಸೀತಿ ಚೋಕ್ತೋಽಪಿ ಸಂಶಯಂ ಪರಿವಸ್ಯತಿ
ಸಂಶೋಧ್ಯ ನಿಶ್ಚಿನೋತ್ಯೇವಮಾತ್ಮಾನಂ ಪರಿಶೋಧ್ಯತೇ ।
ಏತತ್ಸರ್ವಂ ಜಡತ್ವಾಚ್ಚ ದೃಶ್ಯತ್ವಾದ್ಘಟವನ್ನಹಿ ॥೩೯॥

ಅಹಂ ಚೈತನ್ಯಮೇವಾತ್ರ ದೃಗ್ರೂಪತ್ವಾಲ್ಲಯಂ ನ ಹಿ ।
ಸತ್ಯಂ ಜ್ಞಾನಮನಂತಂ ಚ ಆತ್ಮನಃ ಸಹಜಾ ಗುಣಾಃ ॥೪೦॥

---

ಶ್ರವಣಮಾಡಿದ ಈ ವೇದಾಂತವಾಕ್ಯಗಳನ್ನು ಮನನದಿಂದ ಪರಿಶೋಧಿಸಬೇಕು. "ನೀನು ಬ್ರಹ್ಮ"ನೆಂದರೂ ಹೌದೋ, ಅಲ್ಲವೋ ಎಂಬ ಸಂಶಯವು ಬಂದೇ ಬರುವುದು. ಆದುದರಿಂದ ಅದನ್ನು ಯುಕ್ತಿಗಳಿಂದ ನಿಶ್ಚಯಿಸಬೇಕು.॥೩೬॥

ಆ ಯುಕ್ತಿಗಳನ್ನು ಈಗ ಹೇಳುವೆನು—ನಾನು ದೇಹವಲ್ಲ. ದೇಹವು ನಾಶವಾಗುವುದು, ನಾಶವಿಲ್ಲದವನು ನಾನು, ಆದುದರಿಂದ ಸ್ಥೂಲಸೂಕ್ಷ್ಮಕಾರಣ ರೂಪಗಳಾದ ಮೂರು ಬಗೆಯ ದೇಹಗಳೂ ನಾನಲ್ಲ. ನಿತ್ಯಚೈತನ್ಯವು ನಾನು. ॥೩೬-೩೮॥

ನೀನು ಬ್ರಹ್ಮನೆಂದು ಹೇಳಿದರೂ ಮಾನವನು ಸಂಶಯಪಡುವನು. ಆ ಸಂಶಯವನ್ನು ಪರಿಶೋಧಿಸಿ ನಾನೇ ಅದ್ವಿತೀಯಬ್ರಹ್ಮನೆಂದು ನಿಶ್ಚಯವನ್ನು ಹೊಂದಬೇಕು. ಈ ಜಗತ್ತೆಲ್ಲವೂ ಮಡಕೆಯಂತೆ ಜಡವೂ ದೃಶ್ಯವೂ ಆದುದರಿಂದ ಅಸತ್ಯವು, ನಾನೊಬ್ಬನೇ ಸತ್ಯನು ಎಂದು ಯುಕ್ತಿಯಿಂದ ನಿಶ್ಚಯಿಸಬೇಕು.॥೩೯॥

ನಾನೇ ಚೈತನ್ಯನು, ದೃಷ್ಟಿರೂಪನಾದುದರಿಂದ ನನಗೆ ಲಯವಿಲ್ಲವು. ಸತ್ಯ ಜ್ಞಾನಾನಂದಗಳು ನನ್ನ ಸ್ವರೂಪಗಳು. ॥೪೦॥

ಅನೃತಂ ಜಡದುಃಖಾದಿ ಜಗತಃ ಪ್ರಥಿತಾ ಗುಣಾಃ ।
ತಸ್ಮಾದಹಂ ಬ್ರಹ್ಮ ಏವ ಇದಂ ಸರ್ವಮಸತ್ಯಕಂ ॥೪೧॥

ಏವಂ ಚ ಮನನಂ ನಿತ್ಯಂ ಕರೋತಿ ಬ್ರಹ್ಮವಿತ್ತಮಃ ।
ವಕ್ಷ್ಯೇ ನಿದಿಧ್ಯಾಸನಂ ಚ ಉಭಯತ್ಯಾಗಲಕ್ಷಣಂ ॥೪೨॥

ತ್ವಂ ಬ್ರಹ್ಮಾಸೀತಿ ಶ್ರವಣಂ ಮನನಂ ಚಾಹಮೇವ ಹಿ ।
ಏತತ್ತ್ಯಾಗಂ ನಿದಿಧ್ಯಾಸಂ ಸಜಾತೀಯತ್ವಭಾವನಂ ॥೪೩॥

ವಿಜಾತೀಯಪರಿತ್ಯಾಗಂ ಸ್ವಗತತತ್ವವಿಭಾವನಂ ।
ಸರ್ವತ್ಯಾಗಂ ಪರಿತ್ಯಜ್ಯ ತುರೀಯತ್ವಂ ಚ ವರ್ಜನಂ ॥೪೪॥

ಬ್ರಹ್ಮಚಿನ್ಮಾತ್ರಸಾರತ್ವಂ ಸಾಕ್ಷಾತ್ಕಾರಂ ಪ್ರಚಕ್ಷತೇ ।
ಉಪದೇಶಮಹಾವಾಕ್ಯಂ ಅಸ್ತಿತ್ವಮಿತಿನಿರ್ಣಯಃ ॥೪೫॥

ತಥೈವಾನುಭವಂ ವಾಕ್ಯಮಹಂ ಬ್ರಹ್ಮಾಸ್ಮಿ ನಿಶ್ಚಯಃ ।
ಪ್ರಜ್ಞಾನಂ ಬ್ರಹ್ಮವಾಕ್ಯೋತ್ಥಂ ಅಭ್ಯಾಸಾರ್ಥಮಿತೀರಿತಂ ॥೪೬॥

---

ಅಸತ್ಯ, ಜಡತೆ, ದುಃಖ ಇವು ಜಗತ್ತಿನ ಸ್ವಾಭಾವಿಕಗುಣಗಳು. ಆದುದರಿಂದ ನಾನು ಬ್ರಹ್ಮವಸ್ತುವು ಈ ಜಗತ್ತೆಲ್ಲವೂ ಅಸತ್ಯವು. ॥೪೧॥

ಹೀಗೆ ಯಾವಾಗಲೂ ಚಿಂತನೆಯನ್ನು ಬ್ರಹ್ಮಜ್ಞಾನಿಯು ಮಾಡುವನು. ಇದೇ ಮನನವು. ಈಗ ಈ ಶ್ರವಣಮನನಗಳಿಗಿಂತಲೂ ಉತ್ತಮವಾದ ನಿದಿಧ್ಯಾಸನವನ್ನು ಹೇಳುವೆನು. ॥೪೨॥

ನೀನು ಬ್ರಹ್ಮನು ಎಂಬ ಶ್ರವಣವೂ ನಾನೇ ಎಂದು ಮನನವೂ, ಬೇರೆ ಬಗೆಯ ಈ ಎಲ್ಲ ಭಾವನೆಗಳನ್ನೂ ಬಿಟ್ಟು ಕೇವಲ ನಾನೇ ಬ್ರಹ್ಮನೆಂದು ಆತ್ಮಸ್ವರೂಪವನ್ನು ಬಿಡದೇ ಅವಿಚ್ಛಿನ್ನವಾಗಿ ಭಾವಿಸುವುದೇ ನಿದಿಧ್ಯಾಸನವು. ॥೪೩॥

ಎಲ್ಲವೂ ಇಲ್ಲ-ಎನ್ನುವುದನ್ನೂ ಬಿಟ್ಟು ಕೇವಲ ಬ್ರಹ್ಮಸ್ವರೂಪವನ್ನೇ ಹೊಂದುವುದು ಬ್ರಹ್ಮಸಾಕ್ಷಾತ್ಕಾರವು. ॥೪೪॥

ಉಪದೇಶವಾಕ್ಯವು ಬ್ರಹ್ಮನ ಅಸ್ತಿತ್ವವನ್ನು ನಿರ್ಣಯಿಸುವುದು. ನಾನೇ ಬ್ರಹ್ಮನೆಂದು ಅಹಂ ಬ್ರಹ್ಮಾಸ್ಮಿ ಎಂಬ ವಾಕ್ಯವು ಅನುಭವವನ್ನು ನಿರೂಪಿಸುವುದು.

ಅಯಮಾತ್ಮೇತಿವಾಕ್ಯೋತ್ಥದರ್ಶನಂ ವಾಕ್ಯಮೀರಿತಂ ।
ಅಯಮೇವಪದಂ ಚೈಕಂ ಆತ್ಮೇತಿ ಬ್ರಹ್ಮ ಚ ತ್ರಯಂ ॥೪೭॥

ಅಯಂ ಪದಸ್ಯ ಜೀವೋಽರ್ಥ ಆತ್ಮನೋ ಈಶ್ವರಃ ಪರಃ ।
ತಥಾ ಬ್ರಹ್ಮಪದಸ್ಯಾರ್ಥ ಅಖಂಡಾಕಾರವೃತ್ತಿಕಂ ॥೪೮॥

ಅಖಂಡೈಕರಸಂ ಸರ್ವಂ ಪದತ್ರಯಲಯಂ ಗತಂ ।
ಅಖಂಡೈಕರಸೋ ಹ್ಯಾತ್ಮಾ ನಿತ್ಯಶುದ್ಧವಿಮುಕ್ತಕಂ ॥೪೯॥

ಅಯಂ ಪದಸ್ಯ ಜೀವೋಽರ್ಥ ಆತ್ಮೇತೀಶ್ವರಮೀರಿತಂ ।
ಯಸ್ಯಾರ್ಥೋಽಸ್ಮೀತ್ಯಖಂಡಾರ್ಥಂ ಅಖಂಡೈಕರಸಂ ಪದಂ ॥೫೦॥

---

ಪ್ರಜ್ಞಾನಂ ಬ್ರಹ್ಮವಾಕ್ಯವು ಅದೇ ವಿಷಯವನ್ನೇ ದೃಢವಾಗಿ ಅಭ್ಯಾಸಕ್ಕಾಗಿ ನಿರೂಪಿಸುವುದು. ॥೪೫-೪೬॥

ಅಯಮಾತ್ಮಾ ಬ್ರಹ್ಮ ಎಂಬ ವೇದಾಂತಮಹಾವಾಕ್ಯದ ಅರ್ಥವನ್ನು ವಿವರಿಸುವೆನು. ಈ ವಾಕ್ಯದಲ್ಲಿ ಅಯಂ ಆತ್ಮಾ ಬ್ರಹ್ಮ-ಎಂಬ ಮೂರು ಪದಗಳಿರುವುವು. ॥೪೭॥

ಅಯಂ ಪದಕ್ಕೆ ಜೀವನೆಂದರ್ಥವು. ಆತ್ಮಪದಕ್ಕೆ ಈಶ್ವರನೆಂದರ್ಥವು. ಬ್ರಹ್ಮಪದವು ಜೀವೇಶ್ವರರೀರ್ವರಿಗೂ ಅಭಿನ್ನವಾದ ಬ್ರಹ್ಮರೂಪವನ್ನು ಹೇಳುವುದು. ಜೀವೇಶ್ವರರು ಬೇರೆಬೇರೆಯಲ್ಲ. ಬ್ರಹ್ಮರೂಪರು- ಎಂದರ್ಥವು. ॥೪೮॥

ಒಟ್ಟಿನಲ್ಲಿ ಅಯಮಾತ್ಮಾ ಬ್ರಹ್ಮ-ಈ ಮೂರು ಪದಗಳಿಗೂ ಅಖಂಡಬ್ರಹ್ಮರೂಪವೇ ಅರ್ಥವು. ಆತ್ಮನೂ ಸಹ ನಿತ್ಯಶುದ್ಧಮುಕ್ತನಾದ ಅಖಂಡಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೪೯॥

ಒಟ್ಟಿನಲ್ಲಿ ಅಯಂಪದಕ್ಕೆ ಜೀವನೇ ಅರ್ಥವು. ಆತ್ಮಪದಕ್ಕೆ ಈಶ್ವರನು ಅರ್ಥವು. ಅಸ್ಮಿ-ಎಂಬುವುದನ್ನಧ್ಯಾಹಾರಮಾಡಿ ಅಖಂಡಬ್ರಹ್ಮಸ್ವರೂಪರೇ ಜೀವೇಶ್ವರರೆಂದು ಅಖಂಡವಾಕ್ಯಾರ್ಥವನ್ನು ಹೇಳಬೇಕು. ॥೫೦॥

ದ್ವೈತವೃತ್ತಿಃ ಸಾಕ್ಷಿವೃತ್ತಿರಖಂಡಾಕಾರವೃತ್ತಿಕಂ ।
ಅಖಂಡೈಕರಸಂ ಪಶ್ಚಾತ್ಸೋಽಹಮಸ್ಮೀತಿ ಭಾವಯ ॥೫೦॥

ಇತ್ಯೇವಂ ಚ ಚತುರ್ವಾಕ್ಯಂ ತಾತ್ಪರ್ಯಾರ್ಥಸಮೀರಿತಂ ।
ಉಪಾಧಿಸಹಿತಂ ವಾಚ್ಯಂ ಕೇವಲಂ ಲಕ್ಷ್ಯಮೀರಿತಂ ॥೫೨॥

ಕಿಂಚಿಜ್ಞತ್ವಾದಿ ಜೀವಸ್ಯ ಸರ್ವಜ್ಞತ್ವಾದಿಚೇಶ್ವರಃ ।
ಜೀವಾಪರೋಕ್ಷಚೈತನ್ಯಂ ಈಶ್ವರೋಽಹಂ ಪರೋಕ್ಷಕಃ ॥೫೩॥

ಸರ್ವಂ ಶೂನ್ಯಮಿತಿ ತ್ಯಜ್ಯ ಬ್ರಹ್ಮಾಸ್ಮೀತಿ ವಿನಿಶ್ಚಯಃ ।
ಅಹಂ ಬ್ರಹ್ಮ ನ ಸಂದೇಹ ಅಹಮಾನಂದವಿಗ್ರಹಃ ॥೫೪॥

ಏವಮೈಕ್ಯಂ ಪರಂಗತ್ವಾ ಸ್ವಸ್ವಭಾವೋ ಭವೋತ್ತಮ ।
ಏತತ್ಸರ್ವಂ ಮಹಾಮಿಥ್ಯಾ ನಾಸ್ತಿ ನಾಸ್ತಿ ನ ಸಂಶಯಃ ॥೫೫॥

---

ಅಯಂ-ಎನ್ನುವುದು ಭೇದಜ್ಞಾನವು, ಆತ್ಮನೆಂಬುದು ಸಾಕ್ಷಿಜ್ಞಾನವು, ಬ್ರಹ್ಮನೆಂಬುದು ಅಖಂಡಜ್ಞಾನವು, ಆ ಅಖಂಡಜ್ಞಾನವೇ ನಾನು-ಎಂದರೆ ನಾನೇ ಬ್ರಹ್ಮವಸ್ತುವು-ಎಂದು ಭಾವಿಸು. ॥೫೧॥

ಹೀಗೆ ನಾಲ್ಕು ವೇದಾಂತವಾಕ್ಯಗಳ ತಾತ್ಪರ್ಯಾರ್ಥವನ್ನೂ ಹೇಳಿರುವೆನು. ಈ ವಾಕ್ಯಗಳಿಗೆ ಉಪಾಧಿಸಹಿತ ಬ್ರಹ್ಮವಸ್ತುವೇ ಲಕ್ಷ್ಯವು. ನಿರುಪಾಧಿಕವಾದುದಕ್ಕೆ ಲಕ್ಷ್ಯತ್ವವೇ ಹೊಂದುವುದಿಲ್ಲ. ॥೫೨॥

"ತತ್ತ್ವಂ-ಅಸಿ" ಎನ್ನುವಲ್ಲಿ ತ್ವಂಪದಕ್ಕೆ ಕಿಂಚಿಜ್ಞನಾದ ಜೀವನು ಅರ್ಥವು. ತತ್ಪದಕ್ಕೆ ಸರ್ವಜ್ಞನಾದ ಈಶ್ವರನು ಅರ್ಥವು, ಅಸಿ-ಎನ್ನುವುದು ಇವರೀರ್ವರಿಗೂ ಅಭೇದವನ್ನು ಹೇಳುವುದು. ಕಿಂಚಿಜ್ಞಸರ್ವಜ್ಞರಿಗೆ ಅಭೇದವು ಸರಿಹೊಂದುವುದಿಲ್ಲವಾದುದರಿಂದ ಆ ಜೀವೇಶ್ವರರಲ್ಲಿ ಅನುಗತವಾದ ಚೈತನ್ಯಕ್ಕೆ ಅಭೇದವನ್ನು ಹೇಳಬೇಕು. ಆ ಚೈತನ್ಯವೇ ಬ್ರಹ್ಮ, ಆನಂದಮೂರ್ತಿಯಾದ ಬ್ರಹ್ಮನೇ ನಾನು-ಎಂದು ನಿಶ್ಚಯಿಸು. ॥೫೪॥

ಹೀಗೆ ಐಕ್ಯವನ್ನು ಅನುಸಂಧಾನಮಾಡುತ್ತಾ ಸ್ವಸ್ವರೂಪವನ್ನು ಹೊಂದು, ಸ್ವಸ್ವರೂಪವೇ ಬ್ರಹ್ಮವಸ್ತುವು. ಬ್ರಹ್ಮವಸ್ತುವಿನ ಹೊರತು ಮಿಕ್ಕೆಲ್ಲವೂ ಮಿಥ್ಯೆಯು, ಇದು ನಿಶ್ಚಯವು. ॥೫೫॥

ಸರ್ವಂ ನಾಸ್ತಿ ನ ಸಂದೇಹಃ ಸರ್ವಂ ಬ್ರಹ್ಮ ನ ಸಂಶಯಃ ।
ಏಕಾಕಾರಮಖಂಡಾರ್ಥಂ ತದೇವಾಹಂ ನ ಸಂಶಯಃ ॥೫೬॥

ಬ್ರಹ್ಮೇದಂ ವಿತತಾಕಾರಂ ತದ್ಬ್ರಹ್ಮಾಹಂ ನ ಸಂಶಯಃ ॥೫೭॥

॥ ಸೂತ ಉವಾಚ ॥

ಭವೋದ್ಭವಮುಖೋದ್ಭವಂ ಭವಹರಾದ್ಯ ಹೃದ್ಯಂ ಭುವಿ
ಪ್ರಕೃಷ್ಟವರಭಾವತಃ ಪ್ರಥಿತಬೋಧಬುದ್ಧಂ ಭವ ।
ಭಜಂತಿ ಭಸಿತಾಂಗಕಾ ಭರಿತಮೋದಭಾರಾದರಾಃ
ಭುಜಂಗವರಭೂಷಣಂ ಭುವನಮುಧ್ಯವೃಂದಾವನಂ ॥೫೮॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಏಕತ್ರಿಂಶೋಽಧ್ಯಾಯಃ

---

ಎಲ್ಲವೂ ಬ್ರಹ್ಮವಸ್ತುವು, ಬೇರೆಯಲ್ಲ. ಬೇರೆಯಾಗಿ ಕಾಣುವುದೆಲ್ಲವೂ ಅಸತ್ಯ, ಅಖಂಡಸ್ವರೂಪವಾದ ಬ್ರಹ್ಮವಸ್ತುವೇ ನಾನು, ಜಗದ್ವ್ಯಾಪಕವಾದ ಬ್ರಹ್ಮ ವಸ್ತುವೇ ನಾನು. ॥೫೬-೫೭॥

ಇಂತಹ ಪರಬ್ರಹ್ಮರೂಪನಾದ ಪರಮೇಶ್ವರನನ್ನು ಅಖಂಡಬ್ರಹ್ಮಜ್ಞಾನವುಳ್ಳಂತಹ ಮಹನೀಯರು ಭಸ್ಮರುದ್ರಾಕ್ಷಧಾರಿಗಳಾಗಿ ಸಂತಸದಿಂದ ಅರ್ಚಿಸುವರು. ಹೀಗೆಂದು ಪರಮೇಶ್ವರನೇ ಪಾರ್ವತಿಗೆ ಬೋಧಿಸಿದ ವಿಷಯವನ್ನು ಸೂತಮಹರ್ಷಿಗಳು ಇತರ ಮಹರ್ಷಿಗಳಿಗೆ ತಿಳಿಯಪಡಿಸಿದರು. ॥೫೮॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯಂಶದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ದ್ವಾತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ಪುನರಸತ್ತ್ಯಾಗಂ ಬ್ರಹ್ಮನಿಶ್ಚಯಮೇವ ಚ ।
ಯಸ್ಯ ಶ್ರವಣಮಾತ್ರೇಣ ಸದ್ಯೋ ಮುಕ್ತೋ ಭವೇನ್ನರಃ ॥೧॥

ಚಿತ್ತಸತ್ತಾ ಮನಸ್ಸತ್ತಾ ಬ್ರಹ್ಮಸತ್ತಾಽನ್ಯಥಾ ಸ್ಥಿತಾ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೨॥

ದೇಹಸತ್ತಾ ಲಿಂಗಸತ್ತಾ ಭಾವಸತ್ತಾಕ್ಷರಾ ಸ್ಥಿತಾ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೩॥

---

## ಮೂವತ್ತೆರಡನೆಯ ಅಧ್ಯಾಯವು

ಎಲೈ ನಿದಾಘಮುನಿಯೇ, ಯಾವುದನ್ನು ಕೇಳಿದಮಾತ್ರದಿಂದ ನರನು ಮುಕ್ತನಾಗಬಲ್ಲನೋ ಅಂತಹ, ಅಸತ್ಯಾಂಶವಿಲ್ಲದ ಬ್ರಹ್ಮನಿಶ್ಚಯವನ್ನು ಈಗ ಹೇಳುವೆನು ಕೇಳು. ॥೧॥

ಬ್ರಹ್ಮನ ಹೊರತಾಗಿ ಚಿತ್ತವೆಂಬುದಿದೆಯೆನ್ನುವುದೂ ಮನಸ್ಸಿದೆಯೆನ್ನುವುದೂ ಇವೆಲ್ಲವೂ ಸುಳ್ಳು. ಬ್ರಹ್ಮನೋರ್ವನೇ ಇರುವವನು, ಆ ಬ್ರಹ್ಮವಸ್ತುವೇ ನಾನು. ॥೨॥

ಬ್ರಹ್ಮನ ಹೊರತಾಗಿ ದೇಹವೆನ್ನುವುದಾಗಲೀ, ಲಿಂಗವೆನ್ನುವುದಾಗಲೀ ಇಲ್ಲ. ಎಲ್ಲವೂ ಸುಳ್ಳು, ಆ ಬ್ರಹ್ಮವಸ್ತುವೇ ನಾನು. ॥೩॥

ದೃಶ್ಯಂ ಚ ದರ್ಶನಂ ದ್ರಷ್ಟಾ ಕರ್ತಾ ಕಾರಯಿತಾ ಕ್ರಿಯಾ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೪॥

ಏಕಂ ದ್ವಿತ್ವಂ ಪೃಥಗ್ಭಾವಂ ಅಸ್ತಿ ನಾಸ್ತೀತಿ ನಿರ್ಣಯಃ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೫॥

ಶಾಸ್ತ್ರಭೇದಂ ವೇದಭೇದಂ ಮುಕ್ತೀನಾಂ ಭೇದಭಾವನಂ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೬॥

ಜಾತಿಭೇದಂ ವರ್ಣಭೇದಂ ಶುದ್ಧಾಶುದ್ಧವಿನಿರ್ಣಯಃ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೭॥

ಅಖಂಡಾಕಾರವೃತ್ತಿಶ್ಚ ಅಖಂಡೈಕರಸಂ ಪರಂ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೮॥

---

ನೋಟ, ನೋಡಲ್ಪಡುವ ವಸ್ತು, ನೋಡುವವನು—ಎಂಬ ಈ ಮೂರು ಭೇದಗಳೂ, ಕರ್ತೃ, ಕಾರ್ಯವನ್ನು ಮಾಡಿಸುವವನು ಎಂಬ ಭೇದಗಳೂ ಸಹ ಸುಳ್ಳು, ಬ್ರಹ್ಮನೋರ್ವನೇ ಸತ್ಯ. ॥೪॥

ಒಂದು-ಎರಡು ಎಂದು ಮೊದಲಾದ ಸಂಖ್ಯಾಭೇದಗಳು, ಇದೆ ಇಲ್ಲ ಎನ್ನುವ ನೂರಾರು ಬಗೆಯ ವಿಕಲ್ಪಗಳು, ಇವೆಲ್ಲವೂ ಸುಳ್ಳು. ಬ್ರಹ್ಮವಸ್ತುವೊಂದೇ ಸತ್ಯ, ಆ ಬ್ರಹ್ಮವಸ್ತುವೇ ನಾನು. ॥೫॥

ನೂರಾರು ಶಾಸ್ತ್ರಗಳ ಭೇದ, ವೇದಗಳ ಭೇದ, ಸಾಮೀಪ್ಯ ಮೊದಲಾದ ಮುಕ್ತಿಯ ಭೇದ ಇವೆಲ್ಲವೂ ಸುಳ್ಳು, ಬ್ರಹ್ಮನೋರ್ವನೇ ಸತ್ಯ. ॥೬॥

ನಾನಾ ಜಾತಿಗಳು, ನೂರೆಂಟುವರ್ಣಗಳು, ಮಡಿಮೈಲಿಗೆ ಮೊದಲಾದುದೆಲ್ಲವೂ ಸುಳ್ಳು. ಬ್ರಹ್ಮವಸ್ತುವೊಂದೇ ಸತ್ಯವು. ॥೭॥

ಅಖಂಡವಾದ ಬ್ರಹ್ಮಜ್ಞಾನ, ಬ್ರಹ್ಮಾನಂದ ಎನ್ನುವುದೆಲ್ಲವೂ ಸುಳ್ಳು, ಬ್ರಹ್ಮವಸ್ತುವೊಂದೇ ಸತ್ಯ. ॥೮॥

ಪರಾಪರವಿಕಲ್ಪಶ್ಚ ಪುಣ್ಯಪಾಪವಿಕಲ್ಪನಂ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೯॥

ಕಲ್ಪನಾಕಲ್ಪನಾ ದ್ವೈತಂ ಮನಃಕಲ್ಪನಭಾವನಂ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೧೦॥

ಸಿದ್ಧಂ ಸಾಧ್ಯಂ ಸಾಧನಂ ಚ ಶಾಸನಂ ಬ್ರಹ್ಮಭಾವನಂ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೧೧॥

ಆತ್ಮಜ್ಞಾನಂ ಮನೋಧರ್ಮಂ ಮನೋಽಭಾವೇ ಕುತೋಭವೇತ್ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೧೨॥

ಅಜ್ಞಾನಂ ಚ ಮನೋಧರ್ಮಸ್ತದಭಾವೇ ಚ ತತ್ಕುತಃ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೧೩॥

---

ಉತ್ತಮಾಧಮಗಳ ಕಲ್ಪನೆ, ಪುಣ್ಯಪಾಪಗಳ ಕಲ್ಪನೆ ಇವೆಲ್ಲವೂ ಸುಳ್ಳು. ಬ್ರಹ್ಮನೊಬ್ಬನೇ ಸತ್ಯ, ಆ ಬ್ರಹ್ಮನೇ ನಾನು. ॥೯॥

ನೂರೆಂಟು ಕಲ್ಪನೆಗಳೆಲ್ಲವೂ ದ್ವೈತವು, ಮನಸ್ಸು ಹಾಗೆ ದ್ವೈತವನ್ನು ಕಲ್ಪಿಸುವುದು. ಆದರೆ ಆ ದ್ವೈತವು ಸುಳ್ಳು. ॥೧೦॥

ಸಿದ್ಧವಾದ ವಸ್ತು, ಸಾಧಿಸಲ್ಪಡುವ ವಸ್ತು, ಅದರ ಸಾಧನ, ಶಾಸನ, ಬ್ರಹ್ಮ ಭಾವನೆ-ಗಳೆನ್ನುವುದೆಲ್ಲವೂ ಸುಳ್ಳು. ಬ್ರಹ್ಮವಸ್ತುವೊಂದೇ ಸತ್ಯವು. ॥೧೧॥

ಆತ್ಮಜ್ಞಾನವೆಂಬುದೂ ಸುಳ್ಳು, ಹೇಗೆಂದರೆ ಜ್ಞಾನವೆಂಬುದು ಮನಸ್ಸಿನ ಧರ್ಮವಲ್ಲವೆ? ಆ ಮನಸ್ಸೇ ಇಲ್ಲದಿದ್ದಮೇಲೆ ಆತ್ಮಜ್ಞಾನವೆನ್ನುವುದೆಲ್ಲಿಯದು? ಆದುದರಿಂದ ಅದೂ ಸುಳ್ಳು, ಬ್ರಹ್ಮವಸ್ತುವೊಂದೇ ಸತ್ಯವು. ॥೧೨॥

ಅಜ್ಞಾನವೆಂಬುದೂ ಸುಳ್ಳು, ಏಕೆಂದರೆ-ಅಜ್ಞಾನವು ಮನಸ್ಸಿನ ಧರ್ಮವು, ಮನಸ್ಸೇ ಇಲ್ಲದಿದ್ದಮೇಲೆ ಅದರ ಧರ್ಮವೆನ್ನುವ ಅಜ್ಞಾನವೆಲ್ಲಿಯದು? ಆದುದರಿಂದ ಅಜ್ಞಾನವೂ ಸುಳ್ಳು, ಬ್ರಹ್ಮವಸ್ತುವೊಂದೇ ಸತ್ಯವು. ॥೧೩॥

ಶಮೋ ದಮೋ ಮನೋಧರ್ಮ ಸ್ತದಭಾವೇ ಚ ತತ್ಕುತಃ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೧೪॥

ಬಂಧಮೋಕ್ಷೌ ಮನೋಧರ್ಮೌ ತದಭಾವೇ ಕುತೋ ಭವೇತ್ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೧೫॥

ಸರ್ವಂ ಮಿಥ್ಯಾ ಜಗನ್ಮಿಥ್ಯಾ ದೇಹೋ ಮಿಥ್ಯಾ ಜಡತ್ವತಃ ।
ಬ್ರಹ್ಮಲೋಕಸ್ಸದಾ ಮಿಥ್ಯಾ ಬುದ್ಧಿರೂಪಂ ತದೇವ ಹಿ ॥೧೬॥

ವಿಷ್ಣುಲೋಕಸ್ಸದಾ ಮಿಥ್ಯಾ ಶಿವಮೇವ ಹಿ ಸರ್ವದಾ ।
ರುದ್ರಲೋಕಸ್ಸದಾ ಮಿಥ್ಯಾ ಅಹಂಕಾರಸ್ವರೂಪತಃ ॥೧೭॥

ಚಂದ್ರಲೋಕಂ ಸದಾ ಮಿಥ್ಯಾ ಮನೋರೂಪವಿಕಲ್ಪನಂ ।
ದಿಶೋಲೋಕಾಸ್ಸದಾ ಮಿಥ್ಯಾ ಶ್ರೋತ್ರಶ್ಶಬ್ದಸಮನ್ವಿತಃ ॥೧೮॥

ತ್ವಚೋಲೋಕಸ್ಸದಾ ಮಿಥ್ಯಾ ವಾಯೋಃ ಸ್ಪರ್ಶಸಮನ್ವಿತಃ ।
ಸೂರ್ಯಲೋಕಸ್ಸದಾ ಮಿಥ್ಯಾ ನೇತ್ರರೂಪಸಮನ್ವಿತಃ ॥೧೯॥

---

ಮನಸ್ಸೆಂಬುದೂ ಅಸತ್ಯವಾದುದರಿಂದ ಆ ಮನಸ್ಸಿನ ಧರ್ಮಗಳಾದ ಶಮ ದಮುಗಳೂ ಅಸತ್ಯ. ಬ್ರಹ್ಮವಸ್ತುವೊಂದೇ ಸತ್ಯವು. ॥೧೪॥

ಬಂಧಮೋಕ್ಷಗಳೂ ಅಸತ್ಯವಾದ ಮನಸ್ಸಿನ ಧರ್ಮಗಳಾದುದರಿಂದ ಅಸತ್ಯ ವಾದುವುಗಳು, ಬ್ರಹ್ಮವಸ್ತುವೊಂದೇ ಸತ್ಯವು. ॥೧೫॥

ಜಡವಾದುದರಿಂದ ಈ ಜಗತ್ತೆಲ್ಲವೂ ಅಸತ್ಯವು, ಅನಿತ್ಯವು. ಬ್ರಹ್ಮಲೋಕವೂ ಸಹ ಬರಿಯ ಬುದ್ಧಿಕಲ್ಪನೆಯೇ ಹೊರತು ಸತ್ಯವಲ್ಲ. ॥೧೬॥

ಮಂಗಳಕರಗಳೆನ್ನುವ ವಿಷ್ಣುಲೋಕವಾಗಲೀ, ರುದ್ರಲೋಕಗಳಾಗಲೀ ಎಲ್ಲವೂ ಅಸತ್ಯವೇ, ಬ್ರಹ್ಮವಸ್ತುವೊಂದೇ ಸತ್ಯವು. ॥೧೭॥

ಚಂದ್ರಲೋಕವು ಸುಳ್ಳು, ದಿಕ್ಕುಗಳೂ ಸುಳ್ಳು, ಶ್ರೋತ್ರೇಂದ್ರಿಯವೂ ಶಬ್ದವೂ ಅಸತ್ಯ, ಬ್ರಹ್ಮವಸ್ತುವೊಂದೇ ಸತ್ಯ. ॥೧೮॥

ವಾಯುಲೋಕ, ತ್ವಗಿಂದ್ರಿಯ ಸ್ಪರ್ಶಗಳೂ ಅಸತ್ಯ, ಸೂರ್ಯಲೋಕವೂ, ಚಕ್ಷುರಿಂದ್ರಿಯವೂ ರೂಪವೂ ಸಹ ಅಸತ್ಯವಾದವುಗಳು. ॥೧೯॥

ವರುಣಸ್ಯ ಸದಾಲೋಕೋ ಜಿಹ್ವಾ ಸರ್ವಸಮನ್ವಿತಃ ।
ಅಶ್ವಿನೋರ್ಘ್ರಾಣಲೋಕಶ್ಚ ಗಂಧಶ್ಚೈತಸಮನ್ವಿತಃ ॥೨೦॥

ಅಗ್ನೇರ್ಲೋಕಸ್ಸದಾ ಮಿಥ್ಯಾ ವಾಗೇವ ವಚನೇನ ತತ್ ।
ಇಂದ್ರಲೋಕಸ್ಸದಾ ಮಿಥ್ಯಾ ಪಾಣಿಪಾದೇನ ಸಂಯುತಃ ॥೨೧॥

ಉಪೇಂದ್ರಸ್ಯ ಮಹಲ್ಲೋಕೋ ಗಮನೇನ ಪದೇಯುತಂ ।
ಮೃತ್ಯೋರೇವ ಸದಾ ನಾಸ್ತಿ ವಾಯುರೇವ ವಿಸರ್ಗಕಂ ॥೨೨॥

ಪ್ರಜಾಪತೇರ್ಮಹಲ್ಲೋಕೋ ಗುಹ್ಯಮಾನಂದಸಂಯುತಂ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೨೩॥

ತಿತಿಕ್ಷೋಶ್ಚ ಸಮಾಧಾನಂ ಶ್ರದ್ಧಾ ಚಾಚಾರ್ಯಭಾಷಣೇ ।
ಮುಮುಕ್ಷುತ್ವಂ ಚ ಮುಕ್ತಿಶ್ಚ ಮೋಕ್ಷಾರ್ಥೇ ಮಮ ಜೀವನೇ॥೨೪॥

---

ವರುಣಲೋಕವೂ ರಸನೇಂದ್ರಿಯವೂ ರಸವೂ ಸಹ ಅಸತ್ಯ. ಅಶ್ವಿನೀದೇವತೆಗಳ ಲೋಕವೂ ತತ್ಪ್ರಯುಕ್ತವಾದ ಘ್ರಾಣೇಂದ್ರಿಯವೂ ಗಂಧವೂ ಸಹ ಅಸತ್ಯ, ಬ್ರಹ್ಮವಸ್ತುವೊಂದೇ ಸತ್ಯ. ॥೨೦॥

ಅಗ್ನಿಲೋಕವೂ, ವಾಗಿಂದ್ರಿಯವೂ ವಚನವೂ ಅಸತ್ಯವು, ಇಂದ್ರಲೋಕವೂ ಕೈಕಾಲುಗಳೂ ಆ ದಾನವಿಹರಣಗಳೂ ಅಸತ್ಯವಾದವು. ॥೨೧॥

ಉಪೇಂದ್ರಲೋಕವಾಗಲೀ, ಪಾದವಾಗಲೀ, ಮೃತ್ಯುಲೋಕವಾಗಲೀ, ವಿಸರ್ಗವಾಗಲೀ, ಬಿಡುಗಡೆಯ ಲೋಕವಾಗಲಿ ಇವಾವುವೂ ಸತ್ಯವಲ್ಲ. ಬ್ರಹ್ಮವಸ್ತುವೊಂದೇ ಸತ್ಯವು. ಆ ಬ್ರಹ್ಮವಸ್ತುವೇ ನಾನು. ॥೨೨॥

ಪ್ರಜಾಪತಿಯಲೋಕ, ಜನನೇಂದ್ರಿಯ, ಅದರ ಆನಂದ ಇವೆಲ್ಲವೂ ಅಸತ್ಯ. ಬ್ರಹ್ಮವಸ್ತುವೊಂದೇ ಸತ್ಯ. ॥೨೩॥

ಸಹನೆ, ಸಮಾಧಾನ, ಗುರೂಪದೇಶದಲ್ಲಿ ಶ್ರದ್ಧೆ, ಮೋಕ್ಷಾಪೇಕ್ಷೆ, ಮುಕ್ತಿ, ಜೀವನ್ಮುಕ್ತಜೀವನ ಇವೆಲ್ಲವೂ ಅಸತ್ಯ. ॥೨೪॥

ಚತುಸ್ಸಾಧನಸಂಪನ್ನಃ ಸೋಧಿಕಾರೀತಿ ನಿಶ್ಚಯಃ ।
ಜೀವಬ್ರಹ್ಮೈಕ್ಯಸದ್ಭಾವಃ ವಿಯದ್ವ್ರಹ್ಮೇತಿ ನಿಶ್ಚಯಃ ॥೨೫॥

ವೇದಾಂತಬ್ರಹ್ಮಣೋ ಬೋಧ್ಯಂ ಬೋಧಕಂ ಬಂಧಮುಚ್ಯತೇ ।
ಸರ್ವಾಜ್ಞಾನನಿವೃತ್ತಿಶ್ಚೇದಾನಂದಾವಾಪ್ತಿಕಂ ಫಲಂ ॥೨೬॥

ಇತ್ಯೇವಮಾದಿಭಿಶ್ಶಬ್ದೈಃ ಪ್ರೋಕ್ತಂ ಸರ್ವಮಸತ್ಸದಾ ।
ಸರ್ವಶಬ್ದಾರ್ಥರೂಪಂ ಚ ನಿಶ್ಚಯಂ ಭಾವನಂ ಸದಾ ॥೨೭॥

ಬ್ರಹ್ಮಮಾತ್ರಂ ಪರಂ ಸತ್ಯಂ ಅನ್ಯತ್ಸರ್ವಮಸತ್ಸದಾ ।
ಅನೇಕಶಬ್ದಶ್ರವಣಮನೇಕಾರ್ಥವಿಚಾರಣಂ ॥೨೮॥

ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ।
ನಾನುಧ್ಯಾಯನ್ ಬ್ರಹ್ಮಶಬ್ದಾನ್ ಇತ್ಯುಕ್ತ್ವಾಹ ಮಹಾನಸಾನ್॥೨೯॥

ಬ್ರಹ್ಮೋಪದೇಶಕಾಲೇ ತು ಸರ್ವಂ ಚೋಕ್ತಂ ನ ಸಂಶಯಃ ।
ಬ್ರಹ್ಮೈವಾಹಮಿದಂ ದ್ವೈತಂ ಚಿತ್ತಸತ್ತಾವಿಭಾವನಂ ॥೩೦॥

---

ಮೇಲಿನ ನಾಲ್ಕು ಸಾಧನಗಳುಳ್ಳಂತಹ ಮೋಕ್ಷಾಧಿಕಾರಿ, ಜೀವಬ್ರಹ್ಮರು ಒಂದೇ ಎನ್ನುವ ಜ್ಞಾನ, ಬ್ರಹ್ಮವು ಆಕಾಶದಂತೆ ವ್ಯಾಪಕವೆನ್ನುವುದು, ಇವೆಲ್ಲವೂ ಅಸತ್ಯ, ಬ್ರಹ್ಮವಸ್ತುವೊಂದೇ ಸತ್ಯ. ॥೨೫॥

ವೇದಾಂತಾನುಭವದಿಂದ ಬ್ರಹ್ಮಜ್ಞಾನವುದಯಿಸಿದರೆ ಸಂಸಾರಬಂಧನವೆಲ್ಲವೂ ಹರಿದುಹೋಗುವುದು. ಅಜ್ಞಾನನಿವೃತ್ತಿಯಾಗುವುದು, ಅಖಂಡಾನಂದಾನುಭವವು ಉಂಟಾಗುವುದು. ॥೨೬॥

ಆದರೀ ಶಬ್ದಾರ್ಥಗಳೆಲ್ಲವೂ ಅಸತ್ಯವೇ, ಅಜ್ಞಾನವೆಂಬುದೇ ಇಲ್ಲದುದರಿಂದ ಅದರ ನಿವೃತ್ತಿಯೆಂಬುದೂ ಇಲ್ಲ. ಒಂದು ವಸ್ತುವಿದ್ದರೆ ತಾನೆ ಆ ವಸ್ತುವು ನಾಶವಾಗುವುದೆಂದು ಹೇಳಬಹುದು ? ॥೨೭॥

ಬ್ರಹ್ಮವಸ್ತುವೊಂದೇ ಸತ್ಯವು, ಮಿಕ್ಕದ್ದೆಲ್ಲವೂ ಅಸತ್ಯ, ಅನೇಕಶಬ್ದಗಳನ್ನು ಕೇಳುವುದು, ಅವುಗಳ ಅರ್ಥವಿಮರ್ಶೆ ಇವೆಲ್ಲವೂ ಅಸತ್ಯ, ಬ್ರಹ್ಮವಸ್ತುವೊಂದೇ ಸತ್ಯ. ಆ ಬ್ರಹ್ಮವಸ್ತುವೇ ನಾನು. ॥೨೮॥

ಬ್ರಹ್ಮವಸ್ತುವೊಂದನ್ನು ವಿನಾ ಉಪದೇಶಕಾಲದಲ್ಲಿ ಹೇಳಿದ ಬ್ರಹ್ಮಶಬ್ದವೂ

ಚಿನ್ಮಾತ್ರೋಽಹಮಿದಂ ದ್ವೈತಂ ಜೀವಬ್ರಹ್ಮೇತಿಭಾವನಂ ।
ಅಹಂ ಚಿನ್ಮಾತ್ರಮಂತ್ರಂ ವಾ ಕಾರ್ಯಕಾರಣಚಿಂತನಂ ॥೩೧॥

ಅಕ್ಷಯಾನಂದವಿಜ್ಞಾನಂ ಅಖಂಡೈಕರಸಾದ್ವಯಂ ।
ಪರಂ ಬ್ರಹ್ಮ ಇದಂ ಬ್ರಹ್ಮ ಶಾಂತಂ ಬ್ರಹ್ಮಸ್ವಯಂ ಜಗತ್ ॥೩೨॥

ಅಂತರಿಂದ್ರಿಯವಿಜ್ಞಾನಂ ಬಾಹ್ಯೇಂದ್ರಿಯನಿರೋಧನಂ ।
ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ॥೩೩॥

ಸರ್ವೋಪದೇಶಕಾಲಂ ಚ ಸಾಮ್ಯಂ ಶೇಷಂ ಮಹೋದಯಂ ।
ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ॥೩೪॥

ಕಾರಣಂ ಕಾರ್ಯಭೇದಂ ಚ ಶಾಸ್ತ್ರಮಾರ್ಗೈಕಕಲ್ಪನಂ ।
ಅಹಂ ಬ್ರಹ್ಮ ಇದಂ ಬ್ರಹ್ಮ ಸರ್ವಂ ಬ್ರಹ್ಮೇತಿ ಶಬ್ದತಃ ॥೩೫॥

---

ಅಸತ್ಯ; ಬ್ರಹ್ಮಭಾವನೆಯೂ ಅಸತ್ಯ, ಭಾವಿಸುವ ಚಿತ್ತವೂ ಅಸತ್ಯ, ಬ್ರಹ್ಮನ ಹೊರತಾದುದೆಲ್ಲವೂ ಅಸತ್ಯ. ॥೨೯-೩೦॥

ನಾನು ಚಿನ್ಮಾತ್ರನು, ಜೀವನು, ಬ್ರಹ್ಮನು, ಕಾರ್ಯವು ಇದು, ಕಾರಣವು ಇದು ಎಂದು ಮೊದಲಾದ ಭಾವನೆಯೆಲ್ಲವೂ ಅಸತ್ಯ. ॥೩೧॥

ಅಕ್ಷಯವಾದ ಆನಂದ, ಅಖಂಡವಾದ ರಸ, ಅಭೇದ, ಪರಬ್ರಹ್ಮ, ಇದು ಬ್ರಹ್ಮ, ಶಾಂತವು ಬ್ರಹ್ಮ, ಜಗತ್ತೇ ಬ್ರಹ್ಮ, ಎನ್ನುವ ಭಾವನೆಗಳೆಲ್ಲವೂ ಅಸತ್ಯ. ॥೩೨॥

ಅಂತರಿಂದ್ರಿಯಜ್ಞಾನ, ಬಾಹ್ಯೇಂದ್ರಿಯಗಳ ನಿಗ್ರಹ ಇವೆಲ್ಲವೂ ಅಸತ್ಯ, ಬ್ರಹ್ಮವಸ್ತುವೊಂದೇ ಸತ್ಯ, ಆ ಬ್ರಹ್ಮವಸ್ತುವೇ ನಾನು. ॥೩೩॥

ಉಪದೇಶಕಾಲ, ಸಮತೆ, ಶಿಷ್ಟತೆ, ಉದಯ, ಭೂಮಿ, ಜಲ, ಗಾಳಿ, ಬೆಂಕಿ, ಆಕಾಶ, ಮನಸ್ಸು, ಬುದ್ಧಿ, ಕಾರಣಕಾರ್ಯಗಳು, ಶಾಸ್ತ್ರಮಾರ್ಗಗಳು, ಇವೆಲ್ಲವೂ ಬರಿಯ ಕಲ್ಪನೆಗಳು ಮತ್ತು ಅಸತ್ಯವಾದವುಗಳು. ॥೩೪-೩೫॥

ಸತ್ಯರೂಪಂ ಕ್ವಚಿನ್ನಾಸ್ತಿ ಸತ್ಯಂ ನಾಮ ಕದಾ ನ ಹಿ ।
ಸಂಶಯಂ ಚ ವಿಪರ್ಯಾಸಂ ಸಂಕಲ್ಪಃ ಕಾರಣಂ ಭ್ರಮಃ ॥೩೬॥

ಆತ್ಮನೋಽನ್ಯತ್ಕ್ವಚಿನ್ನಾಸ್ತಿ ಸರ್ವಂ ಮಿಥ್ಯಾ ನ ಸಂಶಯಃ ।
ಮಹತ್ವಂ ದಧತೇ ಮಂತ್ರೀ ಮೇಧಾಶುದ್ಧಿಂ ಶುಭಾಶುಭಂ ॥೩೭॥

ದೇಶಭೇದಂ ವಸ್ತುಭೇದಂ ನ ಚ ಚೈತನ್ಯಭೇದಕಂ ।
ಆತ್ಮನೋಽನ್ಯತ್ಪೃಥಗ್ಭಾವಮಾತ್ಮನೋಽನ್ಯನ್ನಿರೂಪಣಂ ॥೩೮॥

ಆತ್ಮನೋಽನ್ಯನ್ನಾಮರೂಪಂ ಆತ್ಮನೋಽನ್ಯಚ್ಛುಭಾಶುಭಂ ।
ಆತ್ಮನೋಽನ್ಯದ್ವಸ್ತುಸತ್ತಾ ಆತ್ಮನೋಽನ್ಯಜ್ಜಗತ್ತ್ರಯಂ ॥೩೯॥

ಆತ್ಮನೋಽನ್ಯತ್ಸುಖಂ ದುಃಖಮಾತ್ಮನೋಽನ್ಯದ್ವಿಚಿಂತನಂ ।
ಆತ್ಮನೋಽನ್ಯತ್ಪ್ರಪಂಚಂ ನಾಮಾತ್ಮನೋಽನ್ಯಜ್ಜಯಾಜಯೌ ॥೪೦॥

ಆತ್ಮನೋಽನ್ಯದ್ದೇವಪೂಜಾ ಆತ್ಮನೋಽನ್ಯಚ್ಛಿವಾರ್ಚನಂ ।
ಆತ್ಮನೋಽನ್ಯನ್ಮಹಾಧ್ಯಾನಮಾತ್ಮನೋಽನ್ಯತ್ಕಲಾಕ್ರಮಂ ॥೪೧॥

---

ಸತ್ಯವಾದ ರೂಪವೆಂಬುದಿಲ್ಲ, ಹೆಸರೆಂಬುದೂ ಇಲ್ಲ, ಸಂಶಯವೂ ಇಲ್ಲ. ನಿಶ್ಚಯವೂ ಇಲ್ಲ, ವಿರುದ್ಧಭಾವನೆಯು ಇಲ್ಲ, ಕಾರಣವು ಇಲ್ಲ, ಭ್ರಮೆಯೂ ಇಲ್ಲ, ಆತ್ಮನ ಹೊರತಾಗಿ ಯಾವುದೂ ಇಲ್ಲ. ॥೩೬॥

ಮಹತ್ತ್ವವು, ಮಂತ್ರಿ, ಬುದ್ಧಿ, ಶುಭ, ಅಶುಭ, ದೇಶಭೇದ, ವಸ್ತುಭೇದ, ಚೈತನ್ಯಭೇದ ಇವಾವುವೂ ಇಲ್ಲ. ಚೈತನ್ಯವೊಂದೇ ಇರುವುದು. ॥೩೭॥

ಆತ್ಮನ ಹೊರತಾಗಿ ಭೇದ, ಬೇರೆಯ ನಿರೂಪಣೆ, ನಾಮರೂಪಗಳು, ಶುಭಾಶುಭಗಳು, ವಸ್ತುಗಳ ಸತ್ತೆ (ಇರುವಿಕೆ) ಮೂರು ಲೋಕಗಳು— ಇವಾವುವೂ ಇಲ್ಲ. ಆತ್ಮವಸ್ತುವೊಂದೇ ಇರುವುದು. ॥೩೮-೩೯॥

ಆತ್ಮನ ಹೊರತಾಗಿ ಸುಖದುಃಖಗಳು, ಅವುಗಳ ಚಿಂತೆ, ಪ್ರಪಂಚ, ಜಯಾಪಜಯಗಳು ಇವಾವುವೂ ಇಲ್ಲ. ॥೪೦॥

ಆತ್ಮನಿಂದ ಹೊರತಾಗಿ ದೇವರ ಪೂಜೆ, ಶಿವಪೂಜೆ, ಮಹಾಧ್ಯಾನ, ಕಲಾವಾಹನೆಗಳು ಮೊದಲಾದುವು ಇಲ್ಲ. ॥೪೧॥

ಸರ್ವಂ ಮಿಥ್ಯಾ ನ ಸಂದೇಹೋ ಬ್ರಹ್ಮ ಸರ್ವಂ ನ ಸಂಶಯಃ ।
ಸರ್ವಮುಕ್ತಂ ಭಗವತಾ ನಿಜಾಧ್ಯಾಸಸ್ತು ಸರ್ವದಾ ॥೪೨॥

ಸಕೃಚ್ಛ್ರವಣಮಾತ್ರೇಣ ಹೃದಯಗ್ರಂಥಿರಂತಿಮಂ ।
ಕರ್ಮನಾಶಂ ಚ ಮೂಢಾನಾಂ ಮುಡತಾಂ ಮುಕ್ತಿರೇವ ಹಿ ॥೪೩॥

ಅನೇಕಕೋಟಿಜನನಪಾತಕಂ ಭಸ್ಮಸಾದ್ಭವೇತ್ ।
ಸತ್ಯಂ ಸತ್ಯಂ ಪುನಸ್ಸತ್ಯಂ ಸತ್ಯಂ ಸರ್ವಂ ವಿನಶ್ಯತಿ ॥೪೪॥

ಸದ್ಯೋಮುಕ್ತಿರ್ನಸಂದೇಹೋ ನಾಸ್ತಿಮಂಗಲಮಂಗಲಂ ।
ಕ್ವ ಭೇದಭಾನಂ ದರ್ಶನಂ ವಾ ನೈವಶೋಕಮೋಹಕೃತ್ ॥೪೫॥

ಪ್ರಪಶ್ಯತಾಂ ಶ್ರುತಂ ಶಿಖಾವಿಶೇಷಮೈಕ್ಯಭಾವನಾತ್ ।
ಯತೋಭವೇಜ್ಞಗಾದ ತಂ ಮಹೇಶ ಯೇನ ಜೀವಿತಂ ।
ಯದಂತರಾ ವಿಶತ್ಸದಾ ಯಥೋರ್ಣನಾಭತಂತುವತ್ ॥೪೬॥

---

ಎಲ್ಲವೂ ಅಸತ್ಯ, ಮಾಯೆಯಿಂದ ವಸ್ತುವಾಗಿ ತೋರುವುದು ಎಂಬ ವಿಷಯವನ್ನು ಶಿವನೇ ತನ್ನ ಮಾಯೆಯ ಅಧ್ಯಾಸ (ಇಲ್ಲದ ತೋರಿಕೆ) ವೆಂಬುದಾಗಿ ಹೇಳಿರುವನು. ॥೪೨॥

ಈ ವಿಷಯವನ್ನು ಒಂದುಬಾರಿ ಕೇಳಿದರೂ ಸಾಕು. ಅಜ್ಞಾನಿಗಳ ಅಜ್ಞಾನವು ತೊಲಗಿ ಕರ್ಮನಾಶವಾಗುವುದು. ಜ್ಞಾನಿಗಳಿಗೆ ಮುಕ್ತಿಯು ಲಭಿಸುವುದು. ॥೪೩॥

ಕೋಟಿಕೋಟಿ ಜನ್ಮಗಳ ಪಾತಕಮಹಾಪಾತಕಗಳೆಲ್ಲವೂ ಭಸ್ಮವಾಗುವುವು. ಇದು ಸತ್ಯವಾದ ಮಾತು, ಸಂಶಯವಿಲ್ಲ. ॥೪೪॥

ಈ ವಿಷಯವನ್ನು ಕೇಳಿದೊಡನೆಯೇ ಭೇದಜ್ಞಾನವೆಲ್ಲವೂ ತೊಲಗಿ ತನ್ಮೂಲಕವಾಗಿ ಶೋಕಮೋಹಗಳಡಗಿ ಮುಕ್ತಿಯು ಕರಗತವಾಗುವುದು. ॥೪೫॥

ವೇದಾಂತಗಳ ಪರಮತಾತ್ಪರ್ಯವಾದೀ ವಿಷಯವನ್ನು ವಿಮರ್ಶಿಸಿ ತಿಳಿಯುವವರಿಗೆ ಇಂದ್ರಿಯಗಳ ಅಧೀನತೆಯು ತೊಲಗಿ ಅದ್ವೈತಭಾವನೆಯು

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ದ್ವಾತ್ರಿಂಶೋಽಧ್ಯಾಯಃ

---

ಉದಯಿಸುವುದು. ಆಗ ಪರಮಾತ್ಮವಸ್ತುವೇ ತಾನೆಂಬ ಭಾವನೆಯುಂಟಾಗಿ, ಜೇಡರ ಹುಳುವು ತಾನು ನಿರ್ಮಿಸಿದ ದಾರಗಳನ್ನು ತಾನೇ ಅಡಗಿಸಿಕೊಳ್ಳುವಂತೆ ಅಖಂಡವಾದೀಪ್ರಪಂಚವನ್ನು ಒಳಗೊಂಡಿರುವ ಅಖಂಡ ಬ್ರಹ್ಮಸ್ವರೂಪವನ್ನು ಪಡೆಯುವನು ಎಂಬುದರಲ್ಲಿ ಸಂಶಯವಿಲ್ಲ. ಎಂದು ಋಭುಮುನಿಯು ನಿದಾಘ ಮಹರ್ಷಿಗೆ ಹೇಳಿದನು. ॥೪೬॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ತ್ರಯಸ್ತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ಪರಂಬ್ರಹ್ಮಮಾತ್ರಮನುತ್ಪನ್ನಮಿದಂ ಸದಾ ।
ಸಚ್ಚಿದಾನಂದಮಾತ್ರೋಽಹಮನುತ್ಪನ್ನಮಿದಂ ಜಗತ್ ॥೧॥

ಆತ್ಮೈವಾಹಂ ಪರಂ ಬ್ರಹ್ಮ ನಾನ್ಯತ್ಸಂಸಾರದೃಷ್ಟಯಃ ।
ಸಚ್ಚಿದಾನಂದಮಾತ್ರೋಽಹಮನುತ್ಪನ್ನಮಿದಂ ಜಗತ್ ॥೨॥

ಸತ್ಪದಾನಂದಮಾತ್ರೋಽಹಂ ಚಿತ್ಪದಾನಂದವಿಗ್ರಹಂ ।
ಅಹಮೇವಾಹಮೇವೈಕಮಹಮೇವ ಪರಾತ್ಪರಃ ॥೩॥

---

## ಮೂವತ್ತಮೂರನೆಯ ಅಧ್ಯಾಯ

ಎಲೈ ನಿದಾಘನೇ, ಸಚ್ಚಿದಾನಂದರೂಪವಾದ ಈ ಪರಬ್ರಹ್ಮವೊಂದೇ ಇರುವುದು, ಈ ಜಗತ್ತು ಜನಿಸಿಯೇ ಇಲ್ಲ. ಎಂಬ ವಿಷಯವನ್ನು ಈಗ ಹೇಳುವೆನು.॥೧॥

ಪರಮಾತ್ಮನೇ ನಾನು, ಜೀವಾತ್ಮನೆಂಬ ಚಿಕ್ಕತನವು ಕಲ್ಪಿತವಾದುದು. ಸಚ್ಚಿದಾನಂದಸ್ವರೂಪನು ನಾನು, ಈ ಜಗತ್ತು ಜನಿಸಿಯೇ ಇಲ್ಲ. ಆದುದರಿಂದ ವಸ್ತುತಃ ಇದು ಇಲ್ಲವೇ ಇಲ್ಲ. ॥೨॥

ಸತ್ಯದ ಆನಂದಸ್ವರೂಪನೂ ಜ್ಞಾನಾನಂದಮೂರ್ತಿಯೂ ನಾನಾಗಿರುವೆನು. ನಾನೆಂಬುವವನು ನಾನೊರ್ವನೇ ಇರುವೆನು. ಇನ್ನಾರೂ ಇಲ್ಲವು. ॥೩॥

ಸಚ್ಚಿದಾನಂದಮೇವೈಕಮಹಂ ಬ್ರಹ್ಮೈವ ಕೇವಲಂ ।
ಅಹಮಸ್ಮಿ ಸದಾ ಭಾಮಿ ಏವಂ ರೂಪಂ ಕುತೋಽಪ್ಯಸತ್ ॥೪॥

ತ್ವಮಿತ್ಯೇವಂ ಪರಂ ಬ್ರಹ್ಮ ಚಿನ್ಮಯಾನಂದರೂಪವಾನ್ ।
ಚಿದಾಕಾರಂ ಚಿದಾಕಾಶಂ ಚಿದೇವ ಪರಮಂ ಸುಖಂ ॥೫॥

ಆತ್ಮೈವಾಹಮಸನ್ನಾಹಂ ಕೂಟಸ್ಥೋಽಹಂ ಗುರುಃ ಪರಃ ।
ಕಾಲಂ ನಾಸ್ತಿ ಜಗನ್ನಾಸ್ತಿ ಕಲ್ಮಷತ್ವಾನುಭಾವನಂ ॥೬॥

ಅಹಮೇವ ಪರಂ ಬ್ರಹ್ಮ ಅಹಮೇವ ಸದಾಶಿವಃ ।
ಶುದ್ಧಚೈತನ್ಯಮೇವಾಹಂ ಶುದ್ಧಸತ್ತ್ವಾನ್ನಭಾವನಃ ॥೭॥

ಅದ್ವಯಾನಂದಮಾತ್ರೋಽಹಮವ್ಯಯೋಽಹಂ ಮಹಾನಹಂ ।
ಸರ್ವಂ ಬ್ರಹ್ಮೈವ ನಾನ್ಯೋಽಸ್ತಿ ಸರ್ವಂ ಬ್ರಹ್ಮೈವ ನಿರ್ಮಲಃ ॥೮॥

---

ಸಚ್ಚಿದಾನಂದರೂಪವೊಂದೇ ಇರುವುದು. ಆ ರೂಪವೇ ನಾನು. ನಾನೇ ಯಾವಾಗಲೂ ಇರುವೆನು. ಯಾವಾಗಲೂ ಪ್ರಕಾಶಿಸುವೆನು. ಇಂತಹ ನನ್ನ ರೂಪವು ಅಸತ್ಯವು ಹೇಗಾದೀತು? ॥೪॥

ನೀನೂ ಸಹ ಚಿದಾನಂದರೂಪವಾದ ಪರಬ್ರಹ್ಮಸ್ವರೂಪವೇ. ಬ್ರಹ್ಮವಸ್ತುವು ಜ್ಞಾನರೂಪವಾದುದು. ಜ್ಞಾನಾಕಾಶರೂಪವಾದುದು. ಅದೇ ಪರಮಸುಖವು. ॥೫॥

ನಾನೇ ಆತ್ಮನು, ಅಸತ್ತಲ್ಲ. ಸಾಕ್ಷಿಯು ನಾನು, ಪರಮಗುರುವು ನಾನು, ನನ್ನ ಹೊರತು ಕಾಲವೂ ಇಲ್ಲ. ಜಗತ್ತೂ ಇಲ್ಲ. ಕಲ್ಮಷಭಾವನೆಯೂ ಇಲ್ಲ. ॥೬॥

ನಾನೇ ಪರಬ್ರಹ್ಮನು, ನಾನೇ ಸದಾಶಿವನು, ಶುದ್ಧಚೈತನ್ಯವು ನಾನು, ಶುದ್ಧಸತ್ತ್ವೆಯೇ ನನಗಾಹಾರವು. ಅದೇ ನನ್ನ ಸ್ವರೂಪವು. ॥೭॥

ಅದ್ವಿತೀಯಾನಂದಸ್ವರೂಪನು ನಾನು, ನಾಶವಿಲ್ಲದ ಮಹಾತ್ಮನು ನಾನು, ಜಗತ್ತೆಲ್ಲವೂ ಬ್ರಹ್ಮವಸ್ತುವೇ ಬೇರೆ ಏನೂ ಇಲ್ಲ. ॥೮॥

ಅದ್ವಯಾನಂದಮಾತ್ರೋಽಹಂ ಸರ್ವಂ ಬ್ರಹ್ಮೈವ ಚೇತನಃ ।
ಸರ್ವಪ್ರಕಾಶರೂಪೋಽಹಂ ಸರ್ವಂ ಪ್ರಿಯಮನೋಹ್ಯಹಂ ॥೯॥

ಏಕಾಂತೈಕಪ್ರಕಾಶೋಽಹಂ ಸಿದ್ಧಾಸಿದ್ಧವಿವರ್ಜಿತಃ ।
ಸರ್ವಾಂತರ್ಯಾಮಿರೂಪೋಽಹಂ ಸರ್ವಸಾಕ್ಷಿತ್ವಲಕ್ಷಣಂ ॥೧೦॥

ಶಮೋ ವಿಚಾರಮುದ್ಭವಂ ತತ್ತ್ವಾತೀತಮಹೋತ್ಸವಂ ।
ಸಚ್ಚಿದಾನಂದಬ್ರಹ್ಮೈವ ಪರಮಾಕಾಶಮಾತತಂ ॥೧೧॥

ಬ್ರಹ್ಮೈವ ಸರ್ವಮೇವೇದಂ ಶುದ್ಧಂ ಶುದ್ಧಮಲೋಪಕಂ ।
ಸ್ವಪ್ರಕಾಶಾತ್ಮಕಂ ಬ್ರಹ್ಮ ನಿಶ್ಚಯಂ ಚಾತ್ಮಕಾರಣಂ ॥೧೨॥

ಬ್ರಹ್ಮೈವ ಸರ್ವಮೇವೇದಂ ಸ್ವಯಮೇವ ಪ್ರಕಾಶತೇ ।
ಬ್ರಹ್ಮೈವ ಸರ್ವಮೇವೇದಂ ನಾನಾಕಾರ ಇತಿ ಸ್ಥಿತಂ ॥೧೩॥

---

ಬ್ರಹ್ಮವಸ್ತುವೇ ಎಲ್ಲೆಲ್ಲೂ ಹರಡಿದೆ. ಆ ಬ್ರಹ್ಮವಸ್ತುವೇ ನಾನು, ಎಲ್ಲ ಪ್ರಕಾಶಗಳ ಸ್ವರೂಪವು ನಾನು. ಎಲ್ಲ ಆನಂದಗಳ ಸ್ವರೂಪವು ನಾನು. ॥೯॥

ಓರ್ವನೇ ನಾನು ಏಕಾಂತದಲ್ಲಿ ಪ್ರಕಾಶಿಸುವೆನು, ಜಗತ್ತಿನಲ್ಲೆಲ್ಲಾ ಅಡಗಿಕೊಂಡಿದ್ದು ಜಗತ್ತಿನ ಆಗುಹೋಗುಗಳನ್ನೆಲ್ಲಾ ಸಾಕ್ಷಿಯಾಗಿ ನೋಡುವೆನು. ॥೧೦॥

ಶಮ, ವಿಚಾರ, ಜನನವಿಲ್ಲದುದು, ತತ್ತ್ವವನ್ನು ಮೀರಿದುದು—ಇವೆಲ್ಲವೂ ಆಕಾಶಮೂರ್ತಿಯಾದ ಸಚ್ಚಿದಾನಂದಮೂರ್ತಿಯಾದ ಬ್ರಹ್ಮವಸ್ತುವೇ. ॥೧೧॥

ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವು ಶುದ್ಧವಾದುದು, ನಿತ್ಯವಾದುದು, ಪ್ರಕಾಶರೂಪವಾದುದು, ನಿಶ್ಚಯರೂಪವಾದುದು, ತನಗೆ ತಾನೇ ಕಾರಣವೂ ಕಾರ್ಯವೂ ಆದುದು. ॥೧೨॥

ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ. ಆ ಬ್ರಹ್ಮವಸ್ತುವು ತಾನೇ ಪ್ರಕಾಶಿಸುವುದು, ನಾನಾರೂಪವಾಗಿ ತೋರುವುದು. ಬ್ರಹ್ಮವಸ್ತುವಿನ ಹೊರತು ಏನೂ ಇಲ್ಲ. ॥೧೩॥

ಬ್ರಹ್ಮೈವ ಸರ್ವಮೇವೇದಂ ಭ್ರಾಂತಾಧಿಷ್ಠಾನರೂಪಕಂ ।
ಬ್ರಹ್ಮೈವ ಸರ್ವಮೇವೇದಂ ಸರ್ವಂ ನಾಸ್ತಿ ನ ಮೇ ಸ್ಥಿತಂ ॥೧೪॥

ವಾಚಾಮಗೋಚರಂ ಬ್ರಹ್ಮ ಸಚ್ಚಿದಾನಂದವಿಗ್ರಹಂ ।
ಸಚ್ಚಿದಾನಂದರೂಪೋಽಹಮನುತ್ಪನ್ನಮಿದಂ ಜಗತ್ ॥೧೫॥

ಬ್ರಹ್ಮೈವೇದಂ ಸದಾ ಸತ್ಯಂ ನಿತ್ಯಮುಕ್ತಂ ನಿರಂಜನಂ ।
ಸಚ್ಚಿದಾನಂದಂ ಬ್ರಹ್ಮೈವ ಏಕ ಏವ ಸದಾಸುಖಂ ॥೧೬॥

ಸಚ್ಚಿದಾನಂದಬ್ರಹ್ಮೈವ ಪೂರ್ಣಾತ್ಪೂರ್ಣತರಂ ಮಹತ್ ।
ಸಚ್ಚಿದಾನಂದಬ್ರಹ್ಮೈವ ಸರ್ವವ್ಯಾಪಕ ಈಶ್ವರಃ ॥೧೭॥

ಸಚ್ಚಿದಾನಂದಬ್ರಹ್ಮೈವ ನಾದರೂಪಪ್ರಭಾಸ್ವರಂ ।
ಸಚ್ಚಿದಾನಂದಬ್ರಹ್ಮೈವ ಸರ್ವಾಧಾರಂ ಸನಾತನಂ ॥೧೮॥

---

ಬ್ರಹ್ಮವಸ್ತುವೇ ಎಲ್ಲರ ನಾನಾಬಗೆಯ ಭ್ರಾಂತಿಗೆ ಅಧಿಷ್ಠಾನವಾಗಿರುವುದು. ಬ್ರಹ್ಮವಸ್ತುವಿನ ಹೊರತು ಏನೂ ಇಲ್ಲ. ॥೧೪॥

ಬ್ರಹ್ಮವಸ್ತುವು ವಾಕ್ಕುಗಳಿಗೆ ಅಗೋಚರವಾದುದು. ಸಚ್ಚಿದಾನಂದರೂಪವಾದುದು, ನಾನೂ ಸಚ್ಚಿದಾನಂದರೂಪನು. ಈ ಜಗತ್ತಿಗೆ ಉತ್ಪತ್ತಿಯೂ ಇಲ್ಲ. ಸ್ಥಿತಿಯೂ ಇಲ್ಲ. ॥೧೫॥

ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಆ ವಸ್ತುವು ಸತ್ಯವಾದುದು, ಸದಾ ಮುಕ್ತವಾದುದು, ನಿರ್ಮಲವಾದುದು, ಸಚ್ಚಿದಾನಂದರೂಪವಾದುದು, ಯಾವಾಗಲೂ ಅದ್ವಿತೀಯವಾಗಿದ್ದು ಸುಖರೂಪವಾಗಿರುವುದು. ॥೧೬॥

ಆ ಸಚ್ಚಿದಾನಂದಬ್ರಹ್ಮವಸ್ತುವೇ ಜಗತ್ತಿನಲ್ಲೆಲ್ಲಾ ತುಂಬಿದ್ದು ಪರಿಚ್ಛಿನ್ನವಾಗಿರದೆ, ಪೂರ್ಣವಾಗಿರುವುದು, ಆ ವಸ್ತುವೇ ಸರ್ವವ್ಯಾಪಕನಾದ ಈಶ್ವರನು. ॥೧೭॥

ಸಚ್ಚಿದಾನಂದರೂಪವಾದ ಬ್ರಹ್ಮವಸ್ತುವೇ ನಾದರೂಪದಿಂದ ಪ್ರಕಾಶಿಸುವುದು. ಆ ವಸ್ತುವೇ ಎಲ್ಲಕ್ಕೂ ಆಧಾರವು. ಅತಿ ಪ್ರಾಚೀನವಾದುದು. ॥೧೮॥

ಸಚ್ಚಿದಾನಂದಬ್ರಹ್ಮೈವ ಅನಂತಾದಿತ್ಯನಿರ್ಮಲಂ ।
ಸಚ್ಚಿದಾನಂದಬ್ರಹ್ಮೈವ ಪರಮಾನಂದದಾಯಕಂ ॥೧೯॥

ಸಚ್ಚಿದಾನಂದಬ್ರಹ್ಮೈವ ಸರ್ವೇಷಾಂ ಪರಮವ್ಯಯಂ ।
ಸಚ್ಚಿದಾನಂದಬ್ರಹ್ಮೈವ ಸನ್ಮಾತ್ರಂ ಸದಸತ್ಪರಂ ॥೨೦॥

ಸಚ್ಚಿದಾನಂದಬ್ರಹ್ಮೈವ ಮೋಕ್ಷರೂಪಂ ಶುಭಾಶುಭಂ ।
ಸಚ್ಚಿದಾನಂದಬ್ರಹ್ಮೈವ ಪರಿಚ್ಛಿನ್ನಂ ನ ಹಿ ಕ್ವಚಿತ್ ॥೨೧॥

ಬ್ರಹ್ಮೈವ ಸರ್ವಮೇವೇದಂ ಶುದ್ಧಬುದ್ಧಮಲೇಪಕಂ ।
ಸಚ್ಚಿದಾನಂದರೂಪೋಽಹಮನುತ್ಪನ್ನಮಿದಂ ಜಗತ್ ॥೨೨॥

ಏತತ್ಪ್ರಕರಣಂ ಸತ್ಯಂ ಶಾಂತಿದಾಂತಿಪ್ರದಾಯಕಂ ।
ಸರ್ವದುಃಖಕ್ಷಯಕರಂ ಸರ್ವವಿಜ್ಞಾನದಾಯಕಂ ॥೨೩॥

ನಿತ್ಯಾನಂದಕರಂ ನಿತ್ಯಂ ಸದ್ಯೋಮುಕ್ತಿಪ್ರದಾಯಕಂ ॥೨೪॥

---

ಸಚ್ಚಿದಾನಂದಬ್ರಹ್ಮವಸ್ತುವು ಕೋಟಿಕೋಟಿಸೂರ್ಯರಂತಹ ತೇಜಸ್ಸುಳ್ಳದುದು ಮತ್ತು ಪರಮಾನಂದವನ್ನುಂಟುಮಾಡುವುದು. ॥೧೯॥

ಸಚ್ಚಿದಾನಂದಬ್ರಹ್ಮವಸ್ತುವು ಎಲ್ಲಕ್ಕಿಂತಲೂ ಉತ್ಕೃಷ್ಟವಾದುದು, ನಾಶರಹಿತವಾದುದು, ಸತ್ತೆ ಅಸತ್ತೆಗಳನ್ನು ಮೀರಿದ ಸದ್ರೂಪವಾಗಿರುವುದು. ॥೨೦॥

ಸಚ್ಚಿದಾನಂದರೂಪವಾದ ಬ್ರಹ್ಮವಸ್ತುವೇ ಮೋಕ್ಷವು. ಅದೇ ಶುಭಾಶುಭಗಳು, ಆ ಬ್ರಹ್ಮವಸ್ತುವಿಗೆ ಎಲ್ಲೆಲ್ಲೂ ಪರಿಚ್ಛೇದವು ಅಂದರೆ ಸಂಕೋಚವೇ ಇಲ್ಲ. ಯಾವ ತಡೆಯೂ ಇಲ್ಲದೆ ಪರಿಪೂರ್ಣವಾಗಿರುವುದು. ॥೨೧॥

ಬ್ರಹ್ಮವಸ್ತುವು ಶುದ್ಧವಾದುದು, ಯಾವ ಪಾಪಸಂಬಂಧವೂ ಅದಕ್ಕಿಲ್ಲ. ಜ್ಞಾನಸ್ವರೂಪವಾದುದು, ಜನ್ಮವಿಲ್ಲದುದು, ಅಂತಹ ಬ್ರಹ್ಮವಸ್ತುವು ನಾನು. ॥೨೨॥

ಈ ಪ್ರಕರಣವು ಸತ್ಯವಸ್ತುವನ್ನು ಪ್ರತಿಪಾದಿಸುವುದಾಗಿದ್ದು ಶಮದಮಗಳನ್ನುಂಟುಮಾಡುವುದು. ಎಲ್ಲ ದುಃಖಗಳನ್ನು ಹೋಗಲಾಡಿಸುವುದು. ಸರ್ವಕ್ಕೂ ಜ್ಞಾನವನ್ನುಂಟುಮಾಡುವುದು. ಸದ್ಯಃ ಮುಕ್ತಿಯನ್ನು ಒದಗಿಸಿ ನಿತ್ಯಾನಂದವನ್ನು ಹೊಂದಿಸುವುದು. ॥೨೩-೨೪॥

ಯಸ್ತ್ವಂತಕಾಂತಕಕೆಮಹೇಶ್ವರಪಾದಪದ್ಮ
ಲೋಲಂಬರಪ್ರಭಹೃದಾ ಪರಿಶೀಲಕಶ್ಚ ।
ಬೃಂದಾರುಬೃಂದವಿನತಾಮಲದಿವ್ಯಪಾದೋ
ಭಾವೋ ಭವೋದ್ಭವಕೃಪಾವಶತೋ ಭವೇಚ್ಚ ॥೨೫॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ತ್ರಯಸ್ತ್ರಿಂಶೋಽಧ್ಯಾಯಃ

---

ಯಾವನು ಮೃತ್ಯುಂಜಯನಾದ ಶಿವನ ಪಾದಪದ್ಮವನ್ನು ಅನನ್ಯಭಕ್ತಿಯಿಂದ ಆರಾಧಿಸುವನೋ ಆ ಶಿವಪ್ರೇಮಕ್ಕೆ ಪಾತ್ರನಾದ ಅಂಥ ಶಿವಭಕ್ತನ ಅಡಿದಾವರೆಗಳನ್ನು ದೇವಾದಿಗಳೂ ಸೇವಿಸುವರು. ಶಿವಾನುಗ್ರಹಕ್ಕೆ ಪಾತ್ರನಾದ ಆತನು ಕ್ರಮಕ್ರಮವಾಗಿ ಶಿವಸಾರೂಪ್ಯವನ್ನೇ ಪಡೆಯುವನೆಂಬುದರಲ್ಲಿ ಸಂಶಯವಿಲ್ಲ. ಎಂದು ಋಭುಮಹಾಮುನಿಯು ನಿದಾಘಮಹರ್ಷಿಗೆ ತಿಳಿಯಪಡಿಸಿದನು. ॥೨೫॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯಂಶದಲ್ಲಿ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಚತುಸ್ತ್ರಿಂಶೋಽಧ್ಯಾಯಃ

|| ಋಭುರುವಾಚ ||

ಶೃಣುಷ್ವ ಬ್ರಹ್ಮವಿಜ್ಞಾನಮುದ್ಭುತಂ ತ್ವತಿದುರ್ಲಭಂ ।
ಏಕೈಕಶ್ರವಣೇನೈವ ಕೈವಲ್ಯಂ ಪರಮಶ್ನುತೇ ॥೧॥

ಸತ್ಯಂ ಸತ್ಯಂ ಜಗನ್ನಾಸ್ತಿ ಸಂಕಲ್ಪಕಲನಾದಿಕಂ ।
ನಿತ್ಯಾನಂದಮಯಂ ಬ್ರಹ್ಮವಿಜ್ಞಾನಂ ಸರ್ವದಾ ಸ್ವಯಂ ॥೨॥

ಆನಂದಮವ್ಯಯಂ ಶಾಂತಮೇಕರೂಪಮನಾಮಯಂ ।
ಚಿತ್ತಪ್ರಪಂಚಂ ನಾಸ್ತ್ಯೇವ ನಾಸ್ತಿ ಕಾರ್ಯಂ ಚ ತತ್ವತಃ ॥೩॥

---

## ಮೂವತ್ತು ನಾಲ್ಕನೆಯ ಅಧ್ಯಾಯ

ಎಲೈ ನಿದಾಘನೇ, ಅತ್ಯಮೋಘವಾದ ಆಶ್ಚರ್ಯಕರವಾದಂತಹ ಬ್ರಹ್ಮಜ್ಞಾನವನ್ನು ಹೇಳುವೆನು, ಕೇಳು. ಈ ವಿಜ್ಞಾನವನ್ನು ಕೇಳಿದ ಮಾತ್ರದಿಂದಲೇ ಮುಕ್ತಿಯು ಲಭಿಸುವುದು. ||೧||

ಇದು ಸತ್ಯವು ಇದು ಸತ್ಯವು, ಸಂಕಲ್ಪ, ಕಾಲ ಮೊದಲಾದ ಜಗತ್ತು ಇಲ್ಲವೇ ಇಲ್ಲ. ಬ್ರಹ್ಮವಸ್ತುವು ನಿತ್ಯಾನಂದರೂಪವಾದುದು. ಆತ್ಮಾ (ಬ್ರಹ್ಮಾ)ನುಭವವೇ ಅದಾಗಿರುವುದು. ||೨||

ಬ್ರಹ್ಮವಸ್ತುವು ಆನಂದಮಯವು, ಅವಿನಾಶಿಯು, ಶಾಂತರೂಪವಾದುದು,

ವ್ಯವಹಾರಂ ಚ ನೈವಾಸ್ತಿ ನಾಸ್ತಿಕಾರ್ಯಂ ಚ ತತ್ವತಃ ।
ಪ್ರಪಂಚಭಾವನಾ ನಾಸ್ತಿ ದೃಶ್ಯರೂಪಂ ನ ಕಿಂಚನ ॥೪॥

ಅಸತ್ಯರೂಪಂ ಸಂಕಲ್ಪಂ ತತ್ಕಾರ್ಯಂ ಚ ಜಗನ್ನಹಿ ।
ಸರ್ವಮಸ್ತ್ಯೇವ ನಾಸ್ತ್ಯೇವ ಕಾಲಂ ಮಿಥ್ಯೇವಮೀಶ್ವರಃ ॥೫॥

ವಂಧ್ಯಾಕುಮಾರೇ ಭೀತಿಶ್ಚೇತ್ತದಧೀನಮಿದಂ ಜಗತ್ ।
ಗಂಧರ್ವನಗರೇಃ ಸತ್ಯೇ ಹೃದಗ್ನೇ ದೃಶ್ಯತೇ ಕ್ವಚಿತ್ ॥೬॥

ಮೃಗತೃಷ್ಣಾಜಲಂ ಪೀತ್ವಾ ತೃಪ್ತಿಶ್ಚೇದಸ್ತ್ವಿದಂ ಜಗತ್ ।
ನರಶೃಂಗೇನ ಬಾಣೇನ ನಷ್ಟಂ ಪೌರುಷಮಸ್ತ್ವಿಹ ॥೭॥

---

ಒಂದೇ ರೂಪವಾದುದು, ವಿಕಾರಗಳಿಲ್ಲದುದು, ಅಂತಹ ಬ್ರಹ್ಮವಸ್ತುವಿನ ಹೊರತು ಮನಸ್ಸಿನ ಕಲ್ಪನೆಯಾದ ಈ ಕಾರ್ಯ ಪ್ರಪಂಚವು ಇಲ್ಲವೇ ಇಲ್ಲ. ॥೩॥

ವ್ಯವಹಾರವು ಇಲ್ಲ. ವ್ಯವಹಾರಕಾರ್ಯವೂ ಇಲ್ಲ. ಪ್ರಪಂಚಭಾವನೆಯೂ ಇಲ್ಲ. ಕಣ್ಣಿಗೆ ಕಾಣಿಸುವ ಯಾವ ವಸ್ತುವೂ ಇಲ್ಲ. ॥೪॥

ಸಂಕಲ್ಪವು ಅಸತ್ಯವಾದುದು, ಸಂಕಲ್ಪದ ಕಾರ್ಯವಾದ ಜಗತ್ತೂ ಅಸತ್ಯವು. ಎಲ್ಲವೂ ಇವೆ, ಅಂದರೆ ವ್ಯಾವಹಾರಿಕವಾಗಿ ಇವೆ. ಆದರೆ ಪಾರಮಾರ್ಥಿಕವಾಗಿ ಈಶ್ವರನು ಮೊದಲಾದ ಯಾವ ಪ್ರಪಂಚವೂ ಇಲ್ಲ. ॥೫॥

ಅಸತ್ಯವಾದ ಈ ಜಗತ್ತಿನಿಂದ ಯಾವ ಭಯವೂ ಇಲ್ಲ. ಹಾಗೆ ಭಯವನ್ನು ಹೊಂದುವುದಾದರೆ ಇಲ್ಲದ ಬಂಜೆಯಮಗನಿಂದ ಹೆದರಿದಂತೆ, ಗಗನದಲ್ಲಿ ಐಂದ್ರಜಾಲಿಕವಾಗಿ ಅಸತ್ಯವಾದ ಗಂಧರ್ವ ನಗರವು ತೋರಿ ಮಾಯವಾಗುವಂತೆ, ಈ ಜಗತ್ತೂ ಹೃದಯ ಗಗನದಲ್ಲಿ ಕೆಲಕಾಲ ತೋರಿ ಮಾಯವಾಗುವುದು. ॥೬॥

ಈ ಅಸತ್ಯ ಜಗತ್ತಿನಿಂದ ಮನುಷ್ಯನು ತೃಪ್ತಿಯನ್ನು ಹೊಂದುವನೆನ್ನುವುದು, ಬಿಸಿಲ್ಗುದುರೆಯ ನೀರನ್ನು ಕುಡಿದು ಬಾಯಾರಿಕೆಯಾರಿಸಿಕೊಳ್ಳುವನೆನ್ನುವಂತೆ, ಮನುಷ್ಯನ ಕೋಡಿನ ಬಾಣದಿಂದ ಜಯವನ್ನು ಪಡೆವನೆನ್ನುವಂತೆ, ವೃಥಾಲಾಪವೆನಿಸುವುದು. ॥೭॥

ಗಂಧರ್ವನಗರೇ ಸತ್ಯೇ ಜಗದ್ಭವತಿ ಸರ್ವದಾ ।
ಗಗನೇ ನೀಲಿಮಾಸಿದ್ಧೌ ಜಗತ್ಸತ್ಯಂ ಭವಿಷ್ಯತಿ ॥೮॥

ಸಂತೋಷರೂಪ ಏವಾಹಮಿತಿ ಯಾ ನಿಶ್ಚಯಾ ಮತಿಃ ।
ಸಾಚೈವ ಫಲದಃ ಕಾಲೇ ತಸ್ಮಾದ್ಬ್ರಹ್ಮಮಯೋಽಹ್ಯಹಂ ॥೯॥

ಪರಮಾತ್ಮಾ ಪರಂಜ್ಯೋತಿಃ ಪರಾಪರವಿವರ್ಜಿತಃ ।
ಪರಿಪೂರ್ಣಸ್ವರೂಪೋಽಹಂ ಪರಮಾತ್ಮಾಹಮಚ್ಯುತಃ ॥೧೦॥

ಸರ್ವದಾ ಸತ್ಸ್ವರೂಪೋಽಹಂ ಸರ್ವಶಾಸ್ತ್ರಸ್ಯ ನಿರ್ಣಯಃ ।
ಲೋಕಾನಂದಸ್ವರೂಪೋಽಹಂ ಮುಖ್ಯಾನಂದಮಯಃ ಸ್ವಯಂ ॥೧೧॥

ಸರ್ವಂ ಬ್ರಹ್ಮೈವ ಭೂರ್ನಾಸ್ತಿ ಸರ್ವಂ ಬ್ರಹ್ಮೈವ ಶಾಸನಂ ।
ಸರ್ವಂ ಬ್ರಹ್ಮೈವ ನಾಕಾರ್ಯಂ ಸರ್ವಂ ಬ್ರಹ್ಮ ಸ್ವಯಂ ಪರಃ॥೧೨॥

---

ಇಂದ್ರಜಾಲಿಕವಾದ ಗಂಧರ್ವನಗರವು ಸತ್ಯವಾದರೆ ಜಗತ್ತೂ ಅಷ್ಟೇ ಸತ್ಯ. ಗಗನದಲ್ಲಿ ಕಾಣುವ ನೀಲವರ್ಣವು ಸತ್ಯವಾದರೇ ಈ ಜಗತ್ತೂ ಸತ್ಯ. ॥೮॥

ಸಂತೋಷ (ಆನಂದ)ರೂಪನು ನಾನು ಎನ್ನುವ ನಿಶ್ಚಯಬುದ್ಧಿಯೇ ಸಕಾಲದಲ್ಲಿ ಮುಕ್ತಿಯನ್ನುಂಟುಮಾಡುವುದು. ॥೯॥

ಪರಮಪ್ರಕಾಶರೂಪನಾದ, ಪರಿಪೂರ್ಣರೂಪನಾದ, ಉಚ್ಚನೀಚಭೇದಗಳಿಲ್ಲದ ನಾಶರಹಿತನಾದ ಪರಮಾತ್ಮನು ನಾನು. ॥೧೦॥

ಯಾವಾಗಲೂ ಸತ್ಯಸ್ವರೂಪನು ನಾನು, ಎಲ್ಲ ಶಾಸ್ತ್ರಗಳ ಸಿದ್ಧಾಂತವು ನಾನು, ಲೋಕಗಳ ಎಲ್ಲ ಆನಂದವೂ ನನ್ನ ಅಂಶವು, ಪರಿಪೂರ್ಣಾನಂದ ಸ್ವರೂಪನು ನಾನು. ॥೧೧॥

ಎಲ್ಲವೂ ಬ್ರಹ್ಮವಸ್ತುವೇ. ಭೂಮಿಯು ಇಲ್ಲ, ಆಳ್ವಿಕೆಯಿಲ್ಲ, ಕಾರ್ಯವಿಲ್ಲ, ಬ್ರಹ್ಮವಸ್ತುವೇ ಮಾಯೆಯ ಮಹಿಮೆಯಿಂದ ಪರಮೇಶ್ವರನಾಗುವನು. ॥೧೨॥

ನಿತ್ಯಾಕ್ಷರೋಽಹಂ ನಿತ್ಯೋಽಹಂ ಸರ್ವಕಲ್ಯಾಣಕಾರಕಃ ।
ಸತ್ಯಜ್ಞಾನಪ್ರಕಾಶೋಽಹಂ ಮುಖ್ಯವಿಜ್ಞಾನವಿಗ್ರಹಃ ॥೧೩॥

ತುರ್ಯಾತುರ್ಯಪ್ರಕಾಶೋಽಹಂ ಸಿದ್ಧಾಸಿದ್ಧಾದಿವರ್ಜಿತಃ ।
ಸರ್ವಂ ಬ್ರಹ್ಮೈವ ಸತತಂ ಸರ್ವಂ ಬ್ರಹ್ಮ ನಿರಂತರಂ ॥೧೪॥

ಸರ್ವಂ ಬ್ರಹ್ಮ ಚಿದಾಕಾಶಂ ನಿತ್ಯಂ ಬ್ರಹ್ಮ ನಿರಂಜನಂ ।
ಸರ್ವಂ ಬ್ರಹ್ಮ ಗುಣಾತೀತಂ ಸರ್ವಂ ಬ್ರಹ್ಮೈವ ಕೇವಲಂ ॥೧೫॥

ಸರ್ವಂ ಬ್ರಹ್ಮೈವ ಇತ್ಯೇವಂ ನಿಶ್ಚಯಂ ಕುರು ಸರ್ವದಾ ।
ಬ್ರಹ್ಮೈವ ಸರ್ವಮಿತ್ಯೇವಂ ಸರ್ವದಾ ದೃಢನಿಶ್ಚಯಃ ॥೧೬॥

ಸರ್ವಂ ಬ್ರಹ್ಮೈವ ಇತ್ಯೇವ ನಿಶ್ಚಯಿತ್ವಾ ಸುಖೀಭವ ।
ಸರ್ವಂ ಬ್ರಹ್ಮ ನ ಸಂದೇಹೋ ಭಾವಾಭಾವೌ ಚಿದೇವ ಹಿ ॥೧೭॥

---

ಓಂಕಾರಸ್ವರೂಪನು ನಾನು, ನಿತ್ಯನು, ಎಲ್ಲ ಮಂಗಳಗಳನ್ನೂ ಕರುಣಿಸುವವನು ನಾನು, ಸತ್ಯಜ್ಞಾನಗಳ ಪ್ರಕಾಶವು ನಾನು, ಜ್ಞಾನವೇ ನನ್ನ ಸ್ವರೂಪವು. ||೧೩||

ವಿಶ್ವತೈಜಸಪ್ರಾಜ್ಞಪರಮಾತ್ಮಗಳೆಂಬೀ ತುರ್ಯಾತುರ್ಯಸ್ವರೂಪಗಳನ್ನು ಪ್ರಕಾಶಗೊಳಿಸುವವನು ನಾನು. ಸಿದ್ಧ ಅಸಿದ್ಧ ಎಂಬ ಭೇದಗಳು ನನಗಿಲ್ಲ, ನಾನೇ ಬ್ರಹ್ಮವಸ್ತುವು, ಆ ಬ್ರಹ್ಮವಸ್ತುವು ಎಲ್ಲೆಲ್ಲೂ ನಿರಂತರವಾಗಿ ಹರಡಿರುವುದು. ||೧೪||

ಬ್ರಹ್ಮವಸ್ತುವು ಜ್ಞಾನಾಕಾಶರೂಪವಾದುದು, ನಿರ್ಮಲವಾದುದು, ನಿರ್ಗುಣವಾದುದು, ಜಗತ್ತೆಲ್ಲವೂ ಆ ಬ್ರಹ್ಮವಸ್ತುಮಯವಾಗಿರುವುದು, ಬೇರೆಯಿಲ್ಲ. ||೧೫||

ಎಲ್ಲವೂ ಬ್ರಹ್ಮವಸ್ತುವು ಎಂಬ ನಿಶ್ಚಯವನ್ನು ಸದಾ ಉಳ್ಳವನಾಗು. ಬ್ರಹ್ಮವಸ್ತುವೇ ಎಲ್ಲವೂ ಎನ್ನುವ ದೃಢನಿಶ್ಚಯವುಳ್ಳವನಾಗಿ ಸುಖಿಯಾಗು. ||೧೬||

ಎಲ್ಲವೂ ಬ್ರಹ್ಮವಸ್ತುವೇ ಎನ್ನುವುದರಲ್ಲಿ ಸಂದೇಹವಿಲ್ಲ. ಭಾವ-ಅಭಾವಗಳೂ ಬ್ರಹ್ಮವಸ್ತುವೇ, ಭೇದ-ಅಭೇದಗಳ ವಿವಾದವೂ ಇಲ್ಲ, ಎಲ್ಲವೂ ಬ್ರಹ್ಮವೇ. ||೧೭||

ದ್ವೈತಾದ್ವೈತವಿವಾದೋಽಯಂ ನಾನಾ ನಾಸ್ತಿ ನ ಸಂಶಯಃ ।
ಸರ್ವವಿಜ್ಞಾನಮಾತ್ರೋಽಹಂ ಸರ್ವಂ ಬ್ರಹ್ಮೇತಿ ನಿಶ್ಚಯಃ ॥೧೮॥

ಗುಹ್ಯಾದ್ಗುಹ್ಯತರಂ ಸೋಽಹಂ ಗುಣಾತೀತೋಽಹಮದ್ವಯಂ ।
ಅನ್ವಯಂ ವ್ಯತಿರೇಕಂ ಚ ಕಾರ್ಯಾಕಾರ್ಯಂ ವಿಶೋಧಯ ॥೧೯॥

ಸಚ್ಚಿದಾನಂದರೂಪೋಽಹಮನುತ್ಪನ್ನಮಿದಂ ಜಗತ್ ।
ಬ್ರಹ್ಮೈವ ಸರ್ವಮೇವೇದಂ ಚಿದಾಕಾಶಮಯಂ ಜಗತ್ ॥೨೦॥

ಬ್ರಹ್ಮೈವ ಪರಮಾನಂದಮಾಕಾಶಸದೃಶೋ ವಿಭುಃ ।
ಬ್ರಹ್ಮೈವ ಸಚ್ಚಿದಾನಂದಂ ಸದಾ ವಾಚಾಮಗೋಚರಂ ॥೨೧॥

ಬ್ರಹ್ಮೈವ ಸರ್ವಮೇವೇದಂ ಸದಾ ಸನ್ಮಾತ್ರಮೇವ ಹಿ ।
ಬ್ರಹ್ಮೈವ ಸಚ್ಚಿದಾನಂದಂ ಚಿದ್ಘನಾನಂದವಿಗ್ರಹಂ ॥೨೨॥

ಬ್ರಹ್ಮೈವ ಸರ್ವಮೇವೇದಂ ಅಸ್ತಿ ನಾಸ್ತೀತಿ ಕಿಂಚನ ।
ಆನಂದಭಾವನಾ ಕಿಂಚಿತ್ಸದಾ ಸನ್ಮಾತ್ರ ಏವ ಹಿ ॥೨೩॥

---

ಎಲ್ಲ ಜ್ಞಾನಗಳು ನಾನು, ಅತಿ ರಹಸ್ಯವಾದ ವಸ್ತುವು ನಾನು. ನಿರ್ಗುಣನೂ ಅದ್ವಿತೀಯನೂ ಆಗಿರುವೆನು. ನನ್ನ ಹೊರತು ಏನೂ ಇಲ್ಲ ಎನ್ನುವ ಅನ್ವಯ ವ್ಯತಿರೇಕಗಳಿಂದ ' ನಾನೇ ಬ್ರಹ್ಮವಸ್ತು " ವೆಂದು ತಿಳಿದುಕೋ. ॥೧೮-೧೯॥

ಸಚ್ಚಿದಾನಂದಸ್ವರೂಪನು ನಾನು, ಜಗತ್ತೆಲ್ಲವೂ ಅಸತ್ಯ, ಬ್ರಹ್ಮವಸ್ತುವಿನ ಹೊರತು ಬೇರೆ ಏನೂ ಇಲ್ಲ. ಆ ಬ್ರಹ್ಮವಸ್ತುವೇ ನಾನು. ॥೨೦॥

ಗಗನದಂತೆ ನಿರ್ಲಿಪ್ತವಾಗಿ ಸರ್ವವ್ಯಾಪಿಯಾದ ಆನಂದಮಯವಾದ ವಸ್ತುವು ಬ್ರಹ್ಮನು, ಸತ್ಯಜ್ಞಾನಾನಂದರೂಪನು, ವಾಕ್ಕುಗಳಿಗೆ ಸಿಕ್ಕದವನು. ॥೨೧॥

ಇದೆಲ್ಲವೂ ಬ್ರಹ್ಮವಸ್ತುವೇ, ಸತ್ಯಜ್ಞಾನ ಆನಂದಗಳೂ ಬ್ರಹ್ಮವಸ್ತುವೇ, ಬೇರೆಯಲ್ಲ. ಜ್ಞಾನಮೂರ್ತಿಯು ಬ್ರಹ್ಮವಸ್ತುವು. ॥೨೨॥

ಇದೆ-ಇಲ್ಲ-ಎನ್ನುವ ಭಾವನೆಗಳಾವುವೂ ಇಲ್ಲ. ಯಾವಾಗಲೂ ಆನಂದಪ್ರಕಾಶವೊಂದೇ ಇರುವುದು. ಆನಂದಪ್ರಕಾಶವೇ ಬ್ರಹ್ಮವಸ್ತುವು. ॥೨೩॥

ಬ್ರಹ್ಮೈವ ಸತ್ಯಂ ಸಚ್ಚ ಸನಾತನಮಹಂ ಮಹತ್ ।
ಬ್ರಹ್ಮೈವ ಸಚ್ಚಿದಾನಂದೋ ಓತಪ್ರೋತೇ ಚ ತಿಷ್ಠತಿ ॥೨೪॥

ಬ್ರಹ್ಮೈವ ಸಚ್ಚಿದಾನಂದಂ ಸರ್ವಾಕಾರಂ ಸನಾತನಂ ।
ಬ್ರಹ್ಮೈವ ಸಚ್ಚಿದಾನಂದಂ ಪರಮಾನಂದಮವ್ಯಯಂ ॥೨೫॥

ಬ್ರಹ್ಮೈವ ಸಚ್ಚಿದಾನಂದಂ ಮಾಯಾತೀತಂ ನಿರಂಜನಂ ।
ಬ್ರಹ್ಮೈವ ಸರ್ವಮೇವೇದಂ ಬ್ರಹ್ಮಣೋನ್ಯನ್ನ ಕಿಂಚನ ॥೨೬॥

ಬ್ರಹ್ಮೈವ ಸಚ್ಚಿದಾನಂದಂ ಚಿನ್ಮಾತ್ರೈಕಸ್ವರೂಪಕಂ ।
ಬ್ರಹ್ಮೈವ ಸರ್ವಮೇವೇದಂ ಸರ್ವಭೇದವಿವರ್ಜಿತಂ ॥೨೭॥

ಸಚ್ಚಿದಾನಂದಬ್ರಹ್ಮೈವ ನಾನಾಕಾರ ಇವ ಸ್ಥಿತಂ ।
ಬ್ರಹ್ಮೈವ ಸರ್ವಮೇವೇದಂ ವಾರ್ತಾ ಚಾವಸರೋಽಸ್ತಿಹಿ ॥೨೮॥

---

ಬ್ರಹ್ಮವಸ್ತುವು ಸತ್ಯವಾದುದು, ಜ್ಞಾನರೂಪವಾದುದು, ಆನಂದರೂಪವಾದುದು, ಅತಿ ಪ್ರಾಚೀನವಾದುದು, ಜಗತ್ತೆಲ್ಲೆಲ್ಲಾ ಅಂತರ್ಯಾಮಿಯಾಗಿ ಇರುವುದು. ॥೨೪॥

ಎಲ್ಲ ಬಗೆಯ ಆಕಾರವಾಗಿಯೂ ಬ್ರಹ್ಮವಸ್ತುವು ತೋರುವುದು. ಪರಮಾನಂದರೂಪವಾಗಿರುವುದು, ನಾಶವಿಲ್ಲದುದಾಗಿರುವುದು. ॥೨೫॥

ಬ್ರಹ್ಮವಸ್ತುವು ಸಚ್ಚಿದಾನಂದರೂಪವಾಗಿರುವುದು, ಮಾಯೆಗೊಳಪಟ್ಟಿಲ್ಲ, ನಿರ್ಮಲವಾಗಿರುವುದು, ಈ ಜಗತ್ತೆಲ್ಲವೂ ಬ್ರಹ್ಮನೇ ಹೊರತು ಬೇರೆಯಲ್ಲ, ಬೇರೆಯಿಲ್ಲ. ॥೨೬॥

ಬ್ರಹ್ಮವಸ್ತುವು ಚೈತನ್ಯಮಾತ್ರಸ್ವರೂಪವಾದುದು, ಈ ಜಗತ್ತೆಲ್ಲವೂ ಬ್ರಹ್ಮವೇ. ಬ್ರಹ್ಮವಸ್ತುವಿನ ಹೊರತು ಬೇರೆಯಿಲ್ಲ. ಬೇರೆ ಯಾವುದೂ ಇಲ್ಲ. ಆದುದರಿಂದಲೇ ಯಾವ ಭೇದಗಳೂ ಬ್ರಹ್ಮವಸ್ತುವಿಗಿಲ್ಲ. ॥೨೭॥

ಸಚ್ಚಿದಾನಂದಬ್ರಹ್ಮವಸ್ತುವೇ ನಾನಾಕಾರಣವಾಗಿರುವಂತೆ ತೋರುವುದು. ಒಮ್ಮೆ ವಾರ್ತೆಯಾಗಿ ಕೇಳಿಸುವುದು, ಕಾಲವಾಗಿ ಮತ್ತೊಮ್ಮೆ ಗಣಿಸಲ್ಪಡುವುದು. ಒಟ್ಟಿನಲ್ಲಿ ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ ಹೊರತು ಬೇರೆಯಲ್ಲ. ॥೨೮॥

ಸಚ್ಚಿದಾನಂದಬ್ರಹ್ಮೈವ ಪರಂಜ್ಯೋತಿಸ್ಸ್ವರೂಪಕಂ ।
ಬ್ರಹ್ಮೈವ ಸಚ್ಚಿದಾನಂದಂ ನಿತ್ಯಂ ನಿಶ್ಚಲಮವ್ಯಯಂ ॥೨೯॥

ಬ್ರಹ್ಮೈವ ಸರ್ವಮೇವೇದಂ ಬ್ರಹ್ಮಣೋಽನ್ಯನ್ನ ಕಿಂಚನ ।
ಬ್ರಹ್ಮೈವ ಸರ್ವಮೇವೇದಂ ವಾಚಾಮವಧಿರಸಾವಯಂ ॥೩೦॥

ಬ್ರಹ್ಮೈವ ಸಚ್ಚಿದಾನಂದಂ ಸ್ವಯಮೇವ ಸ್ವಯಂ ಸದಾ ।
ಬ್ರಹ್ಮೈವ ಪರಮಾನಂದಂ ನ ಕರೋತಿ ನ ತಿಷ್ಠತಿ ॥೩೧॥

ಬ್ರಹ್ಮೈವ ಸರ್ವಮೇವೇದಂ ನ ಗಚ್ಛತಿ ನ ತಿಷ್ಠತಿ ।
ಬ್ರಹ್ಮೈವ ಸಚ್ಚಿದಾನಂದಂ ನ ಶುಕ್ಲಂ ನ ಚ ಕೃಷ್ಣಕಂ ॥೩೨॥

ಬ್ರಹ್ಮೈವ ಪರಮಾನಂದಂ ಸರ್ವಾಧಿಷ್ಠಾನಮವ್ಯಯಂ ।
ಬ್ರಹ್ಮೈವ ಸಚ್ಚಿದಾನಂದಂ ನ ತೂಷ್ಣೀಂ ನ ವಿಭಾಷಣಂ ॥೩೩॥

---

ಸಚ್ಚಿದಾನಂದಬ್ರಹ್ಮವಸ್ತುವು ಪರಂಜ್ಯೋತಿರೂಪವಾದುದು, ನಿತ್ಯವಾದುದು, ಕರ್ಮಗಳ ಸಂಬಂಧವಿಲ್ಲದುದು, ನಾಶರಹಿತವಾದುದು. ॥೨೯॥

ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮನ ಹೊರತಾಗಿ ಏನೂ ಇಲ್ಲ. ಅವನು, ಇವನು ಎಂದು ಮೊದಲಾದ ವ್ಯವಹಾರಗಳಲ್ಲೆಲ್ಲಾ ಬ್ರಹ್ಮವಸ್ತುವೇ ವಿಷಯವಾಗಿದ್ದು ವಾಕ್ಕುಗಳಿಗೂ ಅವಧಿ (ಕೊನೆ) ಯಾಗಿದೆ. ॥೩೦॥

ಸಚ್ಚಿದಾನಂದರೂಪವಾದ ಬ್ರಹ್ಮವಸ್ತುವು ಯಾವಾಗಲೂ ತಾನೇತಾನಾಗಿರುವುದು. ಪರಮಾನಂದರೂಪವಾದ ಆ ವಸ್ತುವು ಏನನ್ನೂ ಮಾಡುವುದಿಲ್ಲ. ಒಂದೆಡೆಯಲ್ಲಿಯೇ ಇಲ್ಲವೂ ಇಲ್ಲ. ॥೩೧॥

ಆ ಬ್ರಹ್ಮವಸ್ತುವು ಹೋಗುವುದೂ ನಿಲ್ಲುವುದೂ ಇಲ್ಲ, ಇರುವುದೂ ಇಲ್ಲ. ಅದು ಬಿಳಿಯುದೂ ಕರಿಯುದೂ ಅಲ್ಲ. ॥೩೨॥

ಸಚ್ಚಿದಾನಂದಸ್ವರೂಪವಾದ ಬ್ರಹ್ಮವಸ್ತುವೇ ಎಲ್ಲಕ್ಕೂ ಆಧಾರವು. ನಿತ್ಯವಾದ ವಸ್ತುವು ಸುಮ್ಮನಿರುವುದೂ ಇಲ್ಲ. ಮಾತನಾಡುವುದೂ ಇಲ್ಲ. ॥೩೩॥

ಬ್ರಹ್ಮೈವ ಪರಮಾನಂದಂ ನತ್ವಂ ನಾಹಂ ನ ಕಿಂಚನ ।
ಬ್ರಹ್ಮೈವ ಸಚ್ಚಿದಾನಂದಂ ಪರಾತ್ಪರತರಂ ಭವೇತ್ ॥೩೪॥

ಶುಕ್ತಿಕಾರಜತಂ ಸತ್ಯಂ ಭೂಷಣಂ ಚೇಜ್ಜಗದ್ಭವೇತ್ ।
ರಜ್ಜುಸರ್ಪೇಣ ನಷ್ಟಶ್ಚೇನ್ನರೋ ಭವತಿ ಸಂಸ್ಕೃತಿಃ ॥೩೫॥

ಜಾತಿರೂಪೇಣ ಬಾಣೇನ ಜ್ವಾಲಾಗ್ನೌ ನಾಶಿತೇ ಸತಿ ।
ರಂಭಾಸ್ತಂಭೇನ ಕಾಷ್ಠೇನ ಪಾಕಸಿದ್ಧಿರ್ಜಗದ್ಭವೇತ್ ॥೩೬॥

ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ।
ಸದ್ಯಃ ಕುಮಾರಿಕಾರೂಪೈಃ ಪಾಕಸಿದ್ಧೇ ಜಗದ್ಭವೇತ್ ॥೩೭॥

ನಿತ್ಯಾನಂದಮಯಂ ಸರ್ವಂ ಸತ್ಯಾನಂದಸದಾತ್ಮಕಂ ।
ಚಿತ್ರದೀಪೈಸ್ತಮೋನಾಶೇ ಜಗದ್ಭವತು ಸರ್ವದಾ ॥೩೮॥

---

ಬ್ರಹ್ಮವಸ್ತುವು ಪರಮಾನಂದರೂಪವಾಗಿ ವ್ಯಾಪಕವಾಗಿರುವುದು. ನಾನು, ನೀನು, ಎಂದು ಮೊದಲಾದ ಚಿಕ್ಕಚಿಕ್ಕ ವ್ಯವಹಾರಗಳು ಅದಕ್ಕಿಲ್ಲ. ಸರ್ವೋತ್ತಮವು ಅದು. ॥೩೪॥

ಬೆಳ್ಳಿಯಾಗಿ ಕಂಡ ಮುತ್ತಿನ ಚಿಪ್ಪು ಬೆಳ್ಳಿಯಂತೆ ಸತ್ಯವಾಗಿ ಆಭರಣ ವಾಗಬಹುದಾದರೆ ಈ ಜಗತ್ತೂ ಸತ್ಯವಾಗಿ ಕಾರ್ಯಕಾರಿಯಾದೀತು. ಹಾವಾಗಿ ಕಂಡ ಹಗ್ಗವು ಮನುಷ್ಯನನ್ನು ಕಚ್ಚಿ ಕೊಲ್ಲಬಹುದಾದರೆ ಈ ಸಂಸಾರವೂ ಅದರಂತೆ ಕಾರ್ಯಕಾರಿಯೂ ಸತ್ಯವೂ ಆಗಬಹುದು. ॥೩೫॥

ಬಿಸಿಲ್ಗುದುರೆಯ ನೀರಿನಿಂದ ಕಾಡುಗಿಚ್ಚು ಶಾಂತವಾಗಬಹುದಾದರೆ, ಬಾಳೆಯ ಮರದ ಸೌದೆಯಿಂದ ಅಡಿಗೆಯನ್ನು ಮಾಡಬಹುದಾದರೆ, ಜಗತ್ತು ಸತ್ಯ ವಾದೀತು, ಕಾರ್ಯಕಾರಿಯಾದೀತು. ॥೩೬॥

ಆಟದ ಹೆಣ್ಣುಬೊಂಬೆಯಿಂದ ಹೆಂಗಸರುಮಾಡಬಹುದಾದ ಅಡಿಗೆಯಾಗ ಬಹುದಾದರೆ, ಅಸತ್ಯವಾದೀ ಜಗತ್ತಿನಿಂದಲೂ ಕಾರ್ಯಸಿದ್ಧಿಯಾದೀತು. ॥೩೭॥

ಚಿತ್ರದಲ್ಲಿ ಬರೆದಿರುವ ದೀಪದಿಂದ ಕತ್ತಲೆಯು ಹೋಗುವುದಾದರೆ ಅಸತ್ಯ ವಾದೀ ಜಗತ್ತಿನಿಂದಲೂ ಕಾರ್ಯಸಿದ್ಧಿಯಾಗಬಹುದು. ಸತ್ಯಾನಂದ ನಿತ್ಯಾನಂದ ಸ್ವರೂಪವಾದ ಬ್ರಹ್ಮವೊಂದೇ ಸತ್ಯವಾದುದು. ॥೩೮॥

ನಿತ್ಯಾನಂದಮಯಂ ಸರ್ವಂ ಕೇವಲಂ ಸರ್ವದಾ ಸ್ವಯಂ ।
ಮಿಥ್ಯಾಟವ್ಯಾಂ ವಾಯಸಾನ್ನಮಸ್ತಿ ಚೇಜ್ಜಗದುದ್ಭವಂ ॥೩೯॥

ಮೂಲಾರೋಪಣಮಾತ್ರಸ್ಯ ಪ್ರೀತಿಶ್ಚೇದ್ಭಾಷಣಂ ಜಗತ್ ।
ಮಾಸಾತ್ಪೂರ್ವಂ ಮೃತೋ ಮರ್ತ್ಯ ಆಗತಶ್ಚೇಜ್ಜಗದ್ಭವೇತ್ ॥೪೦॥

ತಕ್ರಂ ಕ್ಷೀರಸ್ವರೂಪಂ ಚೇತ್ ಕ್ವಚಿತ್ ಕ್ವಚಿತ್ ಜಗದ್ಭವೇತ್ ।
ಗೋಷ್ಠೇನಾಸುದ್ಭವಂ ವಿಶ್ವಂ ಪುನರಾರೋಹಣಂ ಜಗತ್ ॥೪೧॥

ಭೂರಜಸ್ಯಾಬ್ದಮುತ್ಪನ್ನಂ ಜಗದ್ಭವತು ಸರ್ವದಾ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೪೨॥

ಕೂರ್ಮರೋಮ್ಣಾಂ ಜಗದ್ವ್ಯಾಪ್ತ್ಯೇ ಜಗದಸ್ತು ಮದೋತ್ಕಟೇ ।
ಮೃಣಾಲತಂತುನಾ ಮೇರುಶ್ಚಲಿತಶ್ಚೇಜ್ಜಗದ್ಭವೇತ್ ॥೪೩॥

---

ಕಾಗೆಗೆ ಸ್ವಪ್ನದಲ್ಲಿ ಕಾಡಿನಲ್ಲಿ ಅನ್ನವು ಸಿಕ್ಕಿದಂತೆ ಆಗಿ ತೃಪ್ತಿಯು ನಿಜವಾಗುಂಟಾದರೆ ಈ ಜಗತ್ತು ಸತ್ಯವಾದೀತು. ॥೩೯॥

ಮೂಲಾ ಅಜ್ಞಾನಾರೋಪದಿಂದಲೇ ಪ್ರೀತಿಭಾಷಣಗಳು ಜಗತ್ತಿಗೆ ಸಿಕ್ಕುವುದಾದರೆ ಜಗತ್ತು ಸತ್ಯವಾದೀತು. ಮತ್ತು ತಿಂಗಳ ಹಿಂದೆ ಮೃತನಾದವನು ಪುನಃ ಜೀವಿಸಿ ಬಂದರೆ ಆಗ ಜಗತ್ತು ಸತ್ಯವೆಂದೊಪ್ಪಬಹುದು. ॥೪೦॥

ಮೊಸರು ಹಾಲಾಗಿ ಪರಿಣಮಿಸಬಹುದಾದರೆ ಜಗತ್ತು ಪರಮಾತ್ಮನಿಂದ ಸತ್ಯವಾಗಿ ಜನಿಸೀತು, ಅದೂ ಇಲ್ಲ, ಇದೂ ಇಲ್ಲ. ॥೪೧॥

ಭೂಮಿಯ ಧೂಳು ಜನಿಸಿ ಇಷ್ಟು ವರ್ಷವಾಯಿತೆಂದು ತಿಳಿಯಬಹುದಾದರೆ ಜಗತ್ತೂ ಸತ್ಯವೆಂದಾದೀತು. ॥೪೨॥

ಆಮೆಯ ಕೂದಲಿನಿಂದ ಜಗತ್ತು ನಶಿಸುವುದಾದರೆ ಜಗತ್ತು ಸತ್ಯವೆಂದಾದೀತು. ತಾವರೆ ದಂಟಿನ ದಾರದಿಂದ ಮೇರುಗಿರಿಯನ್ನು ಅಲುಗಿಸಬಹುದಾದರೆ ಜಗತ್ತು ಸತ್ಯವಾದೀತು. ॥೪೩॥

ನಿತ್ಯಾನಂದಮಯಂ ಸರ್ವಂ ಕೇವಲಂ ಸರ್ವದಾಸ್ವಯಂ ।
ತರಂಗಮಾಲಯಾ ಸಿಂಧುಃ ಬಂಧಶ್ಚೇದಸ್ತ್ವಿದಂ ಜಗತ್ ॥೪೪॥

ಜ್ವಾಲಾಗ್ನಿಮಂಡಲೇ ಪದ್ಮಂ ಬುದ್ಧಂ ಚೇಜ್ಜಗದುದ್ಭವೇತ್ ।
ಮಹಚ್ಛೈಲೇಂದ್ರನಿಲಯಂ ಸಂಭವಶ್ಚೇದಿದಂ ಭವೇತ್ ॥೪೫॥

ನಿತ್ಯಾನಂದಮಯಂ ಸರ್ವಂ ಕೇವಲಂ ಸರ್ವದಾ ಸ್ವಯಂ ।
ಮೀನ ಆಗತ್ಯ ಪದ್ಮಾಕ್ಷೇ ಸ್ಥಿತಶ್ಚೇದಸ್ತ್ವಿದಂ ಜಗತ್ ॥೪೬॥

ನಿಗೀರ್ಣಶ್ಚೇದ್ಭೃಂಗಸೂನುರ್ಮೇರುಂ ಫಲವದಸ್ತ್ವಿದಂ ।
ಮಶಕೇನಾಶಿತೇ ಸಿಂಹೇ ಹತೇ ಭವತು ಕಲ್ಪನಂ ॥೪೭॥

ಅಣುಕೋಟಿರವಿಸ್ತೀರ್ಣಂ ತ್ರೈಲೋಕ್ಯಂ ಚೇಜ್ಜಗದ್ಭವೇತ್ ।
ಸ್ವಪ್ನೇ ತಿಷ್ಠತಿ ಯದ್ವಸ್ತು ಜಾಗರೇ ಸ್ಯಾಜ್ಜಗದ್ಭವೇತ್ ॥೪೮॥

ನದೀವೇಗೋ ನಿಶ್ಚಲಶ್ಚೇತ್ ಜಗದ್ಭವತು ಸರ್ವದಾ ।
ಜಾತ್ಯಂಧೈರತ್ನವಿಷಯಃ ಸುಜ್ಞಾತಶ್ಚೇಜ್ಜಗದ್ಭವೇತ್ ॥೪೯॥

---

ಅಲೆಗಳ ಸಾಲಿನಿಂದಲೇ ಸಾಗರವನ್ನು ಬಂಧಿಸಬಹುದಾದರೆ ಈ ಜಗತ್ತು ಸತ್ಯವೆಂದೊಪ್ಪಿಕೊಳ್ಳಬಹುದು. ॥೪೪॥

ಬೆಂಕಿಯ ಜ್ವಾಲೆಯಿಂದ ಕಮಲವು ಜನಿಸಬಹುದಾದರೆ, ಬೆಟ್ಟದ ತುದಿಯ ಕೋಡುಗಲ್ಲಿನಲ್ಲಿ ತಾವರೆಯು ಹುಟ್ಟಬಹುದಾದರೆ ಈ ಜಗತ್ತು ಸತ್ಯವಾದೀತು. ॥೪೫॥

ಮೀನು ನೀರನ್ನು ಬಿಟ್ಟು (ನೇತ್ರ) ಕಮಲದಲ್ಲಿ ನೆಲಸಬಹುದಾದರೆ, ದುಂಬಿಯ ಮರಿಯು ಮೇರುಗಿರಿಯನ್ನು ನುಂಗಬಹುದಾದರೆ, ನೊಣವು ಸಿಂಹವನ್ನು ಹೊಡೆದು ತಿನ್ನಬಹುದಾದರೆ ಈ ಜಗತ್ತು ಸತ್ಯವಾಗಬಹುದು. ॥೪೬-೪೭॥

ಕೋಟಿ ಅಣುಗಳು ಭೂಮಿಯನ್ನು ಮುಚ್ಚಬಹುದಾದರೆ, ಸ್ವಪ್ನದಲ್ಲಿ ಕಂಡ ವಸ್ತು ಜಾಗ್ರತ್ತಿನಲ್ಲಿ ಸಿಕ್ಕಬಹುದಾದರೆ, ನದಿಯು ಚಲಿಸದಿದ್ದರೆ, ಹುಟ್ಟು ಕುರುಡರು ರತ್ನಪರೀಕ್ಷೆಯನ್ನು ಮಾಡಬಹುದಾದರೆ ಈ ಜಗತ್ತು ಸತ್ಯವೆಂದಾದೀತು. ॥೪೮-೪೯॥

ಸದ್ಯೋಜಾತಾ ತು ಕನ್ಯಾವಾ ಸಂಭೋಗೋಸ್ತು ಜಗದ್ಭವೇತ್ ।
ಕಾಕೇ ವಿವಾಹಂ ಸಂಗಂ ಚ ಜಗದ್ಭವತಿ ನಿಶ್ಚಯಃ ॥೫೦॥

ಮಹೀಖರೋ ವಾ ಸಿಂಹೋ ವಾ ಯುದ್ಧಂ ಚೇಜ್ಜಗದುದ್ಭವಂ ।
ಚಂದ್ರಸೂರ್ಯಾದಿಕಂ ತ್ಯಕ್ತ್ವಾ ರಾಹುಶ್ಚೇತ್ ದೃಶ್ಯತೇ ಜಗತ್॥೫೧॥

ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ।
ಭ್ರಷ್ಟಬೀಜೇನ ಉತ್ಪನ್ನೇ ವೃದ್ಧಿಶ್ಚೇಚ್ಚಿತ್ರಸಂಭವಂ ॥೫೨॥

ಮಹಾನಪುಂಸಕಸ್ಯೇವ ಪುತ್ರಶ್ಚೇತ್ ಸ್ತ್ರೀಸುಖಂತು ವಾ
ಲಲಿತಂ ಶಶಶೃಂಗೇನ ರಥಾರೂಢೋಸ್ತಿ ಚೇಜ್ಜಗತ್ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೫೩॥

ವಂಧ್ಯಾಗರ್ಭಸ್ತತಸ್ಸಂಜಾತಾ ತತಸ್ತದಸ್ತ್ವಿದಂ ಜಗತ್ ।
ಮಹಾದರಿದ್ರೈರಾಢ್ಯಾನಾಂ ಸುಖಜ್ಞಾನೇ ತದಾ ಜಗತ್ ॥೫೪॥

---

ಆಗತಾನೇ ಹುಟ್ಟಿದ ಹೆಣ್ಣುಶಿಶುವಿನಲ್ಲಿ ಸಂಭೋಗವು ಸಾಧ್ಯವಾಗಬಹುದಾದರೆ, ಹೆಣ್ಣುಕಾಗೆಯನ್ನು ಮಾನವನು ಮದುವೆಯಾಗಿ ಅಂಗಸುಖವನ್ನು ಹೊಂದಬಹುದಾದರೆ, ಈ ಜಗತ್ತು ಸತ್ಯವಾದೀತು. ॥೫೦॥

ಕತ್ತೆಯು ಸಿಂಹದೊಡನೆ ಯುದ್ಧಮಾಡಿ ಜಯಿಸಬಹುದಾದರೆ, ಚಂದ್ರಸೂರ್ಯಾದಿಗಳನ್ನು ಬಿಟ್ಟು ರಾಹುವೇ ಪ್ರಕಾಶಮಾನನಾದರೆ, ಜಗತ್ತು ಸತ್ಯವಾಗಿದ್ದೀತು. ನಿತ್ಯಾನಂದರೂಪವಾದ ಬ್ರಹ್ಮವಸ್ತುವೊಂದೇ ನಿಜವಾಗಿ ಇರುವುದು. ॥೫೧॥

ಹುರಿದ ಬೀಜದಿಂದ ಮೊಳಕೆಯು ಹುಟ್ಟಬಹುದಾದರೆ, ಹುಟ್ಟುಷಂಡನು ಸ್ತ್ರೀಸುಖವನ್ನನುಭವಿಸುತ್ತಾ ಪುತ್ರವಂತನಾಗಿ ಮೊಲದ ಕೊಂಬಿನ ಧನುಸ್ಸನ್ನು ಹಿಡಿದು ರಥವೇರಿದನೆನ್ನುವುದು ನಿಜವಾದರೆ, ಈ ಜಗತ್ತೂ ನಿಜವಾದೀತು. ॥೫೨-೫೩॥

ಹುಟ್ಟುಬಂಜೆಗೆ ಗರ್ಭವಾಗಬಹುದಾದರೆ, ಕಡುಬಡವರು ಮಹತ್ತಾದ ಐಶ್ವರ್ಯದ ಅನುಭವವುಳ್ಳವರಾದರೆ ಈ ಜಗತ್ತೂ ಸತ್ಯವಾದೀತು. ॥೫೪॥

ಶುನೋರ್ವಿರ್ೀಯರ್ೇಣ ಸಿಂಹಸ್ತು ಜಾತೇ ಸತಿ ಜಗತ್ತದಾ ।
ಜ್ಞಾನಿನೋ ಹೃದಯಂ ಮೂಢೈರ್ಜ್ಞಾತಂ ಚೇತ್ಕಲ್ಪನಂ ತದಾ॥೫೫॥

ಗುಣರೂಪೇ ರಸೇ ಪೃಥೇ ಮುಕ್ತೇ ಜಗದಿದಂ ಭವೇತ್ ।
ತೋಯೇನ ಲವಣೇ ಯುಕ್ತೇ ನಲಿನೇ ಭುವನಂ ತದಾ ॥೫೬॥

ಶ್ವಾನೇನ ಸಾಗರೇ ಪೀತೇ ನಿಶೇಷೇಣ ಮನೋ ಭವೇತ್ ॥೫೭॥
ಶಿಲಾದಾರುಮಯ್ಯೈ ರೂಪೈರ್ದಗ್ಧಾ ನೌ ರ್ಭಕ್ಷಿತಂ ಜಗತ್ ।

ಶ್ರದ್ಧಾಕಾಶೇ ಮನುಷ್ಯೇಷು ಪತಿತಶ್ಚೇತ್ತದಾ ಜಗತ್ ॥೫೮॥
ಭೂಮೌ ವಾ ಪತಿತಂ ವ್ಯೋಮ ತಿಷ್ಠತಿ ಚೇತ್ತದಾ ಜಗತ್ ।

ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೫೯॥

ಮಹಾಕರ್ದಮಸಂಚಾರಂ ಸಂಕ್ರಮೋ ಚೇನ್ಮನಃ ಕದಾ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೬೦॥

---

ನಾಯಿಯ ಹೊಟ್ಟೆಯಲ್ಲಿ ಸಿಂಹವು ಹುಟ್ಟಬಹುದಾದರೆ ಮೂಢರು ಜ್ಞಾನಿಗಳ ಹೃದಯವನ್ನು ತಿಳಿಯಬಲ್ಲವರಾದರೆ ಈ ಜಗತ್ತು ಸತ್ಯವಾದೀತು. ॥೫೫॥

ರಸವು ಗುಣರೂಪವನ್ನು ಬಿಡಬಹುದಾದರೆ, ನೀರು ಭೂಮಿಯಲ್ಲಿಲ್ಲವಾಗಬಹುದಾದರೆ ಈ ಜಗತ್ತು ಸತ್ಯವಾದೀತು. ॥೫೬॥

ನಾಯಿಯು ಸಮುದ್ರವೆಲ್ಲವನ್ನೂ ಕುಡಿಯಬಹುದಾದರೆ, ಹಡಗು, ಕಲ್ಲು ಮರ ಇವುಗಳನ್ನು ಸುಡುವುದಾದರೆ, ಆಕಾಶವು ಕಳಚಿ ಮೈಮೇಲೆ ಬೀಳಬಹುದಾದರೆ ಈ ಜಗತ್ತು ಸತ್ಯವಾಗಬಹುದು. ॥೫೭-೫೮॥

ಭೂಮಿಯಲ್ಲಿ ಆಕಾಶವು ಬಿದ್ದು ಪ್ರಾಣಿಗಳಂತೆ ನಿಲ್ಲಬಹುದಾದರೆ ಈ ಜಗತ್ತು ಸತ್ಯವಾಗಬಹುದು, ಬ್ರಹ್ಮವಸ್ತುವೊಂದೇ ಸತ್ಯವು. ॥೫೯॥

ಕೆಸರಿನಿಂದ ತುಂಬಿದ ಜಾಗದಲ್ಲಿ ತಿರುಗಿದರೂ ಬರಿಯ ಕಾಲು ಕೊಳೆಯಾಗದಿದ್ದರೆ ಈ ಜಗತ್ತು ಸತ್ಯವಾದೀತು. ॥೬೦॥

ದುಗ್ಧಂ ದುಗ್ಧಗತಂ ಕ್ಷೀರಂ ಪುನರಾರೋಹಣಂ ಪುನಃ ।
ಕೇವಲಂ ದರ್ಪಣಂ ನಾಸ್ತಿ ಪ್ರತಿಬಿಂಬಂ ತದಾ ಜಗತ್ ॥೬೧॥

ಯಥಾಕಾಶೂನ್ಯಗತಂ ವ್ಯೋಮ ಪ್ರತಿಬಿಂಬಂ ನ ವೈ ಜಗತ್ ॥೬೨॥

ಅಜಕುಕ್ಷೌ ಗಜೋ ನಾಸ್ತಿ ಆತ್ಮಕುಕ್ಷೌ ಜಗನ್ನಹಿ ।
ಯಥಾ ಕಾಂತ್ರೇ ಸಮುತ್ಪನ್ನಂ ತಥಾ ಬ್ರಹ್ಮಮಯಂ ಜಗತ್ ॥೬೩॥

ಕಾರ್ಪಾಸಕೇಽಗ್ನಿದಗ್ಧೇ ಭಸ್ಮ ನಾಸ್ತಿ ತಥಾ ಭವೇತ್ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೬೪॥

ಮನೋವೇಗೇನ ಚರತೋ ನದ್ಯಾ ಅಪಿ ನ ಚಿಂತಕಂ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೬೫॥

ಪರಂ ಬ್ರಹ್ಮ ಪರಂ ಜ್ಯೋತಿಃ ಪರಸ್ತಾತ್ತತ್ಪರಃ ಪರಃ ।
ಸರ್ವದಾ ಭೇದಕಲನಂ ದ್ವೈತಾದ್ವೈತಂ ನ ವಿದ್ಯತೇ ॥೬೬॥

---

ಮೊಸರು ಪುನಃ ಹಾಲಾಗಬಹುದಾದರೆ, ಕನ್ನಡಿಯಂತಹ ವಸ್ತುವಿಲ್ಲದೇ ವಸ್ತುಪ್ರತಿಬಿಂಬವು ಸಿದ್ಧಿಸಬಹುದಾದರೆ ಈ ಜಗತ್ತು ಸತ್ಯವಾದೀತು. ॥೬೧॥

ಆಡಿನ ಹೊಟ್ಟೆಯಲ್ಲಿ ಆನೆಯು ಹುಟ್ಟದಿರುವಂತೆ, ಆತ್ಮನಲ್ಲಿ ಕ್ಷೀಣವಾಗುವ ಜಗತ್ತು ಜನಿಸಲಾರದು. ಆದುದರಿಂದ ಜಗತ್ತು ಇಲ್ಲವೇ ಇಲ್ಲ. ॥೬೨-೬೩॥

ಬಟ್ಟೆಯು ಬೆಂಕಿಯಿಂದ ಸಂಪೂರ್ಣವಾಗಿ ಸುಟ್ಟರೆ ಬೂದಿಯು ಉಳಿಯಲಾರದು ಹೇಗೋ ಹಾಗೆ, ನಿಜವಾದ ತಿಳಿವಳಿಕೆಯು ಬಂದರೆ ಈ ಜಗತ್ತು ಇರಲಾರದು ಉಳಿಯಲಾರದು. ॥೬೪॥

ನದಿಯು ಮನೋವೇಗದಿಂದ ಹರಿಯಬಲ್ಲುದಾದರೇ ಈ ಜಗತ್ತು ಸತ್ಯವಾದೀತು. ನಿತ್ಯಾನಂದರೂಪವಾದ ಬ್ರಹ್ಮವಸ್ತುವೊಂದೇ ಸತ್ಯವು. ॥೬೫॥

ಬ್ರಹ್ಮವಸ್ತುವು ಜ್ಯೋತಿಸ್ಸ್ವರೂಪವಾದುದು, ಸರ್ವೋತ್ತಮವಾದುದು, ಭೇದ ಕಲ್ಪನೆಯೇ ಇಲ್ಲದುದು, ಭೇದವೂ ಇಲ್ಲ ಅಭೇದವೂ ಇಲ್ಲ. ॥೬೬॥

ಚಿತ್ತವೃತ್ತಿರ್ಜಗದ್ದುಃಖಂ ಅಸ್ತಿ ಚೇತ್ಕಿಲ ನಾಶನಂ ।
ಮನಃ ಸಂಕಲ್ಪಕಂ ಬಂಧಂ ಅಸ್ತಿ ಚೇತ್ತ್ಯಾಗಭಾವನಂ ॥೬೭॥

ಮಾಯಾಕಾರ್ಯಮಿದಂ ಬಂಧಮಸ್ತಿಚೇದ್ಬ್ರಹ್ಮಭಾವನಂ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೬೮॥

ಅಸ್ತ್ಯವಿದ್ಯಾಕಾರ್ಯದೇಹಾದ್ಯಸ್ತಿ ಚೇದ್ವಿದ್ಯಭಾವನಂ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೬೯॥

ಚಿತ್ತಮೇವ ಮಹಾರೋಗಃ ವ್ಯಾಪ್ತಶ್ಚಬ್ರಹ್ಮಭೇಷಜಂ ।
ಅಹಂ ಶತ್ರುರ್ಯದಿ ಭವೇದಹಂ ಬ್ರಹ್ಮೈವ ಭಾವನಂ ॥೭೦॥

ದೇಹೋಹಮಿತಿ ದುಃಖಂ ಚೇದ್ಬ್ರಹ್ಮಾಹಮಿತಿ ನಿಶ್ಚಿನು ।
ಹೃದಯಗ್ರಂಥಿರಸ್ತಿ ಚೇನ್ನಿತ್ಯಾನಂದಮಯೋ ಭವ ॥೭೧॥

---

ದುಃಖವು ನಿಜವಾಗಿದ್ದರೆ ತಾನೇ ಅದರ ನಾಶವು ಇರಬೇಕು. ಮನಸ್ಸಿನ ಸಂಕಲ್ಪರೂಪವಾದ ಬಂಧನವು ಇದ್ದರೆ ತಾನೇ ಆ ಬಂಧನವನ್ನು ಹರಿದೊಗೆಯುವುದು, ಅವೆರಡೂ ಇಲ್ಲ. ॥೬೭॥

ಮಾಯಾ-ಕಾರ್ಯವಾದ ಈ ಬಂಧನವು ನಿಜವಾಗಿದ್ದರೆ ತಾನೇ ಅದರ ನಿವೃತ್ತಿಗಾಗಿ ಬ್ರಹ್ಮಜ್ಞಾನವು ಸತ್ಯವಾಗಿ ಬೇಕು? ನಿತ್ಯಾನಂದಮಯವಸ್ತುವಿಗೆ ಬಂಧನವೆಲ್ಲ ಬಂದೀತು? ॥೬೮॥

ಅವಿದ್ಯೆಯ ಕಾರ್ಯವಾದ ದೇಹವೂ ಅದಕ್ಕೆ ಸಂಬಂಧಪಟ್ಟ ನೀತಿನಿಯಮಗಳೂ ವಸ್ತುತಃ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ॥೬೯॥

ಮನಸ್ಸೇ ಮಹಾರೋಗವು. ಅದಕ್ಕೆ ಬ್ರಹ್ಮವಸ್ತುವೆಂಬ ಔಷಧಿಯನ್ನು ಮುಟ್ಟಿಸಿದರೆ ಸಾಕು. ಆರೋಗವು ಪೂರ್ತಿಯಾಗಿ ವಾಸಿಯಾಗುವುದು. ॥೭೦॥

ದೇಹವು ನಾನು-ಎಂಬ ಭ್ರಾಂತಿಯನ್ನು ಹೋಗಲಾಡಿಸಲು "ನಾನು ಬ್ರಹ್ಮನು" ನಿಶ್ಚಯವನ್ನು ಹೊಂದು. ನಿತ್ಯಾನಂದಮಯನಾದರೆ ಹೃದಯಗ್ರಂಥಿಯು-ಅಜ್ಞಾನವೂ ಅದರ ಮೂಲಕವಾದ ದುಃಖವೂ ನಾಶವಾಗುವುವು. ॥೭೧॥

ಕೇವಲಂ ಸರ್ವದಾ ಬ್ರಹ್ಮ ಚೇತನೇ ಬ್ರಹ್ಮಚಕ್ರಕಂ ।
ಸಂಶಯಶ್ಚ ಪಿಶಾಚಶ್ಚೇದ್ಬ್ರಹ್ಮಮಾತ್ರೇಣ ನಾಶಯ ॥೭೨॥

ಅನಾತ್ಮತ್ವಪಿಶಾಚಶ್ಚೇದಾತ್ಮಮಂತ್ರೇಣ ಬಂಧಯ ।
ನಿತ್ಯಾನಂದಮಯಂ ಬ್ರಹ್ಮ ಕೇವಲಂ ಸರ್ವದಾ ಸ್ವಯಂ ॥೭೩॥

ಚತುಷ್ಷಷ್ಟಿಕದೃಷ್ಟಾಂತೈರೇವಂ ಬ್ರಹ್ಮೈವ ಸಾಧಿತಂ ।
ಯಃ ಶೃಣೋತಿ ನರೋ ನಿತ್ಯಂ ಸಮುಕ್ತೋ ನಾತ್ರ ಸಂಶಯಃ ॥೭೪॥

ಕೃತಾರ್ಥ ಏವ ಸತತಂ ನಾತ್ರ ಕಾರ್ಯಾ ವಿಚಾರಣಾ ।
ನಿತ್ಯಾನಂದಮಯಂ ಬ್ರಹ್ಮಕೇವಲಂ ಸರ್ವದಾ ಸ್ವಯಂ ॥೭೫॥

ಮನೋವಚೋವಿದೂರದಂ ಸುರೂಪಗಂಧವರ್ಜಿತಂ
ಹೃದರ್ಭಕೌಕಸಂ ಸತಂ ವಿಜಾನತಾಂ ಮುದೇ ಸದಾ ।
ಸುಹೃದ್ಯದುಜ್ವಲಪ್ರಭಾದಿಕಾಂತಿಕೇ ಸಮುದ್ಯತಿ
ಪ್ರಕಾಶದಂ ಮಹಸ್ತ್ವದೀಯಪಾದಪಂಕಜಂ ಸ್ಮರೇ ॥೭೬॥

---

ಯಾವಾಗಲೂ ನಿಶ್ಚಯಾತ್ಮಕತೆಯಿಂದ ಬ್ರಹ್ಮವಸ್ತುವನ್ನೇ ನಾನೆಂದು ಧ್ಯಾನಿಸುತ್ತಾ ಸಂಶಯವನ್ನು ಹೋಗಲಾಡಿಸಿಕೋ. ॥೭೨॥

ಅನಾತ್ಮತೆಯೆಂಬ ಪಿಶಾಚವು ನಿನ್ನಲ್ಲಿದ್ದರೆ ಮೊದಲು ಆತ್ಮ ಮಂತ್ರದಿಂದ ಆ ಘೋರ ಪಿಶಾಚಿಯನ್ನು ಬಂಧಿಸಿ ನಾಶಮಾಡು. ॥೭೩॥

ಈ ಅರುವತ್ತನಾಲ್ಕು ದೃಷ್ಟಾಂತಗಳಿಂದ ಹೀಗೆ ಬ್ರಹ್ಮವಸ್ತುವನ್ನು ಸಾಧಿಸಿರುವರು. ಈ ಸಾಧನೆಯನ್ನು ಯಾವನು ನಿತ್ಯವೂ ಕೇಳುವನೋ ಅವನು ಸಂಶಯವಿಲ್ಲದೇ ಮುಕ್ತನಾಗುವನು. ॥೭೪॥

ಹೀಗೆ ನಿತ್ಯಾನಂದರೂಪವಾದ ಬ್ರಹ್ಮವಸ್ತುವನ್ನು ಸಾಧಿಸಿ ತಿಳಿದುಕೊಳ್ಳುವವನು ನಿಜವಾಗಿಯೂ ಕೃತಾರ್ಥನಾಗುವನು. ॥೭೫॥

ಓ ಪರಮೇಶ್ವರನೇ, ಮನೋವಾಕ್ಕುಗಳಿಗೆ ಅಗೋಚರವಾದ ರೂಪಗಂಧಾದಿ ಗುಣಗಳಿಲ್ಲದೆ ಹೃದಯದಲ್ಲಿ ನೆಲಸಿರುವ ಜ್ಞಾನಜ್ಯೋತಿಪ್ರಕಾಶರೂಪವಾದ ನಿನ್ನ

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ಚತುಸ್ತ್ರಿಂಶೋಽಧ್ಯಾಯಃ

---

ಈ ಸ್ವರೂಪವನ್ನು ಸ್ಮರಿಸುವೆನು. ಮಿತಿಮೀರಿದ ತೇಜೋರಾಶಿಯನ್ನು ಬೀರುವ ಸಚ್ಚಿದಾನಂದಸ್ವರೂಪವಾದ ಪರಶಿವನ ಪಾದಪದ್ಮವನ್ನು ಸದಾಕಾಲದಲ್ಲಿಯೂ ಪ್ರಾರ್ಥಿಸುವೆನು. ॥೭೬॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಆರನೆಯ ಅಂಶದಲ್ಲಿ ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಪಂಚತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ನಿದಾಘ ಶೃಣು ಗುಹ್ಯಂ ಮೇ ಸದ್ಯೋ ಮುಕ್ತಿಪ್ರದಂ ನೃಣಾಂ ।
ಆತ್ಮೈವ ನಾನ್ಯದೇವೇದಂ ಪರಮಾತ್ಮಾಹಮಕ್ಷತಃ ॥೧॥

ಅಹಮೇವ ಪರಂ ಬ್ರಹ್ಮ ಸಚ್ಚಿದಾನಂದವಿಗ್ರಹಃ ।
ಅಹಮಸ್ಮಿ ಮಹಾನಸ್ಮಿ ಶಿವೋಸ್ಮಿ ಪರಮೋಸ್ಮ್ಯಹಂ ॥೨॥

ಅದೃಶ್ಯಂ ಪರಮಂ ಬ್ರಹ್ಮ ನಾನ್ಯದಸ್ತಿ ಚ ಭಾವತಃ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೩॥

---

## ಮೂವತ್ತೈದನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ಕೇಳು. ಸದ್ಯಃ ಮುಕ್ತಿಪ್ರದವಾದಂತಹ ವಿಷಯವನ್ನು ಹೇಳುವೆನು. ಈ ಜಗತ್ತೆಲ್ಲವೂ ಪರಮಾತ್ಮನೇ ಹೊರತು ಬೇರೆಯಲ್ಲ. ಆ ಪರಮಾತ್ಮನೇ ನಾನು. ॥೧॥

ನಾನು ಸಚ್ಚಿದಾನಂದರೂಪನಾದ ಪರಬ್ರಹ್ಮನು, ಮಹಾತ್ಮನು ನಾನು, ಶಿವನು ನಾನು, ಪರಮಾತ್ಮನು ನಾನು. ॥೨॥

ಪರಬ್ರಹ್ಮವಸ್ತುವು ಇಂದ್ರಿಯಗಳಿಗೆ ಅಗೋಚರವಾದುದು, ಅದರಾ ಪರಬ್ರಹ್ಮನಿಗಿಂತ ಬೇರೆ ಏನೂ ಇಲ್ಲ. ನಾನೇ ಆ ಬ್ರಹ್ಮವಸ್ತುವು. ॥೩॥

ಶಾಂತಂ ಬ್ರಹ್ಮ ಪರಂ ಚಾಸ್ಮಿ ಸರ್ವದಾ ನಿತ್ಯನಿರ್ಮಲಃ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೪॥

ಸರ್ವಸಂಕಲ್ಪಮುಕ್ತೋಽಸ್ಮಿ ಸರ್ವಸಂತೋಷವರ್ಜಿತಃ ।
ಕಾಲಕರ್ಮಜಗದ್ದ್ವೈತದ್ರಷ್ಟೃದರ್ಶನವಿಗ್ರಹಃ ॥೫॥

ಆನಂದೋಽಸ್ಮಿ ಸದಾನಂದಂ ಕೇವಲೋ ಜಗತಾಂ ಪ್ರಿಯಂ ।
ಸಮರೂಪೋಽಸ್ಮಿ ನಿತ್ಯೋಽಸ್ಮಿ ಭೂತಭವ್ಯಮಜೋ ಜಯಃ ॥೬॥

ಚಿನ್ಮಾತ್ರೋಽಸ್ಮಿ ಸದಾಮುಕ್ತಃ ಜೀವೋ ಬಂಧೋ ನ ವಿದ್ಯತೇ ।
ಶ್ರವಣಂ ದ್ವಿವಿಧಂ ಲಿಂಗಂ ನೈವಾಸ್ತಿ ಜಗದೀದೃಶಂ ॥೭॥

ಚಿತ್ತಸಂಸಾರಹೀನೋಽಸ್ಮಿ ಚಿನ್ಮಾತ್ರತ್ವಂ ಜಗತ್ಸದಾ ।
ಚಿತ್ತಮೇವ ಹಿತಂ ದೇಹ ಅವಿಚಾರಃ ಪರೋರಿಪುಃ ॥೮॥

---

ಯಾವಾಗಲೂ ನಿತ್ಯವಾಗಿರುವ, ನಿರ್ಮಲವಾಗಿರುವ, ಶಾಂತವಾಗಿರುವ ಸ್ವರೂಪವು ಪರಬ್ರಹ್ಮನದು. ಅಂತಹ ಪರಬ್ರಹ್ಮಸ್ವರೂಪವೇ ಪ್ರಪಂಚ. ಅಂತಹ ಪರಬ್ರಹ್ಮನು ನಾನು. ॥೪॥

ನನಗೆ ಯಾವ ಸಂಕಲ್ಪವೂ ಇಲ್ಲ. ಯಾವ ಆಸೆಯೂ ಇಲ್ಲ. ಕಾಲವು ನಾನೇ, ಕಾರ್ಯವು ನಾನು, ಜಗತ್ತು ನಾನು, ಭೇದವು ನಾನು, ನೋಡುವವನು ನಾನು, ನೋಟವು ನಾನು, ಒಟ್ಟಿನಲ್ಲಿ ಎಲ್ಲವೂ ನಾನು. ॥೫॥

ಯಾವಾಗಲೂ ಆನಂದಸ್ವರೂಪವು ನಾನು, ಅದ್ವಿತೀಯನು, ಜಗತ್ತಿಗೆ ಪ್ರಿಯನು ನಾನು, ಒಂದೇ ಬಗೆಯ ಸ್ವರೂಪವುಳ್ಳವನು, ನಿತ್ಯನು, ಭೂತಭವಿಷ್ಯದ್ವರ್ತಮಾನಗಳೂ ನಾನು, ಜನ್ಮವು ನನಗಿಲ್ಲ. ಜಯಶಾಲಿಯು ನಾನು. ॥೬॥

ಮುಕ್ತನಾದ ಕೇವಲ ಚೈತನ್ಯಸ್ವರೂಪನು ನಾನು, ಜೀವನು ನಾನಲ್ಲ. ಬಂಧವು ನನಗಿಲ್ಲ. ಎರಡು ಬಗೆಯು ಶ್ರವಣವು ಆದರ ಸಾಧನಗಳೂ ನನಗೆ ಬೇಕಾಗಿಲ್ಲ. ಅವು ಇಲ್ಲವೂ ಇಲ್ಲ. ॥೭॥

ಚಿತ್ತದ ಸಂಸಾರವು ನನಗಿಲ್ಲ. ಕೇವಲ ಚೈತನ್ಯರೂಪನಾಗಿರುವೆ, ದೇಹದಷ್ಟೆ ಚಿತ್ತವೇ ಮಾನವನಿಗೆ ಸರಿಯಾದ ದಾರಿಯಲ್ಲಿ ನಡೆದರೆ ಹಿತಕಾರಿಯಾಗುವುದು. ಅವಿವೇಕವು ಪರಮವೈರಿಯು. ॥೮॥

ಅವಿಚಾರೋ ಜಗದ್ದುಃಖಮವಿಚಾರೋ ಮಹದ್ಭಯಂ ।
ಸದ್ಯೋಽಸ್ಮಿ ಸರ್ವದಾ ತೃಪ್ತಃ ಪರಿಪೂರ್ಣಪರೋಮಹಾನ್ ॥೯॥

ನಿತ್ಯಶುದ್ಧೋಽಸ್ಮಿ ಬುದ್ಧೋಽಸ್ಮಿ ಚಿದಾಕಾರೋಽಸ್ಮಿ ಚೇತನಃ ।
ಅತ್ಮೈವ ನಾನ್ಯದೇವೇದಂ ಪರಮಾತ್ಮಾಹಮಕ್ಷತಃ ॥೧೦॥

ಸರ್ವದೋಷವಿಹೀನೋಽಸ್ಮಿ ಸರ್ವತ್ರ ವಿತತೋಽಸ್ಮ್ಯಹಂ ।
ವಾಚಾತೀತಸ್ವರೂಪೋಽಸ್ಮಿ ಪರಮಾತ್ಮಾಹಮಕ್ಷತಃ ॥೧೧॥

ಚಿತ್ತಾತೀತಂ ಪರಂದ್ವಂದ್ವಂ ಸಂತೋಷಸಮಭಾವನಂ ।
ಅಂತರ್ಬಹಿರನಾದ್ಯಂತಂ ಸರ್ವಭೇದವಿನಿರ್ಣಯಃ ॥೧೨॥

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ।
ಬ್ರಹ್ಮೇಂದ್ರೋ ವಿಷ್ಣುರ್ವರುಣೋ ಭಾವಾಭಾವವಿನಿಶ್ಚಯಃ ॥೧೩॥

ಜೀವಸತ್ತಾ ಜಗತ್ಸತ್ತಾ ಮಾಯಾಸತ್ತಾ ನ ಕಿಂಚನ ।
ಗುರುಶಿಷ್ಯಾದಿಭೇದಂ ಚ ಕಾರ್ಯಾಕಾರ್ಯವಿನಿಶ್ಚಯಃ ॥೧೪॥

---

ವಿವೇಕವಿಲ್ಲದಿರುವುದೇ ಮಹಾದುಃಖವು ಮತ್ತು ಮಹಾಭಯವು, ಅಂತಹ ಅವಿವೇಕವು ನನಗಿಲ್ಲ. ಸದಾ ತೃಪ್ತನಾಗಿರುವೆನು, ಪರಿಪೂರ್ಣನಾಗಿರುವೆನು. ಪರಮಾತ್ಮನು ನಾನು. ॥೯॥

ನಿತ್ಯಶುದ್ಧನು ನಾನು, ಜ್ಞಾನಸ್ವರೂಪನು ನಾನು, ಚೈತನ್ಯವು ನಾನು, ಈ ಜಗತ್ತೆಲ್ಲವೂ ನಾನೇ ಹೊರತು ಬೇರೆಯಲ್ಲ. ಪರಮಾತ್ಮನು ನಾನು. ॥೧೦॥

ಯಾವ ದೋಷಗಳೂ ನನ್ನಲ್ಲಿಲ್ಲ. ಎಲ್ಲೆಡೆಯಲ್ಲೂ ನಾನು ವ್ಯಾಪಿಸಿರುವೆನು. ವಾಕ್ಕಿಗೆ ಅಗೋಚರನು ನಾನು, ಅವಿನಾಶಿಯಾದ ಪರಮಾತ್ಮನು ನಾನು. ॥೧೧॥

ನನ್ನ ಸ್ವರೂಪವು ಮನಸ್ಸಿಗೂ ಅಗೋಚರವಾದುದು, ಆನಂದಮಯವಾದುದು, ಅಂತರ್ಯಾಮಿಯಾದುದು, ಯಾವ ಭೇದಗಳೂ ಇಲ್ಲ. ॥೧೨॥

ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ, ಪರಿಗ್ರಹ, ಬ್ರಹ್ಮ, ಇಂದ್ರ, ವಿಷ್ಣು, ವರುಣ ಮೊದಲಾದ ದೇವತೆಗಳು, ಭಾವ ಅಭಾವಗಳು, ಜೀವ, ಜಗತ್ತು

ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ।
ತ್ವಂ ಬ್ರಹ್ಮಾಸೀತಿ ವಕ್ತಾ ಚ ಅಹಂ ಬ್ರಹ್ಮಾಸ್ಮಿ ಸರ್ವಗಃ ॥೧೫॥

ಸರ್ವವೇದಾಂತವಿಜ್ಞಾನಂ ಸರ್ವಾಮ್ನಾಯವಿಚಾರಣಂ ।
ಇದಂ ಪದಾರ್ಥಸದ್ಭಾವಮಹಂರೂಪೇಣ ಸಂಭವಂ ॥೧೬॥

ವೇದವೇದಾಂತಸಿದ್ಧಾಂತಂ ಜಗದ್ಭೇದಂ ನ ವಿದ್ಯತೇ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮಾಸ್ಮಿ ಸರ್ವದಾ ॥೧೭॥

ಸರ್ವಂ ಬ್ರಹ್ಮ ನ ಸಂದೇಹಃ ಸರ್ವಂ ಮಿಥ್ಯೈವ ನಿಶ್ಚಯಃ ।
ಕೇವಲಂ ಬ್ರಹ್ಮ ಶಾಂತಾತ್ಮಾ ಅಹಮೇವ ನಿರಂತರಂ ॥೧೮॥

ಶುಭಾಶುಭವಿಭೇದಂ ಚ ದೋಷಾದೋಷಂ ಚ ನೋ ನಹಿ ।
ಚಿತ್ತಸತ್ತಾ ಜಗತ್ಸತ್ತಾ ಬುದ್ಧಿವೃತ್ತಿವಿಜೃಂಭಣಂ ॥೧೯॥

ಬ್ರಹ್ಮೈವ ಸರ್ವದಾ ನಾನ್ಯತ್ಸತ್ಯಂ ಸತ್ಯಂ ನಿಜಂ ಪದಂ ।
ಆತ್ಮಾಕಾರಮಿದಂ ದ್ವೈತಮಾತ್ಮೈವ ನ ಪರಃ ಪುಮಾನ್ ॥೨೦॥

---

ಮಾಯೆ, ಗುರು, ಶಿಷ್ಯ, ಕಾರ್ಯ, ಅಕಾರ್ಯ ಇವಾವೂ ಇಲ್ಲ. ಬ್ರಹ್ಮಸ್ವರೂಪನಾದ ನಾನೊರ್ವನೇ ಇರುವೆನು. ॥೧೩-೧೪॥

ನೀನು ಬ್ರಹ್ಮನೆಂದು ಹೇಳುವುದು, ನಾನು ಬ್ರಹ್ಮನೆಂದು ಹೇಳುವುದು, ವೇದಾಂತಜ್ಞಾನ, ಶಾಸ್ತ್ರವಿಮರ್ಶೆಗಳು, ಇದಂ ಪದಾರ್ಥದ ಅಸ್ತಿತ್ವ, ಅಹಂ ಪದಾರ್ಥದ ಅಸ್ತಿತ್ವ, ವೇದವೇದಾಂತಗಳ ಸಿದ್ಧಾಂತಗಳು, ಜಗತ್ತಿನ ಭೇದ, ಇವಾವುವೂ ಇಲ್ಲವೇ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು, ಆ ವಸ್ತುವೇ ನಾನು. ॥೧೫-೧೬-೧೭॥

ಎಲ್ಲವೂ ಬ್ರಹ್ಮವಸ್ತುವೇ ಎನ್ನುವುದರಲ್ಲಿ ಈಗ ಸಂದೇಹವಿಲ್ಲ. ಎಲ್ಲವೂ ಸುಳ್ಳೇ, ನಾನು ಶಾಂತವಾದ ಬ್ರಹ್ಮಸ್ವರೂಪನು, ಬೇರೆಯಲ್ಲ. ॥೧೮॥

ಶುಭಾಶುಭಭೇದಗಳು, ದೋಷಾದೋಷಗಳು, ಮನಸ್ಸು, ಬುದ್ಧಿ ಇವುಗಳ ಸತ್ತೆ, ಜಗತ್ತು ಇವಾವುದೂ ಇಲ್ಲ. ಇವೆಲ್ಲವೂ ಸುಳ್ಳೇ. ॥೧೯॥

ಯಾವಾಗಲೂ ಬ್ರಹ್ಮವಸ್ತುವಿನ ಹೊರತು ಬೇರೆಯೇನೂ ಇಲ್ಲ. ಈ

ಸಚ್ಚಿದಾನಂದಮಾತ್ರೋಽಹಂ ಸರ್ವಂ ಕೇವಲಮವ್ಯಯಂ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾ ಶಿವಃ ॥೨೧॥

ಸರ್ವಂ ಬ್ರಹ್ಮಮಯಂ ವಿದ್ಧಿ ಅಹಂ ಬ್ರಹ್ಮೈವ ಕೇವಲಂ ।
ಮನೋಜಗದಹಂಭೇದಂ ಚಿತ್ರವೃತ್ತಿರ್ಜಗದ್ಭಯಂ ॥೨೨॥

ಸರ್ವಾನಂದಮಹಾನಂದಂ ಆತ್ಮಾನಂದಮನಂತಕಂ ।
ಅತ್ಯಂತಸ್ವಲ್ಪಮಲ್ಪಂ ಚ ಪ್ರಪಂಚಂ ನಾಸ್ತಿ ಕಿಂ ಚ ನ ॥೨೩॥

ಪ್ರಪಂಚಮಿತಿ ಶಬ್ದೋ ವಾ ಸ್ಮರಣಂ ವಾ ನ ವಿದ್ಯತೇ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂಬ್ರಹ್ಮಾಸ್ಮಿ ಕೇವಲಂ ॥೨೪॥

ಅಂತರಸ್ಥಪ್ರಪಂಚಂ ವಾ ಕ್ವಚಿನ್ನಾಸ್ತಿ ಕ್ವಚಿದ್ಬಹಿಃ ।
ಯತ್ಕಿಂಚಿದೇವಂ ತೂಷ್ಣೀಂ ವಾ ಯಚ್ಚ ಕಿಂಚಿತ್ಕದಾ ಕ್ವವಾ ॥೨೫॥

ಯೇನ ಕೇನ ಯದಾ ಕಿಂಚಿದ್ಯಸ್ಯ ಕಸ್ಯ ನಕಿಂಚನ ।
ಶುದ್ಧಂ ಮಲಿನರೂಪಂ ವಾ ಬ್ರಹ್ಮವಾಕ್ಯಮಬೋಧಕಂ ॥೨೬॥

---

ಪ್ರಪಂಚವೆಲ್ಲವೂ ಆತ್ಮನೇ ಹೊರತು ಬೇರೆಯಲ್ಲ. ಆತನ ಹೊರತು ಬೇರೆ ಏನೂ ಇಲ್ಲ. ॥೨೦॥

ನಾನು ಸಚ್ಚಿದಾನಂದ ಬ್ರಹ್ಮಸ್ವರೂಪನು, ಬ್ರಹ್ಮ, ವಿಷ್ಣು, ರುದ್ರ, ಸದಾಶಿವನಾದ ಈಶ್ವರ ಇವರೆಲ್ಲರೂ ಬ್ರಹ್ಮಸ್ವರೂಪರೇ ಹೊರತು ಬೇರೆಯಲ್ಲ. ॥೨೧॥

ಜಗತ್ತಿನ ಎಲ್ಲ ಆನಂದಗಳೂ ಅನಂತವಾದ ಬ್ರಹ್ಮಾನಂದದ ಅಂಶಗಳೇ. ಅತಿ ಸ್ವಲ್ಪವೂ ಕೂಡ ಪ್ರಪಂಚವೇ. ಈ ಪ್ರಪಂಚವೂ ಇಲ್ಲವೇ ಇಲ್ಲ. ಏನೇನೂ ಇಲ್ಲ. ॥೨೨-೨೩॥

ಪ್ರಪಂಚವೆನ್ನುವ ಶಬ್ದವಾಗಲೀ, ಅದರ ಸ್ಮರಣೆಯಾಗಲೀ ಯಾವುದೂ ಇಲ್ಲವೇ ಇಲ್ಲ. ಬ್ರಹ್ಮಸ್ವರೂಪನಾದ ನಾನೊಬ್ಬನೇ ಇರುವೆನು. ॥೨೪॥

ಒಳಗಿನ ಪ್ರಪಂಚವೆನ್ನುವುದಾಗಲೀ ಹೊರಗಿನ ಪ್ರಪಂಚವೆನ್ನುವುದಾಗಲೀ ಏನೇನೂ ಇಲ್ಲ. ಸ್ವಲ್ಪವೂ ಎಲ್ಲಿಯೂ ಯಾವುದೂ ಇಲ್ಲ. ॥೨೫॥

ಜಗತ್ತು ಯಾರಿಂದಲಾಗಲೀ ಮಾಡಲ್ಪಟ್ಟಿದೆಂದೂ, ಇದನ್ನಾರೋ ಆಳುವರೆಂದೂ, ಇದು ಶುದ್ಧ, ಇದು ಅಶುದ್ಧವೆನ್ನುವುದೂ ಇವೆಲ್ಲವೂ ಸುಳ್ಳು, ಜಗತ್ತೇ ಇಲ್ಲ. ॥೨೬॥

ಈದೃಶಂ ತಾದೃಶಂ ಚೇತಿ ನಕಿಂಚಿದ್ವಕ್ತುಮರ್ಹತಿ ।
ಬ್ರಹ್ಮೈವ ಸರ್ವಂ ಸತತಂ ಬ್ರಹ್ಮೈವ ಸಕಲಂ ಮನಃ ॥೨೭॥

ಸರ್ವಂ ಬ್ರಹ್ಮಮಯಂ ಸತ್ಯಂ ನೇಹನಾನಾಸ್ತಿ ಕಿಂಚನ ।
ಆನಂದಂ ಪರಮಾನಂದಂ ನಿತ್ಯಾನಂದಂ ಸದಾಽದ್ವಯಂ ॥೨೮॥

ಚಿನ್ಮಾತ್ರಮೇವ ಸತತಂ ನಾಸ್ತಿ ನಾಸ್ತಿ ಪರೋಽಸ್ಮ್ಯಹಂ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೨೯॥

ಪ್ರಪಂಚಂ ಸರ್ವದಾ ನಾಸ್ತಿ ಪ್ರಪಂಚಂ ಚಿತ್ರಮೇವ ಚ ।
ಚಿತ್ತಮೇವ ಹಿ ಸಂಸಾರಂ ನಾನ್ಯತ್ಸಂಸಾರಮೇವ ಹಿ ॥೩೦॥

ಮನ ಏವ ಹಿ ಸಂಸಾರೋ ದೇಹೋಽಹಮಿತಿ ರೂಪಕಂ ॥೩೧॥

ಸಂಕಲ್ಪಮೇವ ಸಂಸಾರಂ ತನ್ನಾಶೇಽಸೌ ವಿನಶ್ಯತಿ ।
ಸಂಕಲ್ಪಮೇವ ಜನನಂ ತನ್ನಾಶೇಽಸೌ ವಿನಶ್ಯತಿ ॥೩೨॥

---

ಜಗತ್ತು ಇಂತಹುದು, ಅಂತಹುದು ಎನ್ನುವುದಿಲ್ಲವೇ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ಆ ವಸ್ತುವಿನ ಹೊರತು ಬೇರೆಯೇನೂ ಇಲ್ಲ. ॥೨೭॥

ಎಲ್ಲವೂ ಬ್ರಹ್ಮವಸ್ತುವೇ ಹೊರತು ಬೇರೆ ಏನೂ ಇಲ್ಲ. ಬ್ರಹ್ಮವಸ್ತುವು ಆನಂದರೂಪವಾದುದು, ನಿತ್ಯವಾದುದು, ಅದ್ವಿತೀಯವಾದುದು. ॥೨೮॥

ಚೈತನ್ಯರೂಪವಾದ ಬ್ರಹ್ಮವಸ್ತುವಿನ ವಿನಾ ಬೇರೆ ಏನೂ ಇಲ್ಲ. ನಾನೇ ಆ ಬ್ರಹ್ಮವಸ್ತುವು, ನನ್ನ ಹೊರತು ಬೇರೆ ಏನೂ ಇಲ್ಲ. ॥೨೯॥

ಪ್ರಪಂಚವೆನ್ನುವುದಿಲ್ಲವೇ ಇಲ್ಲ. ಮನಸ್ಸೇ ಪ್ರಪಂಚವು, ಮನಸ್ಸೇ ಸಂಸಾರವು, ಮನಸ್ಸಿನ ಹೊರತು ಬೇರೆ ಸಂಸಾರವಿಲ್ಲ ಬೇರೆ ಪ್ರಪಂಚವಿಲ್ಲ. ॥೩೦॥

ಮನಸ್ಸೇ ಸಂಸಾರವು, ದೇಹಾತ್ಮಭ್ರಾಂತಿಯೇ ಸಂಸಾರವು, ಆ ಭ್ರಾಂತಿಯು ನಾಶವಾದರೆ ಸಂಸಾರವೇ ಇಲ್ಲವಾಗುವುದು. ॥೩೧॥

ಸಂಕಲ್ಪವೇ ಜನ್ಮವು, ಸಂಕಲ್ಪವು ನಾಶವಾದರೆ ಜನ್ಮವೂ ಇಲ್ಲ. ಬ್ರಹ್ಮವಸ್ತುವಿನ ಹೊರತು ಏನೂ ಇಲ್ಲ. ಆ ವಸ್ತುವೇ ನಾನು. ॥೩೨॥

ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ।
ಸಂಕಲ್ಪಮೇವ ದಾರಿದ್ರ್ಯಂ ತನ್ನಾಶೇಽಸೌ ವಿನಶ್ಯತಿ ॥೩೩॥

ಸಂಕಲ್ಪಮೇವ ಶ್ರವಣಂ ತನ್ನಾಶೇಽಸೌ ವಿನಶ್ಯತಿ ।
ಸಂಕಲ್ಪಮೇವ ಮನನಂ ತನ್ನಾಶೇಽಸೌ ವಿನಶ್ಯತಿ ॥೩೪॥

ಆತ್ಮೈವ ನಾನ್ಯದೇವೇದಂ ಪರಮಾತ್ಮಾಹಮಕ್ಷತಃ ।
ನಿತ್ಯಮಾತ್ಮಮಯಂ ಬೋಧಮಹಮೇವ ಸದಾ ಮಹಾನ್ ॥೩೫॥

ಆತ್ಮೈವ ನಾನ್ಯದೇವೇದಂ ಪರಮಾತ್ಮಾಹಮಕ್ಷತಃ ।
ಇತ್ಯೇವಂ ಭಾವಯನ್ನಿತ್ಯಂ ಕ್ಷಿಪ್ರಂ ಮುಕ್ತೋ ಭವಿಷ್ಯತಿ ॥೩೬॥

ತ್ವಮೇವ ಬ್ರಹ್ಮರೂಪಾತ್ಮಾ ತ್ವಮೇವ ಬ್ರಹ್ಮವಿಗ್ರಹಃ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೩೭॥

ಏವಂ ಚ ಪರಮಾನಂದಂ ಧ್ಯಾತ್ವಾ ಧ್ಯಾತ್ವಾ ಸುಖೀ ಭವ ।
ಸುಖಮಾತ್ರಂ ಜಗತ್ಸರ್ವಂ ಪ್ರಿಯಮಾತ್ರಂ ಪ್ರಪಂಚಕಂ ॥೩೮॥

---

ಸಂಕಲ್ಪವೇ ಬಡತನವು, ಸಂಕಲ್ಪವು ನಾಶವಾದರೆ ಬಡತನವು ಇಲ್ಲದಾಗುವುದು. ಶ್ರವಣಮನನಗಳು ಕೇವಲ ಸಂಕಲ್ಪ (ಕಲ್ಪನೆ) ಗಳು, ಸಂಕಲ್ಪವು ನಾಶವಾದರೆ ಅವೂ ಇಲ್ಲವಾಗುವುವು. ॥೩೩-೩೪॥

ಪರಮಾತ್ಮನ ಹೊರತು ಬೇರೆ ಏನೂ ಇಲ್ಲ. ಆ ಪರಮಾತ್ಮನೇ ನಾನು. ನಾನು ನಾಶವಿಲ್ಲದವನು, ನಿತ್ಯನು, ಜ್ಞಾನಸ್ವರೂಪನು ಮಹಾತ್ಮನು. ॥೩೫॥

ಆತ್ಮನ ಹೊರತು ಈ ಜಗತ್ತಾವುದೂ ಇಲ್ಲ. ಪರಮಾತ್ಮನೇ ನಾನು ಎಂದು ನಿತ್ಯವೂ ನೀನು ಭಾವಿಸಿದರೆ ಕ್ಷಿಪ್ರದಲ್ಲಿಯೇ ಮುಕ್ತನಾಗುವೆ. ॥೩೬॥

ನೀನೇ ಬ್ರಹ್ಮಸ್ವರೂಪನು, ನಿನ್ನ ಹೊರತು ಬೇರೆ ಯಾವ ಪ್ರಪಂಚವೂ ಇಲ್ಲ. ನಾನೂ ಬ್ರಹ್ಮಸ್ವರೂಪನು. ॥೩೭॥

ಹೀಗೆ ಪರಮಾನಂದವನ್ನು ಧ್ಯಾನಿಸಿ ಧ್ಯಾನಿಸಿ ಸುಖಿಯಾಗು, ಜಗತ್ತೆಲ್ಲವೂ ಸುಖರೂಪವಾದುದು, ಸಂತೋಷರೂಪವಾದುದು, ಆನಂದರೂಪವಾದುದು, ಅಂದರೆ ಸುಖಸ್ವರೂಪವಾದ ಬ್ರಹ್ಮವಸ್ತುವಿನ ಹೊರತು ಬೇರೆಯಿಲ್ಲ. ॥೩೮॥

ಜಡಮಾತ್ರಮಯಂ ಲೋಕಂ ಬ್ರಹ್ಮಮಾತ್ರಮಯಂ ಸದಾ ।
ಬ್ರಹ್ಮೈವ ಮಾತ್ರಮೇವೇದಂ ಪರಮಾತ್ಮಾಹಮವ್ಯಯಃ ॥೩೯॥

ಏಕಸ್ಸದಾ ಏಷ ಏಕಃ ಏಕ ಏವ ನಿರಂತರಂ ॥೪೦॥

ಏಕ ಏವ ಪರಂ ಬ್ರಹ್ಮ ಏಕ ಏವ ಚಿದವ್ಯಯಃ ।
ಏಕ ಏವ ಗುಣಾತೀತ ಏಕ ಏವ ಸುಖಾವಹಂ ॥೪೧॥

ಏಕ ಏವ ಮಹಾನಾತ್ಮಾ ಏಕ ಏವ ನಿರಂತರಂ ।
ಏಕ ಏವ ಚಿದಾಕಾರಂ ಏಕ ಏವಾತ್ಮನಿರ್ಣಯಃ ॥೪೨॥

ಬ್ರಹ್ಮೈವ ನಾನ್ಯದೇವೇದಂ ಪರಮಾತ್ಮಾಹಮಕ್ಷತಃ ।
ಪರಮಾತ್ಮಾಹಮನ್ಯನ್ನ ಪರಮಾನಂದಮಂದಿರಂ ॥೪೩॥

ಇತ್ಯೇವಂ ಭಾವಯನ್ನಿತ್ಯಂ ಸದಾ ಚಿನ್ಮಯಮೇವ ಹಿ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೪೪॥

---

ಈ ಲೋಕವು ಜಡವಾದುದಾದರೂ ಬ್ರಹ್ಮನ ಹೊರತಾಗಿ ಬೇರೆಯಿಲ್ಲ. ಪರಮಾತ್ಮನ ಹೊರತು ಬೇರೆಯಿಲ್ಲ. ಆ ಪರಮಾತ್ಮನೇ ನಾನು. ॥೩೯॥

ಈ ಪರಮಾತ್ಮನು ಓರ್ವನೇ ಇರುವವನು, ಅವನು ಸರ್ವಾಂತರ್ಯಾಮಿಯು, ಪರಬ್ರಹ್ಮನು, ಜ್ಞಾನಮೂರ್ತಿಯು, ನಾಶರಹಿತನು, ನಿರ್ಗುಣನು, ಸುಖ ಸ್ವರೂಪನು. ॥೪೦-೪೧॥

ಪರಮಾತ್ಮನೋರ್ವನೇ ಮಹಾತ್ಮನು, ಅವನೋರ್ವನೇ ಜ್ಞಾನ ಮೂರ್ತಿಯು, ಸರ್ವಾಂತರ್ಯಾಮಿಯು. ಅವನೋರ್ವನೇ ಬೇರೆ ಯಾರೂ ಇಲ್ಲ. ॥೪೨॥

ಬ್ರಹ್ಮನ ಹೊರತು ಈ ಜಗತ್ತಾವುದೂ ಇಲ್ಲ. ನಾನು ಅವಿನಾಶಿಯಾದ ಪರಮಾತ್ಮನು, ಪರಮಾತ್ಮನ ಹೊರತು ಬೇರಾವ ವಸ್ತುವೂ ಇಲ್ಲ. ॥೪೩॥

ಆದುದರಿಂದ ಚೈತನ್ಯಸ್ವರೂಪವಾದ ಪರಮಾತ್ಮನ ಹೊರತು ಬೇರೆ ಏನೂ ಇಲ್ಲ. ನಾನೇ ಪರಮಾತ್ಮನು ಎಂದು ಸದಾ ಭಾವಿಸುತ್ತಿರು. ॥೪೪॥

॥ ಸೂತ ಉವಾಚ ॥

ವಿರಿಂಚಿವಂಚನಾತತಪ್ರಪಂಚಪಂಚಬಾಣಭಿತ್
ಸುಕಾಂಚನಾದ್ರಿಧಾರಿಣಂ ಕುಲುಂಚನಾಪತಿಂ ಭಜೇ ।
ಅಕಿಂಚನೋಽಪಿ ಸಿಂಚಕೇ ಜಲೇನ ಲಿಂಗಮಸ್ತಕೇ
ವಿಮುಂಚತಿ ಕ್ಷಣಾದಘಂ ನ ಕಿಂಚಿದತ್ರ ಶಿಷ್ಯತೇ ॥೪೫॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಪಂಚತ್ರಿಂಶೋಽಧ್ಯಾಯಃ

---

ಮನ್ಮಥನನ್ನು ದಹಿಸಿದ, ಸರ್ವಜ್ಞನಾದ, ಮೇರುಗಿರಿಯನ್ನು ಧನುಸ್ಸಾಗಿ ಹಿಡಿದ ಪಾರ್ವತೀಪತಿಯನ್ನು, ಮಹಾಪಾಪಿಗಳಿಗೂ ಪತಿಯೆನಿಸಿದ ಮಹೇಶ್ವರನನ್ನು ಅಭಿಷೇಕಾದಿಗಳಿಂದ ಅರ್ಚಿಸಿದರೆ ಕೂಡಲೇ ಸಕಲಪಾಪಗಳಿಂದಲೂ ಮುಕ್ತನಾಗುವನು. ದರಿದ್ರನಾದವನು ನಡೆಸಿದ ಕೇವಲ ಜಲಾಭಿಷೇಕದಿಂದಲೂ ಪರಶಿವನು ತೃಪ್ತನಾಗುವನು. ಆದರಿಂದಲೇ ಭಕ್ತನು ಪಾಪಮುಕ್ತನಾಗಿ ಮುಕ್ತಿಯನ್ನೈದುವನು. ॥೪೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಆರನೆಯ ಅಂಶದಲ್ಲಿ ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಷಟ್ತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ಶೃಣು ವಕ್ಷ್ಯಾಮಿ ವಿಪ್ರೇಂದ್ರ ಸರ್ವಂ ಬ್ರಹ್ಮೈವ ನಿರ್ಣಯಂ ।
ಯಸ್ಯ ಶ್ರವಣಮಾತ್ರೇಣ ಸದ್ಯೋ ಮುಕ್ತಿಮವಾಪ್ನುಯಾತ್ ॥೧॥

ಇದಮೇವ ಸದಾ ನಾಸ್ತಿ ಹ್ಯಹಮೇವ ಹಿ ಕೇವಲಂ ।
ಆತ್ಮೈವ ಸರ್ವದಾ ಚಾಸ್ತಿ ಆತ್ಮೈವ ಸುಖಲಕ್ಷಣಂ ॥೨॥

---

## ಮೂವತ್ತಾರನೆಯ ಅಧ್ಯಾಯವು

ಋಭುವು ಬ್ರಹ್ಮಸ್ವರೂಪವನ್ನು ಬೋಧಿಸುತ್ತಾ ಹೀಗೆಂದನು. ಎಲೈ ನಿದಾಘಮುನಿಯೆ, ಎಲ್ಲವೂ ಬ್ರಹ್ಮವಸ್ತುವೇ ಎಂಬ ನಿರ್ಣಯವನ್ನು ಮತ್ತೆ ಹೇಳುವೆನು, ಕೇಳು. ಇದನ್ನು ಕೇಳಿದ ಮಾತ್ರದಿಂದಲೇ ಮಾನವನು ಮುಕ್ತಿಯನ್ನು ಹೊಂದುವನು. ॥೧॥

ಇದು-ಎನ್ನುವುದಾವುದೂ ಇಲ್ಲ. ನಾನೊರ್ವನೇ ಇರುವವನು. ನಾನೇ ಆತ್ಮನು. ಆತ್ಮನು ಸುಖಸ್ವರೂಪನು, ಅವನು ಯಾವಾಗಲೂ ಸ್ಥಿರವಾಗಿ ಇರುವವನು. ॥೨॥

ಆತ್ಮೈವ ಪರಮಂ ತತ್ವಂ ಆತ್ಮೈವ ಜಗತಾಂ ಗಣಃ ।
ಆತ್ಮೈವ ಗಗನಾಕಾರಂ ಆತ್ಮೈವ ಚ ನಿರಂತರಂ ॥೩॥

ಆತ್ಮೈವ ಸತ್ಯಂ ಬ್ರಹ್ಮೈವ ಆತ್ಮೈವ ಗುರುಲಕ್ಷಣಂ ।
ಆತ್ಮೈವ ಚಿನ್ಮಯಂ ನಿತ್ಯಂ ಆತ್ಮೈವಾಕ್ಷರನಿಶ್ಚಯಂ ॥೪॥

ಆತ್ಮೈವ ಸಿದ್ಧರೂಪಂ ವಾ ಆತ್ಮೈವಾತ್ಮಾ ನ ಸಂಶಯಃ ।
ಆತ್ಮೈವ ಜಗದಾಕಾರಂ ಆತ್ಮೈವಾತ್ಮಾ ಸ್ವಯಂ ಸ್ವಯಂ ॥೫॥

ಆತ್ಮೈವ ಶಾಂತಿಕಲನಂ ಆತ್ಮೈವ ಮನಸಾ ವಿಯತ್ ।
ಆತ್ಮೈವ ಸರ್ವಂ ಯತ್ಕಿಂಚಿದಾತ್ಮೈವ ಪರಮಂ ಪದಂ ॥೬॥

ಆತ್ಮೈವ ಭುವನಾಕಾರಮಾತ್ಮೈವ ಪ್ರಿಯಮವ್ಯಯಂ ।
ಆತ್ಮೈವಾನ್ಯನ್ನ ಚ ಕ್ವಾಪಿ ಆತ್ಮೈವಾನ್ಯಂ ಮನೋಮಯಂ ॥೭॥

---

ಆತ್ಮನೇ ಪರಮತತ್ವವು, ಆತ್ಮನೇ ನಾನಾ ಲೋಕಗಳು. ಆತ್ಮನೇ ಗಗನವು, ಎಲ್ಲೆಡೆಯಲ್ಲೂ ಇರುವವನು ಆತ್ಮನೋರ್ವನೇ. ॥೩॥

ಆತ್ಮನೇ ಬ್ರಹ್ಮನು, ಆತ್ಮನೇ ಗುರುವು. ಆತ್ಮನೇ ಚಿನ್ಮಯನು, ಆತ್ಮನೇ ಓಂಕಾರವು. ಆತ್ಮನು ಅವಿನಾಶಿಯು, ಮತ್ತು ನಿಶ್ಚಯರೂಪನು. ॥೪॥

ಆತ್ಮನು ಯಾವಾಗಲೂ ಸಿದ್ಧನಾಗಿರುವನು. ಈಹೊತ್ತು ನಿನ್ನೆ ಸಿದ್ಧಿಸಿದವನಲ್ಲ. ಆತನು ಅನಾದಿ ಸಿದ್ಧನು. ಆತ್ಮನೇ ಆತ್ಮನು. ಆತ್ಮನೇ ಜಗತ್ತಿನ ರೂಪವಾಗಿ ತೋರುವವನು. ॥೫॥

ಆತ್ಮನೇ ಶಾಂತಿಸ್ವರೂಪವು, ಆತ್ಮನೇ ಮನಸ್ಸು. ಆತ್ಮನೇ ಗಗನವು. ಆತ್ಮನೇ ಅದೂ ಇದೂ ಎಲ್ಲವೂ, ಆತ್ಮನೇ ಪರಮಪದವು. ॥೬॥

ಆತ್ಮನೇ ಲೋಕಗಳ ರೂಪವಾಗಿ ತೋರುವವನು. ನಾಶರಹಿತನಾದ ಆತ್ಮನೇ ಎಲ್ಲರಿಗೂ ಅತ್ಯಂತ ಪ್ರಿಯನಾಗಿರುವನು. ಮನಸ್ಸಾಕ್ಷಿಯು ಆತ್ಮನೇ. ಆತ್ಮನ ಹೊರತು ಬೇರೆ ಏನೂ ಎಲ್ಲಿಯೂ ಇಲ್ಲ. ॥೭॥

ಆತ್ಮೈವ ಸರ್ವವಿಜ್ಞಾನಂ ಆತ್ಮೈವ ಪರಮಂ ಧನಂ ।
ಆತ್ಮೈವ ಭೂತರೂಪಂ ವಾ ಆತ್ಮೈವ ಭ್ರಮಣಂ ಮಹತ್ ॥೮॥

ಆತ್ಮೈವ ನಿತ್ಯಶುದ್ಧಂ ವಾ ಆತ್ಮೈವ ಗುರುರಾತ್ಮನಃ ।
ಆತ್ಮೈವ ಹ್ಯಾತ್ಮನಃ ಶಿಷ್ಯಃ ಆತ್ಮೈವ ಲಯಮಾತ್ಮನಿ ॥೯॥

ಆತ್ಮೈವ ಹ್ಯಾತ್ಮನೋ ಧ್ಯಾನಂ ಆತ್ಮೈವ ಗತಿರಾತ್ಮನಃ ।
ಆತ್ಮೈವ ಗತಿರಾತ್ಮೈವ ಆತ್ಮೈವ ಸ್ನಾನಮಾತ್ಮನಃ ॥೧೦॥

ಆತ್ಮೈವ ಹ್ಯಾತ್ಮನೋ ಹೋಮ ಆತ್ಮೈವ ಜಪಮಾತ್ಮನಃ ।
ಆತ್ಮೈವ ತೃಪ್ತಿರಾತ್ಮೈವ ಆತ್ಮನೋಽನ್ಯನ್ನ ಕಿಂಚನ ॥೧೧॥

ಆತ್ಮೈವ ಹ್ಯಾತ್ಮನೋ ಮೂಲಮಾತ್ಮೈವ ಹ್ಯಾತ್ಮನೋ ವ್ರತಂ ।
ಆತ್ಮಜ್ಞಾನವ್ರತಂ ನಿತ್ಯಂ ಆತ್ಮಜ್ಞಾನಂ ಪರಂ ಸುಖಂ ॥೧೨॥

ಆತ್ಮಜ್ಞಾನಂ ಪರಾನಂದಂ ಆತ್ಮಜ್ಞಾನಂ ಪರಾಯಣಂ ।
ಆತ್ಮಜ್ಞಾನಂ ಪರಬ್ರಹ್ಮ ಆತ್ಮಜ್ಞಾನಂ ಮಹಾವ್ರತಂ ॥೧೩॥

---

ಎಲ್ಲ ವಿಜ್ಞಾನಗಳೂ ಆತ್ಮನೇ. ಆತ್ಮನೇ ಪರಮಧನವು. ಆತ್ಮನೇ ಮಹಾ ಭೂತಗಳು, ಆತ್ಮನೇ ಭ್ರಮಣವು. ॥೮॥

ಆತ್ಮನು ನಿತ್ಯ ಶುದ್ಧನು, ಆತ್ಮನೇ ತನಗೆ ಗುರುವು. ತಾನೇ ತನಗೆ ಶಿಷ್ಯನು, ಆತ್ಮನು ತಾನೇ ತನ್ನಲ್ಲಿ ಲೀನನಾಗುವನು. ॥೯॥

ಆತ್ಮನೇ ಆತ್ಮನಿಗೆ ಧ್ಯಾನವು, ಆತ್ಮನೇ ಗತಿಯು, ಆತ್ಮನೇ ಸ್ನಾನವು. ಆತ್ಮನ ಹೊರತು ಬೇರೆ ಏನೂ ಇಲ್ಲ. ॥೧೦॥

ಆತ್ಮನೇ ಆತ್ಮನಿಗೆ ಹೋಮವು. ಆತ್ಮನೇ ಜಪವು, ಆತ್ಮನೇ ತೃಪ್ತಿಯು, ಆತ್ಮನ ಹೊರತು ಬೇರೆ ಏನೂ ಇಲ್ಲ. ॥೧೧॥

ಆತ್ಮನೇ ಆತ್ಮನಿಗೆ ಮೂಲವು, ಆತ್ಮನೇ ವ್ರತವು, ಆತ್ಮಜ್ಞಾನವ್ರತವೇ ನಿತ್ಯವಾದುದು, ಆತ್ಮಜ್ಞಾನವೇ ಪರಮಸುಖವು. ॥೧೨॥

ಆತ್ಮಜ್ಞಾನವೇ ಪರಮಾನಂದವು, ಆತ್ಮಜ್ಞಾನವೇ ಗತಿಯು, ಆತ್ಮಜ್ಞಾನವೇ ಮಹಾವ್ರತವು. ಆತ್ಮಜ್ಞಾನವೇ ಪರಬ್ರಹ್ಮನು. ॥೧೩॥

ಆತ್ಮಜ್ಞಾನಂ ಸ್ವಸಂವೇದ್ಯಮಾತ್ಮಜ್ಞಾನಂ ಮಹಾಧನಂ ।
ಆತ್ಮಜ್ಞಾನಂ ಪರಂಬ್ರಹ್ಮ ಆತ್ಮಜ್ಞಾನಂ ಮಹಾಸುಖಂ ॥೧೪॥

ಆತ್ಮಜ್ಞಾನಂ ಮಹಾನಾತ್ಮಾ ಆತ್ಮಜ್ಞಾನಂ ಜನಾಸ್ಪದಂ ।
ಆತ್ಮಜ್ಞಾನಂ ಮಹಾತೀರ್ಥಮಾತ್ಮಜ್ಞಾನಂ ಜಯಪ್ರದಂ ॥೧೫॥

ಆತ್ಮಜ್ಞಾನಂ ಪರಂ ಬ್ರಹ್ಮ ಇತ್ಯೇವ ದೃಢನಿಶ್ಚಯಃ ।
ಆತ್ಮಜ್ಞಾನಂ ಮನೋನಾಶಮಾತ್ಮಜ್ಞಾನಂ ಪರೋ ಗುರುಃ ॥೧೬॥

ಆತ್ಮಜ್ಞಾನಂ ಚಿತ್ತನಾಶಂ ಆತ್ಮಜ್ಞಾನಂ ವಿಮುಕ್ತಿದಂ ।
ಆತ್ಮಜ್ಞಾನಂ ಭಯನಾಶಂ ಆತ್ಮಜ್ಞಾನಂ ಸುಖಾವಹಂ ॥೧೭॥

ಆತ್ಮಜ್ಞಾನಂ ಮಹಾತೇಜ ಆತ್ಮಜ್ಞಾನಂ ಮಹಾಶುಭಂ ।
ಆತ್ಮಜ್ಞಾನಂ ಸತಾಂ ರೂಪಂ ಆತ್ಮಜ್ಞಾನಂ ಸತಾಂ ಪ್ರಿಯಂ ॥೧೮॥

---

ಆತ್ಮಜ್ಞಾನವು ತನ್ನನ್ನು ತಾನೇ ತಿಳಿಯುವುದು. ಆತ್ಮಜ್ಞಾನವು ಮಹಾಧನ. ಆತ್ಮಜ್ಞಾನವು ಪರಬ್ರಹ್ಮ, ಆತ್ಮಜ್ಞಾನವು ಮಹಾಸುಖವು. ॥೧೪॥

ಆತ್ಮಜ್ಞಾನವೇ ಪರಮಾತ್ಮನು, ಆತ್ಮಜ್ಞಾನವೇ ಜನಗಳಿಗಾಶ್ರಯವು, ಆತ್ಮಜ್ಞಾನವೇ ಮಹಾತೀರ್ಥವು. ಆತ್ಮಜ್ಞಾನವೇ ಜಯವನ್ನುಂಟುಮಾಡುವುದು. ॥೧೫॥

ಆತ್ಮಜ್ಞಾನವೇ ಪರಬ್ರಹ್ಮನು. ಆತ್ಮಜ್ಞಾನವು ಬಂದೊಡನೆಯೇ ಮನಸ್ಸು ಲಯಹೊಂದುವುದು. ಆತ್ಮಜ್ಞಾನವೇ ಪರಮಗುರುವು. ॥೧೬॥

ಆತ್ಮಜ್ಞಾನವು ಬಂದೊಡನೆಯೇ ಚಿತ್ತವು ನಾಶವಾಗಿ ಮುಕ್ತಿಯು ಲಭಿಸುವುದು. ಭಯವು ನಾಶವಾಗುವುದು, ಸುಖವು ಪ್ರಕಾಶಿಸುವುದು, ಆ ಭಯನಾಶವೂ ಸುಖವೂ ಸಹ ಆತ್ಮಜ್ಞಾನವೇ ಹೊರತು ಬೇರೆಯಲ್ಲ. ॥೧೭॥

ಆತ್ಮಜ್ಞಾನವು ಮಹಾಪ್ರಕಾಶರೂಪವಾದುದು, ಮಹಾಮಂಗಳರೂಪವಾದುದು, ಆತ್ಮಜ್ಞಾನವೇ ಸತ್ಪುರುಷರ ರೂಪವು, ಸತ್ಪುರುಷರಿಗೆ ಪ್ರಿಯವಾದುದು. ॥೧೮॥

ಆತ್ಮಜ್ಞಾನಂ ಸತಾಂ ಮೋಕ್ಷಂ ಆತ್ಮಜ್ಞಾನಂ ವಿವೇಕಜಂ ।
ಆತ್ಮಜ್ಞಾನಂ ಪರೋಧರ್ಮಃ ಆತ್ಮಜ್ಞಾನಂ ಸದಾ ಜಪಃ ॥೧೯॥

ಆತ್ಮಜ್ಞಾನಂ ಮಹಾಶ್ರೇಷ್ಠಂ ಆತ್ಮಜ್ಞಾನಂ ಮಹಾಫಲಂ ।
ಆತ್ಮಜ್ಞಾನಸ್ಯ ಸದೃಶಂ ಆತ್ಮವಿಜ್ಞಾನಮೇವ ಹಿ ॥೨೦॥

ಆತ್ಮಜ್ಞಾನಸಮಂ ಕಿಂಚಿನ್ನ ಭೂತಂ ನಭವಿಷ್ಯತಿ ।
ಆತ್ಮಜ್ಞಾನಂ ಪರಂ ಮಂತ್ರಂ ಆತ್ಮಜ್ಞಾನಂ ಪರಂ ತಪಃ ॥೨೧॥

ಆತ್ಮಜ್ಞಾನಂ ಹರಿಸ್ಸಾಕ್ಷಾದಾತ್ಮಜ್ಞಾನಂ ಶಿವಃ ಪರಃ ।
ಆತ್ಮಜ್ಞಾನಂ ಪರೋಭ್ರಾತಾ ಆತ್ಮಜ್ಞಾನಂ ಸ್ವಸಮ್ಮತಂ ॥೨೨॥

ಆತ್ಮಜ್ಞಾನಂ ಸ್ವಯಂ ಪುಣ್ಯಂ ಆತ್ಮಜ್ಞಾನಂ ವಿಶೋಧನಂ ।
ಆತ್ಮಜ್ಞಾನಂ ಮಹಾತೀರ್ಥಮಾತ್ಮಜ್ಞಾನಂ ಶಮಾದಿಕಂ ॥೨೩॥

---

ಆತ್ಮಜ್ಞಾನವೇ ಮುಕ್ತಿಯು, ಆತ್ಮಜ್ಞಾನವು ಆತ್ಮಾನಾತ್ಮವಿವೇಕದಿಂದ ಉಂಟಾಗುವುದು, ಆತ್ಮಜ್ಞಾನವು ಪರಮಧರ್ಮವು, ಆತ್ಮಜ್ಞಾನವೇ ಜಪವು.॥೧೯॥

ಆತ್ಮಜ್ಞಾನವು ಮಹಾಶ್ರೇಷ್ಠವು. ಆತ್ಮಜ್ಞಾನವೇ ಫಲಗಳಲ್ಲೆಲ್ಲಾ ಅತ್ಯುತ್ತಮವಾದ ಫಲವು. ಆತ್ಮಜ್ಞಾನಕ್ಕೆ ಸಮನಾದುದು ಆತ್ಮಜ್ಞಾನವೇ ಹೊರತು ಬೇರೆಯಿಲ್ಲ. ॥೨೦॥

ಆತ್ಮಜ್ಞಾನಕ್ಕೆ ಸಮವಾದುದು ಹಿಂದೆ ಜನಿಸಿಯೂ ಇಲ್ಲ ಮುಂದೆ ಜನಿಸುವುದೂ ಇಲ್ಲ. ಆತ್ಮಜ್ಞಾನವೇ ಮಹಾಮಂತ್ರವು. ಆತ್ಮಜ್ಞಾನವೇ ಮಹಾತಪವು. ॥೨೧॥

ಆತ್ಮಜ್ಞಾನವೇ ಸಾಕ್ಷಾತ್ ಹರಿಯು, ಆತ್ಮಜ್ಞಾನವೇ ಪರಶಿವನು, ಆತ್ಮಜ್ಞಾನವೇ ಸ್ನೇಹಮಯನಾದ ಸಹೋದರನು, ಆತ್ಮಜ್ಞಾನವು ಅತಿಪ್ರಿಯವಾದುದು. ॥೨೨॥

ಆತ್ಮಜ್ಞಾನವು ಸ್ವಯಂ ಪುಣ್ಯವಾದುದು, ಪಾಪಶೋಧಕವಾದುದು, ಆತ್ಮಜ್ಞಾನವೇ ಮಹಾತೀರ್ಥವು, ಶಮದಮಾದಿಗಳೂ ಆತ್ಮಜ್ಞಾನವೇ. ॥೨೩॥

ಆತ್ಮಜ್ಞಾನಂ ಪ್ರಿಯಂ ಮಂತ್ರಮಾತ್ಮಜ್ಞಾನಂ ಸ್ವಪಾವನಂ ।
ಆತ್ಮಜ್ಞಾನಂ ಚ ಕಿನ್ನಾಮ ಅಹಂ ಬ್ರಹ್ಮೇತಿ ನಿಶ್ಚಯಃ ॥೨೪॥

ಆನಂದೋಹಂ ಪರಾನಂದಂ ಶುದ್ಧೋಽಹಂ ನಿತ್ಯಮವ್ಯಯಃ ।
ಚಿದಾಕಾಶಸ್ವರೂಪೋಸ್ಮಿ ಸಚ್ಚಿದಾನಂದಶಾಶ್ವತಂ ॥೨೫॥

ಅಹಂ ಬ್ರಹ್ಮೇತಿವಿಶ್ವಾಸಮಹಂ ಬ್ರಹ್ಮಮಹೋದಯಂ ।
ಅಹಂ ಬ್ರಹ್ಮಾಸ್ಮಿ ನಿತ್ಯೋಽಸ್ಮಿ ಶುದ್ಧೋಽಸ್ಮೀತಿ ಚ ಭಾವನಂ ॥೨೬॥

ನಿರ್ವಿಕಾರೋಸ್ಮಿ ಶಾಂತೋಽಹಂ ಸಮತಾಽಹಂ ನಿರಂತರಂ ।
ಸರ್ವದಾ ಸುಖರೂಪೋಸ್ಮಿ ಸರ್ವದೋಷವಿವರ್ಜಿತಃ ॥೨೭॥

ಸರ್ವಸಂಕಲ್ಪಹೀನೋಸ್ಮಿ ಸರ್ವದಾ ಸ್ವಯಮಸ್ಮ್ಯಹಂ ।
ಸರ್ವಂ ಬ್ರಹ್ಮೇತ್ಯನುಭವಂ ವಿನಾ ಶಬ್ದಂ ಪಠ ಸ್ವಯಂ ॥೨೮॥

---

ಆತ್ಮಜ್ಞಾನವು ಪ್ರಿಯಮಂತ್ರವು, ಆತ್ಮಜ್ಞಾನವು ಸ್ವಯಂಪವಿತ್ರವಾದುದು, ಆತ್ಮಜ್ಞಾನವೆಂದರೆ "ನಾನೇ ಬ್ರಹ್ಮನು" ಎಂಬ ನಿಶ್ಚಯವು. ॥೨೪॥

ಆನಂದವು ನಾನು, ಪರಮಾನಂದವು ನಾನು, ಶುದ್ಧನು ನಾನು, ನಿತ್ಯನು ನಾನು, ಜ್ಞಾನಾಕಾಶಸ್ವರೂಪನು ನಾನು, ಸಚ್ಚಿದಾನಂದಸ್ವರೂಪನು ನಾನು. ॥೨೫॥

ನಾನೇ ಬ್ರಹ್ಮನೆಂಬ ವಿಶ್ವಾಸವೇ ಬ್ರಹ್ಮೈಕ್ಯವನ್ನುಂಟುಮಾಡುವುದು. ನಾನು ಬ್ರಹ್ಮನು, ಶುದ್ಧನು ಎಂದು ಭಾವಿಸಬೇಕು. ॥೨೬॥

ನಿರ್ವಿಕಾರನು ನಾನು, ಶಾಂತನು ನಾನು, ಸಮತೆಯು ನಾನು, ಯಾವಾಗಲೂ ಸುಖರೂಪನು ನಾನು, ನನ್ನಲ್ಲಿ ಯಾವ ದೋಷಗಳೂ ಇಲ್ಲ. ॥೨೭॥

ನನಗೆ ಯಾವ ಸಂಕಲ್ಪವೂ ಇಲ್ಲ. ಯಾವಾಗಲೂ ನಾನು ನಾನೇ ಆಗಿರುವೆನು. ಶಬ್ದವಿಲ್ಲದೇ "ನಾನೇ ಬ್ರಹ್ಮ" ನೆಂಬ ಅನುಭವವನ್ನು ಮಾತ್ರ ಪಠಿಸು. ಅಂದರೆ ಅನುಭವಿಸು. ॥೨೮॥

ಕೋಟ್ಯಶ್ವಮೇಧೇ ಯತ್ಪುಣ್ಯಂ ಕ್ಷಣಾತ್ತತ್ಪುಣ್ಯಮಾಪ್ನುಯಾತ್ ।
ಅಹಂ ಬ್ರಹ್ಮೇತಿ ನಿಶ್ಚಿತ್ಯ ಮೇರುದಾನಫಲಂ ಲಭೇತ್ ॥೨೯॥

ಬ್ರಹ್ಮೈವಾಹಮಿತಿ ಸ್ಥಿತ್ವಾ ಸರ್ವಭೂದಾನಮಪ್ಯಣು ।
ಬ್ರಹ್ಮೈವಾಹಮಿತಿ ಸ್ಥಿತ್ವಾ ಕೋಟಿಶೋ ದಾನಮಪ್ಯಣು ॥೩೦॥

ಬ್ರಹ್ಮೈವಾಹಮಿತಿ ಸ್ಥಿತ್ವಾ ಸರ್ವಾನಂದಂ ತೃಣಾಯತೇ ।
ಬ್ರಹ್ಮೈವ ಸರ್ವಮಿತ್ಯೇವ ಭಾವಿತಸ್ಯ ಫಲಂ ಸ್ವಯಂ ॥೩೧॥

ಬ್ರಹ್ಮೈವಾಹಮಿತಿ ಸ್ಥಿತ್ವಾ ಸಮಾನಂ ಬ್ರಹ್ಮ ಏವ ಹಿ ।
ತಸ್ಮಾತ್ ಸ್ವಪ್ನೇತಿ ನಿತ್ಯಂ ಚ ಸರ್ವಂ ಸಂತ್ಯಜ್ಯ ಯತ್ನತಃ ॥೩೨॥

ಅಹಂ ಬ್ರಹ್ಮ ನ ಸಂದೇಹ ಅಹಮೇವ ಗತಿರ್ಮಮ ।
ಅಹಮೇವ ಸದಾ ನಾನ್ಯದಹಮೇವ ಸದಾ ಗುರುಃ ॥೩೩॥

ಅಹಮೇವ ಪರೋಹ್ಯಾತ್ಮಾ ಅಹಮೇವ ನ ವಾ ಪರಃ ।
ಅಹಮೇವ ಗುರುಃ ಶ್ರೇಷ್ಠ ಅಹಮೇವೇತಿ ನಿಶ್ಚಿನು ॥೩೪॥

---

ನಾನೇ ಬ್ರಹ್ಮನೆಂಬ ಅನುಭವವನ್ನು ಹೊಂದಿದರೆ ಕ್ಷಣದಲ್ಲಿಯೇ ಕೋಟಿ ಅಶ್ವಮೇಧಯಾಗಗಳ ಫಲವು ಲಭಿಸುವುದು. ಮೇರುವನ್ನೇ ದಾನಮಾಡಿದ ಫಲವು ದೊರಕುವುದು. ॥೨೯॥

ನಾನೇ ಬ್ರಹ್ಮನೆಂಬ ಅನುಭವದ ಎದುರಿನಲ್ಲಿ ಸಕಲ ಭೂಮಿಯ ದಾನವೂ ಚಿಕ್ಕದು, ಕೋಟಿಕೋಟಿ ದಾನಗಳೂ ಚಿಕ್ಕವು, ಆ ಅನುಭವದ ಎದುರಿಗೆ ಎಲ್ಲ ಇತರ ಆನಂದಗಳೂ ತೃಣಸಮಾನಗಳಾಗುವುವು. ಎಲ್ಲವೂ ಬ್ರಹ್ಮವಸ್ತುವೇ ಎಂಬ ನಿಜವಾದ ಭಾವನೆಯೇ ಅದರಿಂದುಂಟಾಗುವುದು. ॥೩೦-೩೧॥

ನಾನೇ ಬ್ರಹ್ಮನೆಂಬ ಅನುಭವಕ್ಕೆ ಸರಿಯಾದುದು ಬ್ರಹ್ಮವಸ್ತು ವಿನಾ ಬೇರೆಯಿಲ್ಲ. ಆದುದರಿಂದ ಸ್ವಪ್ನವಸ್ತುಗಳಂತೆ ಅಸ್ಥಿರವಾದೀ ಸಂಸಾರವೆಲ್ಲವನ್ನೂ ಬಿಟ್ಟು, "ನಾನೇ ಬ್ರಹ್ಮವಸ್ತುವು, ನನಗೆ ನಾನೇ ಗತಿಯು, ನಾನೇ ಪರಮಾತ್ಮ, ನನಗೆ ನಾನೇ ಗುರುವು, ನಾನೇ ಶಿಷ್ಯನು, ನಾನೇ ಶ್ರೇಷ್ಠನು ಬೇರೆ ಯಾರೂ ಇಲ್ಲ" ಎಂಬುದಾಗಿ ನಿಶ್ಚಯಿಸಿ ತಿಳಿದುಕೋ. ॥೩೨-೩೩-೩೪॥

ಇದಮಿತ್ಯೇವನಿರ್ದೇಶೋ ಪರಿಚ್ಛಿನ್ನೇ ಜಗನ್ನಹಿ ।
ನ ಭೂಮಿರ್ನಜಲಂ ನಾಗ್ನಿರ್ನವಾಯುರ್ನಚ ಖಂ ತಥಾ ॥೩೫॥

ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ।
ಇತ್ಯೇವಂ ಭಾವನಪರೋ ದೇಹಮುಕ್ತೋ ಸುಖೀಭವ ॥೩೬॥

ಅಹಮಾತ್ಮಾ ಇದಂ ನಾಸ್ತಿ ಸರ್ವಂ ಚೈತನ್ಯಮಾತ್ರತಃ ।
ಅಹಮೇವ ಹಿ ಪೂರ್ಣಾತ್ಮಾ ಆನಂದಃ ಸ್ಥಿರನಾಮಕಃ ॥೩೭॥

ಇದಮೇವ ಸದಾ ನಾಸ್ತಿ ಜಡತ್ವಾದಸದೇವ ಹಿ ।
ಇದಂ ಬ್ರಹ್ಮ ಸದಾ ಬ್ರಹ್ಮ ಇದಂ ನೇತಿ ಸುಖೀ ಭವ ॥೩೮॥

ತುರಂಗಶೃಂಗಸನ್ನಿಭಃ ಶ್ರುತಿಪ್ರರೋಚನಾವಿಶೇಷ
ಕಾಮವಾಸನಾವಿನಿಶ್ಚಿತಾತ್ಮವೃತ್ತಿತಃ ।
ನರಾಃ ಸುರಾ ಮುನೀಶ್ವರಾ ಅಸಂಗಸಂಗ
ಮುಪ್ಯುಮಾಪತಿಂ ನ ತೇ ಭಜಂತಿ ಕೇಚನ ॥೩೯॥

---

ಇದು–ಎನ್ನುವ ಪರಿಚ್ಛಿನ್ನವಾದ ಜಗತ್ತು ಇಲ್ಲವೇ ಇಲ್ಲ. ಭೂಮಿಯಿಲ್ಲ ಜಲವಿಲ್ಲ, ಅಗ್ನಿಯಿಲ್ಲ, ವಾಯುವಿಲ್ಲ, ಆಕಾಶವಿಲ್ಲ. ಸರ್ವವೂ ಚೈತನ್ಯಸ್ವರೂಪ ವಾಗಿರುವುದು. ಚೈತನ್ಯಕ್ಕೆ ಹೊರತಾಗಿ ಬೇರೆ ಯಾವುದೂ ಇರುವುದಿಲ್ಲ. ಆದುದ ರಿಂದ ನೀನು ಈ ವಿಧವಾದ ಭಾವನೆಯಿಂದ ಕೂಡಿದಂಥವನಾಗಿ ವಿದೇಹಮುಕ್ತ ನಾಗು. ಮತ್ತು ಆನಂದಮಯನಾಗು. ಈ ರೀತಿ ವರ್ತಿಸುವುದರಿಂದ ನೀನು ಸಾಕ್ಷಾತ್ ಸಚ್ಚಿದಾನಂದಸ್ವರೂಪನಾಗಿ ಪ್ರಕಾಶಿಸುವೆ. ॥೩೫-೩೬॥

ನಾನು ಆತ್ಮನು, ಇದು ಇಲ್ಲ. ಎಲ್ಲ ಚೈತನ್ಯ ಮಾತ್ರವೇ ವಿನಾ ಬೇರೆಯಿಲ್ಲ. ನಾನು ಪೂರ್ಣಾತ್ಮನು, ಆನಂದಸ್ವರೂಪನು ನಾನು, ಸ್ಥಿರನು ನಾನು. ॥೩೭॥

ಜಡವಾದುದರಿಂದ ಈ ಜಗತ್ತಾವುದೂ ವಸ್ತುತಃ ಇಲ್ಲ. ಬ್ರಹ್ಮವಸ್ತು ವೊಂದು ವಿನಾ ಬೇರಾವುದೂ ಇಲ್ಲ ಎಂದು ಭಾವಿಸುತ್ತಾ ಸುಖಿಯಾಗು. ॥೩೮॥

ಈ ಜಗತ್ತೆಲ್ಲವೂ ಕುದುರೆಯ ಕೊಂಬಿನಂತೆ ಅಸತ್ಯವಾದುದು. ಇಂತಹು ದನ್ನು ಕಾಮವಾಸನೆಯಿಂದ ಸತ್ಯವೆಂದು ತಿಳಿದು ಸೇವಿಸುತ್ತಾ ಜನರಲ್ಲಿ ಕೆಲವರು

## ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ಷಟ್ತ್ರಿಂಶೋಽಧ್ಯಾಯಃ

---

ನಿಸ್ಸಂಗನಾದ ಪರಶಿವನನ್ನು ಮರೆತುಬಿಡುವರು. ಅದೇ ರೀತಿ ದೇವತೆಗಳೂ, ಮುನಿ ಶ್ರೇಷ್ಠರೂ, ಅಜ್ಞಾನಿಗಳಾಗಿ, ನಿರ್ಲಿಪ್ತನೂ, ನಿರಾಕಾರನೂ, ನಿರ್ಗುಣನೂ ಆದ ಪರಶಿವನನ್ನು ಸರಿಯಾಗಿ ತಿಳಿದುಕೊಳ್ಳದೆ ನಾನಾವಿಧವಾದ ಕಷ್ಟನಿಷ್ಠುರಗಳಿಗೆ ಸಿಕ್ಕಿ ತೊಳಲುವರು. ||೩೯||

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಸಪ್ತತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ನಿದಾಘ ಶೃಣು ವಕ್ಷ್ಯಾಮಿ ರಹಸ್ಯಂ ಪರಮಾದ್ಭುತಂ ।
ಶ್ಲೋಕೈಕಶ್ರವಣೇನೈವ ಸದ್ಯೋ ಮುಕ್ತಿಮವಾಪ್ನುಯಾತ್ ॥೧॥

ಇದಂ ದೃಷ್ಟಂ ಪರಂ ಬ್ರಹ್ಮ ದೃಶ್ಯವದ್ಭಾತಿ ಚಿತ್ತತಃ ।
ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ॥೨॥

ಇದಮೇವೇಹ ನಾಸ್ತ್ಯೇವ ಅಯಮಿತ್ಯಪಿ ನಾಸ್ತಿ ಹಿ ।
ಏಕ ಏವಾಪ್ಯಣುರ್ವಾಪಿ ನಾಸ್ತಿ ನಾಸ್ತಿ ನ ಸಂಶಯಃ ॥೩॥

---

## ಮೂವತ್ತೇಳನೆಯ ಅಧ್ಯಾಯವು

ಋಭುವು ಮತ್ತೆ ಹೀಗೆ ಹೇಳಿದನು. ಎಲೈ ನಿದಾಘನೇ, ಈಗ ಅತಿ ರಹಸ್ಯವಾದೊಂದು ವಿಷಯವನ್ನು ಹೇಳುವೆನು, ಕೇಳು. ಇದರ ಒಂದು ಪದ್ಯವನ್ನು ಕೇಳಿದರೂ ಸಾಕು, ಮುಕ್ತಿಯು ಲಭಿಸುವುದು. ॥೧॥

ಪರಬ್ರಹ್ಮವಸ್ತುವೇ ಮನಸ್ಸಿನ ಕಲ್ಪನೆಯಿಂದ ದ್ರಷ್ಟೃವಾಗಿಯೂ ದೃಶ್ಯವಾಗಿಯೂ ತೋರುವುದು. ಎಲ್ಲವೂ ಚೈತನ್ಯಸ್ವರೂಪವೇ ಹೊರತು ಬೇರೆ ಏನೂ ಇಲ್ಲ. ॥೨॥

ಇದು-ಎನ್ನುವುದಾವುದೂ ಇಲ್ಲ. ಇವನು-ಎನ್ನುವವನೂ ಇಲ್ಲ. ಒಂದು ಅಣು-ಎನ್ನುವುದಾವುದೂ ಇಲ್ಲ. ಚೈತನ್ಯವಸ್ತುವೊಂದೇ ಇರುವುದು. ॥೩॥

ವ್ಯವಹಾರಮಿದಂ ಕ್ವಾಪಿ ವಾರ್ತಾಮಾತ್ರಮಪಿ ಕ್ವ ವಾ ।
ಬಂಧರೂಪಂ ಬಂಧವಾರ್ತಾ ಬಂಧಕಾರ್ಯಂ ಪರಂ ಚ ವಾ ॥೪॥

ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ।
ಸನ್ಮಾತ್ರಕಾರ್ಯಂ ಸನ್ಮಾತ್ರಮಹಂ ಬ್ರಹ್ಮೇತಿ ನಿಶ್ಚಯಂ ॥೫॥

ದುಃಖಂ ಸುಖಂ ವಾ ಬೋಧೋ ವಾ ಸಾಧಕಂ ಸಾಧ್ಯನಿರ್ಣಯಃ ।
ಆತ್ಮೇತಿ ಪರಮಾತ್ಮೇತಿ ಜೀವಾತ್ಮೇತಿ ಪೃಥಙ್ನಹಿ ॥೬॥

ದೇಹೋಽಹಮಿತಿ ಮೂರ್ತೋಽಹಂ ಜ್ಞಾನವಿಜ್ಞಾನವಾನಹಂ ।
ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ॥೭॥

ಕಾರ್ಯಕಾರಣರೂಪೋಽಹಮಂತಃಕರಣಕಾರ್ಯಕಂ ।
ಏಕಮಿತ್ಯೇಕಮಾತ್ರಂ ವಾ ನಾಸ್ತಿ ನಾಸ್ತೀತಿ ಭಾವಯ ॥೮॥

---

ಈ ವ್ಯವಹಾರವೂ ಇಲ್ಲ, ವಾರ್ತೆಯೂ ಇಲ್ಲ. ಬಂಧನವೂ ಇಲ್ಲ, ಬಂಧಿಸಲ್ಪಡುವವನೂ ಇಲ್ಲ. ಬಂಧನವಾರ್ತೆಯೇ ಇಲ್ಲ. ಬಂಧನದ ಕಾರ್ಯವೂ ಇಲ್ಲ. ಚೈತನ್ಯ ವಸ್ತುವನ್ನು ಹೊರತು ಬೇರೆ ಏನೂ ಇಲ್ಲ. ॥೪॥

ನಾನೇ ಸದ್ರೂಪನಾದ ಪರಮಾತ್ಮನು, ಜಗತ್ತೆಲ್ಲ ಸದ್ರೂಪವಾದುದು, ಸುಖ ದುಃಖಗಳು, ಬೋಧನೆ, ಸಾಧಕ, ಸಾಧ್ಯ, ಆತ್ಮ, ಪರಮಾತ್ಮ, ಜೀವಾತ್ಮರೆಂಬ ಭೇದಗಳು ಇಲ್ಲವೇ ಇಲ್ಲ. ॥೫-೬॥

ನಾನು ದೇಹ, ಶರೀರವುಳ್ಳವನು ನಾನು, ಜ್ಞಾನವಿಜ್ಞಾನಗಳುಳ್ಳವನು ನಾನು ಎಂದು ಮೊದಲಾದ ವ್ಯವಹಾರವೆಲ್ಲವೂ ಸುಳ್ಳು. ಚೈತನ್ಯಸ್ವರೂಪವೊಂದನ್ನು ಬಿಟ್ಟು ಬೇರಾವ ವಸ್ತುವೂ ಇಲ್ಲ. ॥೭॥

ನಾನು ಕಾರ್ಯಕಾರಣರೂಪನು, ಅಂತಃಕರಣದ ಕಾರ್ಯವು ಎಂಬುದಾವುದೂ ಇಲ್ಲ. ನಾನು ಓರ್ವನೇ ಹೊರತು ಬೇರೆಯಲ್ಲ-ಎಂಬ ಭಾವಿಸು. ॥೮॥

ಸರ್ವಸಂಕಲ್ಪಮಾತ್ರೇತಿ ಸರ್ವಂ ಬ್ರಹ್ಮೇತಿ ವಾ ಜಗತ್ ।
ತತ್ತ್ವಜ್ಞಾನಂ ಪರಂ ಬ್ರಹ್ಮ ಓಂಕಾರಾರ್ಥಂ ಸುಖಂ ಜಯಂ ॥೯॥

ದ್ವೈತಾದ್ವೈತಂ ಸದಾದ್ವೈತಂ ತಥಾ ಮಾನಾವಮಾನಕಂ ।
ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ॥೧೦॥

ಆತ್ಮಾನಂದಮಹಂ ಬ್ರಹ್ಮ ಪ್ರಜ್ಞಾನಂ ಬ್ರಹ್ಮ ಏವ ಹಿ ।
ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ॥೧೧॥

ಇದಂ ರೂಪಮಹಂ ರೂಪಂ ಪ್ರಿಯಾಪ್ರಿಯವಿಚಾರಣಂ ।
ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ॥೧೨॥

ಯದ್ಯತ್ಸಂಭಾವ್ಯತೇ ಲೋಕೇ ಯದ್ಯತ್ಸಾಧನಕಲ್ಮಷಂ ।
ಯದ್ಯಂತರಹಿತಂ ಬ್ರಹ್ಮಭಾವನಂ ಚಿತ್ತನಿರ್ಮಿತಂ ॥೧೩॥

---

ಬ್ರಹ್ಮವಸ್ತುವು ಎಲ್ಲ ಸಂಕಲ್ಪಗಳ ಸ್ವರೂಪವು. ಎಲ್ಲ ವಸ್ತುಗಳ ರೂಪವು. ತತ್ವಜ್ಞಾನರೂಪವು, ಓಂಕಾರಸ್ವರೂಪವು, ಸುಖರೂಪವು, ಜಯರೂಪವು. ॥೯॥

ದ್ವೈತಾದ್ವೈತ (ಭೇದಾಭೇದ)ಗಳು, ಸದಾ ದ್ವೈತ, (ಭೇದ) ಮಾನ-ಅವಮಾನಗಳು, ಇವೆಲ್ಲವೂ ಇಲ್ಲವೇ ಇಲ್ಲ. ಸರ್ವವೂ ಚೈತನ್ಯಸ್ವರೂಪವಾಗಿರುವುದು. ಚೈತನ್ಯಕ್ಕೆ ಹೊರತಾದುದು ಬೇರೆ ಯಾವುದೂ ಇರುವುದಿಲ್ಲ. ॥೧೦॥

ಆತ್ಮಾನಂದವೂ ಬ್ರಹ್ಮ, ವಿಜ್ಞಾನವೂ ಬ್ರಹ್ಮ, ಜೀವನೂ ಬ್ರಹ್ಮ, ಈಶ್ವರನೂ ಬ್ರಹ್ಮನೇ, ಬ್ರಹ್ಮವಸ್ತುವಿನ ಹೊರತು ಬೇರೆ ಏನೂ ಇಲ್ಲ. ॥೧೧॥

ಇದು, ಇವನು, ಅದು, ಅವನು—ಎಂಬ ವ್ಯವಹಾರಗಳೂ, ಇಷ್ಟಾನಿಷ್ಟ ವಿಮರ್ಶೆಗಳೂ ಇವಾವುವೂ ಇಲ್ಲ. ಚೈತನ್ಯವೊಂದೇ ಇರುವುದು. ॥೧೨॥

ಲೋಕದಲ್ಲಿ ನಾವು ಊಹಿಸಲ್ಪಡುವುದು, ಸಾಧನವಾಗಿ ಉಪಯೋಗಿಸುವುದು, ಮನಸ್ಸಿನಲ್ಲಿ ಮಾಡುವ ಬ್ರಹ್ಮಭಾವನೆ, ಇವೆಲ್ಲವೂ ಚೈತನ್ಯರೂಪವೇ ವಿನಾ ಬೇರೆಯಲ್ಲ, ಬೇರೆಯಿಲ್ಲ. ॥೧೩॥

ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ।
ಸ್ಥೂಲದೇಹೋಽಹಮೇವಾತ್ರ ಸೂಕ್ಷ್ಮದೇಹೋಽಹಮೇವ ಹಿ ॥೧೪॥

ಬುದ್ಧೇರ್ಭೇದಂ ಮನೋಭೇದಂ ಅಹಂಕಾರಂ ಜಡಂ ಚ ತತ್ ।
ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ॥೧೫॥

ಶ್ರವಣಂ ಮನನಂ ಚೈವ ಸಾಕ್ಷಾತ್ಕಾರವಿಚಾರಣಂ ।
ಆತ್ಮೈವಾಹಂ ಪರಂ ಚೈವ ನಾಹಂ ಸೋಽಹಮಯಂ ಸ್ವಯಂ ॥೧೬॥

ಸರ್ವಂ ಚೈತನ್ಯಮಾತ್ರತ್ವಾನ್ನಾನ್ಯತ್ಕಿಂಚನ ವಿದ್ಯತೇ ।
ಬ್ರಹ್ಮೈವ ಸರ್ವಮೇವೇದಂ ಬ್ರಹ್ಮೈವ ಪರಮಂ ಪದಂ ॥೧೭॥

ಬ್ರಹ್ಮೈವ ಕಾರಣಂ ಕಾರ್ಯಂ ಬ್ರಹ್ಮೈವ ಜಗತಾಂ ಜಯಃ ।
ಬ್ರಹ್ಮೈವ ಸರ್ವಂ ಚೈತನ್ಯಂ ಬ್ರಹ್ಮೈವ ಮನಸಾಯತೇ ॥೧೮॥

ಬ್ರಹ್ಮೈವ ಜೀವವದ್ಭಾತಿ ಬ್ರಹ್ಮೈವ ಜ್ಞಾನಮಾತ್ರಕಂ ।
ಬ್ರಹ್ಮೈವ ಚಿತ್ತವದ್ಭಾತಿ ಬ್ರಹ್ಮೈವ ಚ ಹರೀಯತೇ ॥೧೯॥

---

ಸ್ಥೂಲದೇಹ, ಸೂಕ್ಷ್ಮದೇಹ, ಬುದ್ಧಿಯ ಭೇದಗಳು, ಮನೋಭೇದ, ಅಹಂಕಾರ ಇವೆಲ್ಲವೂ ಸಹ ಇಲ್ಲವೇ ಇಲ್ಲ. ಚೈತನ್ಯವೊಂದನ್ನು ಹೊರತು ಬೇರೆ ವಸ್ತುವೇ ಇಲ್ಲ. ॥೧೪-೧೫॥

ಶ್ರವಣಮನನನಿದಿಧ್ಯಾಸನಸಾಕ್ಷಾತ್ಕಾರಗಳು, ನಾನು, ಪರನು, ಇವನು, ತಾನು, ಆ ನಾನು, ನಾನಲ್ಲ—ಎಂಬ ವ್ಯವಹಾರಗಳು ಇವೆಲ್ಲವೂ ಇಲ್ಲವೇ ಇಲ್ಲ. ಬ್ರಹ್ಮವಸ್ತುವಿನ ಹೊರತು ಬೇರೆ ಪ್ರಪಂಚವಿಲ್ಲ. ಬ್ರಹ್ಮವಸ್ತುವಿನ ಹೊರತು ಬೇರೆ ಏನೂ ಇಲ್ಲ. ॥೧೬॥

ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ಬ್ರಹ್ಮವಸ್ತುವೇ ಪರಮಪದವು, ಬ್ರಹ್ಮವಸ್ತುವೇ ಜಯವು. ಎಲ್ಲ ಚೈತನ್ಯವೂ ಬ್ರಹ್ಮವಸ್ತುವೇ. ಮನಸ್ಸು ಬ್ರಹ್ಮವಸ್ತುವೇ. ॥೧೭-೧೮॥

ಬ್ರಹ್ಮವಸ್ತುವೇ ಜೀವನಂತೆ ತೋರುವುದು, ಜ್ಞಾನದಂತೆ ಪ್ರಕಾಶಿಸುವುದು, ಚಿತ್ತದಂತೆ ನಿಶ್ಚಯಿಸುವುದು, ಹರಿಯಂತೆ ಬೆಳಗುವುದು. ॥೧೯॥

ಬ್ರಹ್ಮೈವ ಶಿವವದ್ಭಾತಿ ಬ್ರಹ್ಮೈವ ಪ್ರಿಯವಾತ್ಮನಃ ।
ಬ್ರಹ್ಮೈವ ಶಾಂತಿವದ್ಭಾತಿ ಬ್ರಹ್ಮಣೋನ್ಯನ್ನ ಕಿಂಚನ ॥೨೦॥

ನಾಹಂ ನ ಚಾನ್ಯನ್ನೈವಾನ್ಯನ್ನೋತ್ಪನ್ನಂ ಚ ಪರಾತ್ಪರಂ ।
ನ ಚೇದಂ ನ ಚ ಶಾಸ್ತ್ರಾರ್ಥಂ ನ ಮೀಮಾಂಸಂ ನ ಚೋದ್ಭವಂ॥೨೧॥

ನ ಲಕ್ಷಣಂ ನ ವೇದಾದಿ ನಾಪಿ ಚಿತ್ತಂ ನಮೇ ಮನಃ ।
ನ ಮೇ ನಾಯಂ ನೇದಮಿದಂ ನ ಬುದ್ಧಿರ್ನಿಶ್ಚಯಂ ಸದಾ ॥೨೨॥

ಕದಾಚಿದಪಿ ನಾಸ್ತ್ಯೇವ ಸತ್ಯಂ ಸತ್ಯಂ ನ ಕಿಂಚ ನ ।
ನೈಕಮಾತ್ರಂ ನಚಾಯಂ ವಾ ನಾಂತರಂ ನ ಬಹಿರ್ನಹಿ ॥೨೩॥

ಈಷನ್ಮಾತ್ರಂ ಚ ನದ್ವೈತಂ ನಜನ್ಯಂ ನಚದೃಶ್ಯಕಂ ।
ನ ಭಾವನಂ ನ ಸ್ಮರಣಂ ನ ವಿಸ್ಮರಣಮಣ್ವಪಿ ॥೨೪॥

---

ಬ್ರಹ್ಮನೇ ಶಿವನಂತೆ ತೋರುವನು, ಬ್ರಹ್ಮನೇ ಅತಿ ಪ್ರಿಯವಸ್ತುವಾಗಿ ಗೋಚರಿಸುವನು, ಬ್ರಹ್ಮನೇ ಶಾಂತಿಯಂತೆ ಪ್ರಸರಿಸುವನು, ಬ್ರಹ್ಮನ ಹೊರತು ಜಗತ್ತಿನಲ್ಲಿ ಬೇರೆ ಯಾವ ವಸ್ತುವೂ ಇರುವುದಿಲ್ಲ. ||೨೦||

ನಾನು ಇಲ್ಲ, ಬೇರೆಯದೂ ಇಲ್ಲ, ಉತ್ಪತ್ತಿಯಿಲ್ಲ, ಪರಮೇಶ್ವರನಿಲ್ಲ, ಶಾಸ್ತ್ರಾರ್ಥವಿಲ್ಲ, ಶಾಸ್ತ್ರವಿಮರ್ಶೆಯಿಲ್ಲ, ಮೀಮಾಂಸೆಯಿಲ್ಲ, ಲಕ್ಷಣವಿಲ್ಲ, ವೇದಾದಿಗಳಿಲ್ಲ, ಚಿತ್ತವಿಲ್ಲ, ಮನವಿಲ್ಲ, " ನನ್ನದು, ಇವನು, ಇದು, ನನ್ನದಲ್ಲ, ಇವನಲ್ಲ, ಇದಲ್ಲ " ಎಂಬ ಮೊದಲಾದ ವ್ಯವಹಾರಗಳೂ ಇಲ್ಲ. ಬುದ್ಧಿಯಿಲ್ಲ, ನಿಶ್ಚಯವಿಲ್ಲ, ಸಂಶಯವಿಲ್ಲ, ಬ್ರಹ್ಮವಸ್ತುವಿನ ಹೊರತು ಬೇರೆ ಏನೂ ಕೂಡ ಯಾವಾಗಲೂ ಇಲ್ಲವೇ ಇಲ್ಲ, ಇದು ಸತ್ಯವು. ||೨೧-೨೨||

ಒಂದು ಎನ್ನುವುದಿಲ್ಲ, ಎರಡು ಎನ್ನುವುದೂ ಇಲ್ಲ. ಒಳಗು ಹೊರಗುಗಳಿಲ್ಲ. ಕಮ್ಮಿ ಹೆಚ್ಚುಗಳಿಲ್ಲ ಭೇದಾಭೇದಗಳಿಲ್ಲ, ಕಾರ್ಯಕಾರಣಗಳಿಲ್ಲ, ದೃಶ್ಯದ್ರಷ್ಟೃಗಳಿಲ್ಲ, ಭಾವನೆ ಸ್ಮರಣೆಗಳಿಲ್ಲ, ವಿಸ್ಮರಣ (ಮರೆವು)ವೂ ಇಲ್ಲ. ||೨೩-೨೪||

ನ ಕಾಲದೇಶಕಲನಂ ನ ಸಂಕಲ್ಪಂ ನ ವೇದನಂ ।
ನ ವಿಜ್ಞಾನಂ ನ ದೇವಾನ್ಯಂ ನ ವೇದೋಹಂ ನ ಸಂಸೃತಿಃ ॥೨೫॥

ನ ಮೇ ದುಃಖಂ ನ ಮೇ ಮೋಕ್ಷಂ ನ ಗತಿರ್ನ ಚ ದುರ್ಗತಿಃ ।
ನಾತ್ಮಾ ನಾಹಂ ನ ಜೀವೋಹಂ ನ ಕೂಟಸ್ಥೋ ನ ಜಾಯತೇ ॥೨೬॥

ನ ದೇಹೋಹಂ ನ ಚ ಸ್ತ್ರೋತ್ರಂ ನ ತ್ವಗಿಂದ್ರಿಯದೇವತಾ ।
ಸರ್ವಂ ಚೈತನ್ಯಮಾತ್ರತ್ವಾತ್ಸರ್ವಂ ನಾಸ್ತ್ಯೇವ ಸರ್ವದಾ ॥೨೭॥

ಅಖಂಡಾಕಾರರೂಪತ್ವಾತ್ಸರ್ವಂ ನಾಸ್ತ್ಯೇವ ಸರ್ವದಾ ।
ಹುಂಕಾರಸ್ಯಾವಕಾಶೋ ವಾ ಹುಂಕಾರಜನನಂ ಚ ವಾ ॥೨೮॥

ನಾಸ್ತಿ ನಾಸ್ತ್ಯೇವ ನಾಸ್ತ್ಯೇವ ನಾಸ್ತಿ ನಾಸ್ತಿ ಕದಾಚನ ।
ಅನ್ಯತ್ಪದಾರ್ಥಮಲ್ಪಂ ವಾ ಅನ್ಯದೇವಾನ್ಯಭಾಷಣಂ ॥೨೯॥

---

ಕಾಲದೇಶಗಳಿಲ್ಲ, ಸಂಕಲ್ಪವೇದನಗಳಿಲ್ಲ, ವಿಜ್ಞಾನವಿಲ್ಲ, ದೇವತೆಗಳಿಲ್ಲ, ವೇದಗಳಿಲ್ಲ, ಸಂಸಾರವಿಲ್ಲ. ॥೨೫॥

ನನಗೆ ದುಃಖವು ಇಲ್ಲ, ನನಗೆ ಮುಕ್ತಿಯು ಇಲ್ಲ, ನನಗೆ ಗತಿಯು ಇಲ್ಲ, ದುರ್ಗತಿಯು ಇಲ್ಲ. ನನಗೆ ಆತ್ಮನಿಲ್ಲ, ಜೀವನು ನಾನಲ್ಲ, ನಾನು ಕೂಟಸ್ಥನು ಅಲ್ಲ. ಜನನವು ನನಗಿರುವುದಿಲ್ಲ. ೨೬॥

ದೇಹವು ನಾನಲ್ಲ, ಸ್ತುತಿಯು ನನಗಿರುವುದಿಲ್ಲ. ತ್ವಗಿಂದ್ರಿಯಾದಿ ಯಾವ ಇಂದ್ರಿಯಗಳೂ ನನಗಿರುವುದಿಲ್ಲ. ನಾನು ಕೇವಲ ಚೈತನ್ಯಸ್ವರೂಪನಾಗಿರುವೆನು. ಈ ಜಗತ್ತಿನಲ್ಲಿ ಚೈತನ್ಯಸ್ವರೂಪವನ್ನು ಬಿಟ್ಟು ಏನೂ ಇಲ್ಲ. ॥೨೭॥

ಅಖಂಡಾಕಾರರೂಪವಾದ ಪರಮಾತ್ಮನ ಹೊರತು ಬೇರೆ ಏನೂ ಇಲ್ಲ. ಹುಂಕಾರಕ್ಕೆ ಅವಕಾಶವೇ ಇಲ್ಲ, ಹುಂಕಾರಕಾರಣವೂ ಇಲ್ಲ. ॥೨೮॥

ಆತ್ಮನ ಹೊರತು ದೊಡ್ಡದಾಗಲೀ ಚಿಕ್ಕದಾಗಲೀ ಯಾವ ವಸ್ತುವೂ ಇಲ್ಲ. ಬೇರೆಯಾದ ವಸ್ತುಗಳ ಭಾಷಣವೂ ಇಲ್ಲ. ॥೨೯॥

ಆತ್ಮನೋಽನ್ಯದಸತ್ಯಂ ವಾ ಸತ್ಯಂ ವಾ ಭ್ರಾಂತಿರೇವ ವಾ ।
ನಾಸ್ತಿ ನಾಸ್ತ್ಯೇವ ನಾಸ್ತ್ಯೇವ ನಾಸ್ತಿಶಬ್ದೋಽಪಿ ನಾಸ್ತಿಹಿ ॥೩೦॥

ಸರ್ವಂ ಚೈತನ್ಯಮಾತ್ರತ್ವಾತ್ಸರ್ವಂ ನಾಸ್ತ್ಯೇವ ಸರ್ವದಾ ।
ಸರ್ವಂ ಬ್ರಹ್ಮ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೩೧॥

ವಾಚ್ಯಂ ಚ ವಾಚಕಂ ಸರ್ವಂ ವಕ್ತಾ ಚ ತ್ರಿಪುಟಿದ್ವಯಂ ।
ಜ್ಞಾತಾ ಜ್ಞಾನಂ ಜ್ಞೇಯಭೇದಂ ಮಾತೃಮಾನಮಿತಿ ಪ್ರಿಯಂ ॥೩೨॥

ಯದ್ಯಚ್ಛಾಸ್ತ್ರೇಣ ನಿರ್ಣೀತಂ ಯದ್ಯದ್ವೇದೇಷು ನಿಶ್ಚಿತಂ ।
ಸರ್ವಂ ನಾಸ್ತಿ ಸದಾ ನಾಸ್ತಿ ಸದಾ ನಾಸ್ತಿ ಸದಾ ನಹಿ ॥೩೩॥

ಪರಾಪರಮತೀತಂ ಚ ಅತೀತೋಽಹಮವೇದನಂ ॥೩೪॥

ಗುರೂಪದೇಶಶ್ಚ ಗುರುರ್ಗುರುಂ ವಕ್ಷ್ಯೇ ನ ಕಸ್ಯಚಿತ್ ॥೩೫॥

ಗುರುರೂಪಾ ಗುರುಶ್ರದ್ಧಾ ಸದಾ ನಾಸ್ತಿ ಗುರುಃ ಸ್ವಯಂ ।
ಆತ್ಮೈವ ಗುರುರಾತ್ಮೈವ ಅನ್ಯಾಭಾವಾನ್ನ ಸಂಶಯಃ ॥೩೬॥

---

ಆತ್ಮನ ಹೊರತಾಗಿ ಸತ್ಯವಾಗಲೀ ಅಸತ್ಯವಾಗಲೀ ಭ್ರಾಂತಿಯಾಗಲೀ, ಇಲ್ಲವೇ ಇಲ್ಲ. ಇಲ್ಲ-ಎಂಬ ಶಬ್ದವೂ ಇಲ್ಲ, ನಾಸ್ತಿ-ಎಂಬ ಶಬ್ದವೂ ಇಲ್ಲ. ॥೩೦॥

ಚೈತನ್ಯ ವಸ್ತುವಿನ ಹೊರತು ಬೇರಾವ ವಸ್ತುವೂ ಇಲ್ಲ. ಬ್ರಹ್ಮವೇ ಚೈತನ್ಯವು. ನಾನೇ ಆ ಚೈತನ್ಯ ಬ್ರಹ್ಮವಸ್ತುವು, ಇದರಲ್ಲಿ ಸಂದೇಹವಿಲ್ಲ. ॥೩೧॥

ವಾಚ್ಯ, ವಾಚಕ, ವಕ್ತೃಗಳೆಂಬ ಭೇದಗಳೂ, ಜ್ಞಾತೃಜ್ಞಾನಜ್ಞೇಯಗಳೆಂಬ ಭೇದಗಳೂ, ಮಾತೃಮಾನಮೇಯಗಳೆಂಬ ಭೇದಗಳೂ ಇಲ್ಲವು. (ಅಳೆಯುವವನು, ಅಳತೆ, ಅಳೆಯಲ್ಪಡುವ ವಸ್ತು) ॥೩೨॥

ಶಾಸ್ತ್ರದಿಂದ ನಿರ್ಣಯಿಸಲ್ಪಟ್ಟವು, ನಿರ್ಣಯಿಸಲ್ಪಡದವುಗಳೆನ್ನುವ ಯಾವ ವಿಷಯಗಳೂ ಇಲ್ಲವೇ ಇಲ್ಲ. ॥೩೩॥

ನಾನು ಪರಾಪರವಸ್ತುವು, ಇಂದ್ರಿಯಗಳಿಗೆ ಅಗೋಚರನು ನಾನು, ಗುರೂಪದೇಶವೂ ಗುರುವೂ ಬೇರೆ ಇಲ್ಲವು, ಎಲ್ಲವೂ ನಾನೇ ವಿನಾ ಬೇರೆಯಿಲ್ಲ.॥೩೪-೩೫॥

ಗುರುವಿನ ಸ್ವರೂಪವಾಗಲೀ, ಗುರುವಿನಲ್ಲಿರಬೇಕಾದ ಶ್ರದ್ಧೆಯಾಗಲೀ, ಗುರುವಾಗಲೀ ಎಲ್ಲವೂ ಆತ್ಮವೇ, ಬೇರೆ ಏನೂ ಇಲ್ಲ. ॥೩೬॥

ಆತ್ಮನಃ ಶುಭಮಾತ್ಮೈವ ಅನ್ಯಾಭಾವಾನ್ನ ಸಂಶಯಃ ॥೩೭॥

ಆತ್ಮನೋ ಮೋಹಮಾತ್ಮೈವ ಆತ್ಮಾನ್ನಾಸ್ತಿ ನ ಕಿಂಚನ ।
ಆತ್ಮನಃ ಸುಖಮಾತ್ಮೈವ ಅನ್ಯನ್ನಾಸ್ತಿ ನ ಸಂಶಯಃ ॥೩೮॥

ಆತ್ಮನ್ಯೇವಾತ್ಮನಃ ಶಕ್ತಿರಾತ್ಮನ್ಯೇವಾತ್ಮನಃ ಪ್ರಿಯಃ ।
ಆತ್ಮನ್ಯೇವಾತ್ಮನಃ ಸ್ನಾನಮಾತ್ಮನ್ಯೇವಾತ್ಮನೋ ರತಿಃ ॥೩೯॥

ಆತ್ಮಜ್ಞಾನಂ ಪರಂ ಶ್ರೇಯಃ ಆತ್ಮಜ್ಞಾನಂ ಸುದುರ್ಲಭಂ ।
ಆತ್ಮಜ್ಞಾನಂ ಪರಂ ಬ್ರಹ್ಮ ಆತ್ಮಜ್ಞಾನಂ ಸುಖಾತ್ಸುಖಂ ॥೪೦॥

ಆತ್ಮಜ್ಞಾನಾತ್ಪರಂ ನಾಸ್ತಿ ಆತ್ಮಜ್ಞಾನಾತ್ಸ್ಮೃತಿರ್ನಹಿ ॥೪೧॥

ಬ್ರಹ್ಮೈವಾತ್ಮಾ ನ ಸಂದೇಹೋ ಆತ್ಮೈವ ಬ್ರಹ್ಮಣಃ ಸ್ವಯಂ ।
ಸ್ವಯಮೇವ ಹಿ ಸರ್ವತ್ರ ಸ್ವಯಮೇವ ಹಿ ಚಿನ್ಮಯಃ ॥೪೨॥

ಸ್ವಯಮೇವ ಚಿದಾಕಾಶಂ ಸ್ವಯಮೇವ ನಿರಂತರಂ ।
ಸ್ವಯಮೇವ ಚ ನಾನಾತ್ಮಾ ಸ್ವಯಮೇವ ನ ಚಾಪರಃ ॥೪೩॥

---

ಆತ್ಮನೇ ಆತ್ಮನಿಗೆ ಶುಭವು, ಆತ್ಮನೇ ಆತ್ಮನಿಗೆ ಮೋಹವು, ಆತ್ಮನೇ ಆತ್ಮನಿಗೆ ಭ್ರಾಂತಿಯು, ಆತ್ಮನೇ ಆತ್ಮನ ಸುಖವು, ಆತ್ಮನ ಹೊರತು ಬೇರಾವ ವಸ್ತುವೂ ಇಲ್ಲ. ॥೩೭-೩೮॥

ಆತ್ಮನಲ್ಲಿಯೇ ಆತ್ಮನ ಶಕ್ತಿಯಿರುವುದು, ಆತ್ಮನ ಪ್ರೀತಿಯಿರುವುದು, ಆತ್ಮನಲ್ಲಿಯೇ ಆತ್ಮನ ಸ್ನಾನವು, ಆತ್ಮನಲ್ಲಿಯೇ ಆತ್ಮನಿಗೆ ಕ್ರೀಡೆಯು. ॥೩೯॥

ಆತ್ಮಜ್ಞಾನವು ಬಹು ದುರ್ಲಭವಾದುದು, ಆತ್ಮಜ್ಞಾನವೇ ಪರಮಶ್ರೇಯಸ್ಸು, ಆತ್ಮಜ್ಞಾನವೇ ಪರಮಸುಖವು. ॥೪೦॥

ಆತ್ಮಜ್ಞಾನಕ್ಕಿಂತಲೂ ಬೇರೆ ಏನೂ ಇಲ್ಲ, ಆತ್ಮಜ್ಞಾನವೇ ಆತ್ಮನು, ಆತ್ಮನೇ ಬ್ರಹ್ಮನು, ಬ್ರಹ್ಮನೇ ಚೈತನ್ಯಮೂರ್ತಿಯು. ॥೪೧-೪೨॥

ಜ್ಞಾನಾಕಾಶಸ್ವರೂಪನು ಆತ್ಮ, ಸರ್ವಾಂತರ್ಯಾಮಿಯು ಆತ್ಮ, ನಾನಾ ಜೀವರೂಪದಿಂದಿರುವವನು ಆತ್ಮ, ಆತ್ಮನ ಹೊರತು ಬೇರೆ ಯಾವನೂ ಇಲ್ಲ. ॥೪೩॥

ಸ್ವಯಮೇವ ಗುಣಾತೀತಃ ಸ್ವಯಮೇವ ಮಹತ್ಸುಖಂ ।
ಸ್ವಯಮೇವ ಹಿ ಶಾಂತಾತ್ಮಾ ಸ್ವಯಮೇವ ಹಿ ನಿಷ್ಕಲಃ ॥೪೪॥

ಸ್ವಯಮೇವ ಚಿದಾನಂದಃ ಸ್ವಯಮೇವ ಮಹತ್ಪ್ರಭುಃ ।
ಸ್ವಯಮೇವ ಮಹಾಸಾಕ್ಷೀ ಸ್ವಯಮೇವ ಸದಾಶಿವಃ ॥೪೫॥

ಸ್ವಯಮೇವ ಹರಿಃ ಸಾಕ್ಷಾತ್ಸ್ವಯಮೇವ ಪ್ರಜಾಪತಿಃ ।
ಸ್ವಯಮೇವ ಪರಂ ಬ್ರಹ್ಮ ಬ್ರಹ್ಮ ಏವ ಸ್ವಯಂ ಸದಾ ॥೪೬॥

ಸರ್ವಂ ಬ್ರಹ್ಮ ಸ್ವಯಂ ಬ್ರಹ್ಮ ಸ್ವಯಂ ಬ್ರಹ್ಮ ನ ಸಂಶಯಃ ।
ದೃಢನಿಶ್ಚಯಮೇವ ತ್ವಂ ಸರ್ವಥಾ ಕುರು ಸರ್ವದಾ ॥೪೭॥

ವಿಚಾರಯನ್ ಸ್ವಯಂ ಬ್ರಹ್ಮ ಬ್ರಹ್ಮಮಾತ್ರಂ ಸ್ವಯಂ ಭವೇತ್ ।
ಏತದೇವ ಪರಂ ಬ್ರಹ್ಮ ಅಹಂ ಬ್ರಹ್ಮೇತಿ ನಿಶ್ಚಯಂ ॥೪೮॥

ಏತದೇವ ಹಿ ನಿರ್ವಾಣಮಹಂ ಬ್ರಹ್ಮೇತಿ ನಿಶ್ಚಯಂ ।
ಏತದೇವ ಕೃತಾರ್ಥತ್ವಮೇಷ ಏವ ಸುಖಂ ಸದಾ ॥೪೯॥

---

ಆತ್ಮನು ನಿರ್ಗುಣನು, ಸುಖಸ್ವರೂಪನು, ಶಾಂತಸ್ವರೂಪನು, ನಿರವಯುವನು, ನಿತ್ಯನು, ಆತ್ಮನ ಹೊರತು ಬೇರೆ ಯಾವುದೂ ಇಲ್ಲ. ॥೪೪॥

ಆತ್ಮನು ಜ್ಞಾನಾನಂದಮೂರ್ತಿಯು, ಆತ್ಮನೇ ಪರಮೇಶ್ವರನು, ಜಗತ್ತಿನ ಆಗುಹೋಗುಗಳಿಗೆ ಸಾಕ್ಷಿಯು, ಆತ್ಮನೇ ಸದಾಶಿವನು. ॥೪೫॥

ಆತ್ಮನೇ ಹರಿಯು, ಆತ್ಮನೇ ಚತುರ್ಮುಖಬ್ರಹ್ಮನು. ಆತ್ಮನೇ ಪರಬ್ರಹ್ಮನು, ಆತ್ಮನೇ ನಿರ್ಗುಣಬ್ರಹ್ಮವಸ್ತುವು. ॥೪೬॥

ಎಲ್ಲವೂ ಬ್ರಹ್ಮವಸ್ತು, ಆತ್ಮನೇ ಬ್ರಹ್ಮ, ಬ್ರಹ್ಮವಸ್ತುವೇ ಆತ್ಮ—ಎಂದು ದೃಢವಾಗಿ ಭಾವಿಸು, ಇದರಲ್ಲಿ ಸಂಶಯವಿಲ್ಲ. ॥೪೭॥

ಹೀಗೆ ನಾನೇ ಬ್ರಹ್ಮನೆಂದು ಭಾವಿಸುತ್ತ ಹೋದರೆ ತಾನೇ ಬ್ರಹ್ಮನಾಗುವನು. ನಾನೇ ಬ್ರಹ್ಮನೆಂಬ ನಿಶ್ಚಯವೇ ಪರಬ್ರಹ್ಮವಸ್ತು. ॥೪೮॥

ನಾನು ಬ್ರಹ್ಮನೆಂಬ ನಿಶ್ಚಯವೇ ಮುಕ್ತಿಯು, ಅದೇ ಕೃತಾರ್ಥತೆಯು, ಆನಿಶ್ಚಯವೇ ನಿತ್ಯಸುಖವು. ॥೪೯॥

ಅಹಂ ಬ್ರಹ್ಮ ಸ್ವಯಂ ಬ್ರಹ್ಮ ಅಹಂ ಬ್ರಹ್ಮೇತಿ ನಿಶ್ಚಯಂ ।
ಏತದೇವ ಅಹಂ ಬ್ರಹ್ಮ ಏತದೇವ ಮಹಾಪ್ರಜಾಃ ॥೫೦॥

ಏತದೇವ ಸದಾ ಜ್ಞಾನಂ ಸ್ವಯಂ ಬ್ರಹ್ಮ ಸ್ವಯಂ ಮಹತ್ ।
ಏತದೇವ ಅಹಂ ಬ್ರಹ್ಮ ಸದಾ ಜ್ಞಾನಂ ಸ್ವಯಂ ಮಹತ್ ॥೫೧॥

ಅಹಂ ಬ್ರಹ್ಮ ಏತದೇವ ಸ್ವಭಾವಂ ಸತತಂ ನಿಜಂ ।
ಅಹಂ ಬ್ರಹ್ಮ ಏತದೇವ ಸದಾ ನಿತ್ಯಸ್ವಯಂ ಸದಾ ॥೫೨॥

ಅಹಂ ಬ್ರಹ್ಮ ಏತದೇವ ಬಂಧನಾಶಂ ನ ಸಂಶಯಃ ।
ಅಹಂ ಬ್ರಹ್ಮ ಏತದೇವ ಸರ್ವಸಿದ್ಧಾಂತನಿಶ್ಚಯಂ ॥೫೩॥

ಏತದ್ವೇದಾಂತಸಿದ್ಧಾಂತಮಹಂ ಬ್ರಹ್ಮ ನ ಸಂಶಯಃ ।
ಸರ್ವೋಪನಿಷದಾಮರ್ಥಂ ಸರ್ವಾನಂದಮಯಂ ಜಗತ್ ॥೫೪॥

ಮಹಾವಾಕ್ಯಸ್ಯ ಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ।
ಸಾಕ್ಷಾಚ್ಛಿವಸ್ಯ ಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ॥೫೫॥

---

ನಾನೇ ಬ್ರಹ್ಮನೆಂಬ ನಿಶ್ಚಯವೇ ಬ್ರಹ್ಮಸ್ವರೂಪವು. ಅದೇ ಮಹಾ ಸಂತಾನವು, ಆ ನಿಶ್ಚಯವೇ ಬ್ರಹ್ಮಜ್ಞಾನವು, ಅದೇ ಮಹತ್ತಾದುದು. ಅದನ್ನು ಹೊರತು ಬೇರೆ ಏನೂ ಇಲ್ಲ. ॥೫೦-೫೧॥

ನಾನೇ ಬ್ರಹ್ಮನೆಂಬ ನಿಶ್ಚಯವೇ ನಾನೇ ಬ್ರಹ್ಮನೆಂಬುದು. ಅದೇ ನಿಜ ವಾದುದು, ನಿತ್ಯವಾದುದು, ಅದರ ಹೊರತು ಬೇರೇನೂ ಇಲ್ಲ. ॥೫೨॥

ನಾನು ಬ್ರಹ್ಮನೆಂಬ ನಿಶ್ಚಯವೇ ಸಂಸಾರಬಂಧನದ ನಾಶವು, ಈ ನಿಶ್ಚ ಯವೇ ಎಲ್ಲ ಸಿದ್ಧಾಂತಗಳ ನಿಶ್ಚಯವು. ॥೫೩॥

ನಾನು ಬ್ರಹ್ಮನೆಂಬ ನಿಶ್ಚಯವೇ ವೇದಾಂತಗಳ ಸಿದ್ಧಾಂತಗಳು. ಎಲ್ಲ ಉಪ ನಿಷತ್ತುಗಳ ಅರ್ಥವೂ ಅದೇ, ಆ ನಿಶ್ಚಯವೇ ಆನಂದಮಯ ಬ್ರಹ್ಮವಸ್ತುವು.॥೫೪॥

ಮಹಾವಾಕ್ಯಗಳ ಸಿದ್ಧಾಂತವೇ ನಾನು ಬ್ರಹ್ಮನೆಂಬ ನಿಶ್ಚಯವು. ಸಾಕ್ಷಾತ್ ಪರಶಿವನ ಸಿದ್ಧಾಂತವೇ ನಾನು ಬ್ರಹ್ಮನೆಂಬ ನಿಶ್ಚಯವು. ॥೫೫॥

ನಾರಾಯಣಸ್ಯ ಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ।
ಚತುರ್ಮುಖಸ್ಯ ಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ॥೫೬॥

ಋಷೀಣಾಂ ಹೃದಯಂ ಹ್ಯೇತದ್ದೇವಾನಾಮುಪದೇಶಕಂ ।
ಸರ್ವದೇಶಿಕಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ॥೫೭॥

ಯಚ್ಚ ಯಾವಚ್ಚ ಭೂತಾನಾಂ ಮಹೋಪದೇಶ ಏವ ತತ್ ।
ಅಹಂ ಬ್ರಹ್ಮ ಮಹಾಮೋಕ್ಷಂ ಪರಂ ಚೈತದಹಂ ಸ್ವಯಂ ॥೫೮॥

ಅಹಂ ಚಾನುಭವಂ ಚೈತನ್ಮಹಾಗೋಪ್ಯಮಿದಂ ಚ ತತ್ ।
ಅಹಂ ಬ್ರಹ್ಮೈತದೇವ ಸದಾ ಜ್ಞಾನಂ ಸ್ವಯಂ ಮಹತ್ ॥೫೯॥

ಮಹಾಪ್ರಕಾಶಮೇವೈತತ್ತದಹಂ ಬ್ರಹ್ಮ ಏವ ತತ್ ।
ಏತದೇವ ಮಹಾಮಂತ್ರಮೇತದೇವ ಮಹಾಜಪಂ ॥೬೦॥

ಏತದೇವ ಮಹಾಸ್ನಾನಮಹಂ ಬ್ರಹ್ಮೇತಿ ನಿಶ್ಚಯಂ ।
ಏತದೇವ ಮಹಾಗಂಗಾ ಅಹಂ ಬ್ರಹ್ಮೇತಿ ನಿಶ್ಚಯಃ ॥೬೧॥

---

ನಾನು ಬ್ರಹ್ಮನೆಂಬ ನಿಶ್ಚಯವೇ ನಾರಾಯಣನ ಸಿದ್ಧಾಂತವು, ಚತುರ್ಮುಖನ ಸಿದ್ಧಾಂತವು. ಋಷಿಗಳ ಹೃದಯಸಿದ್ಧಾಂತವೂ ಈ ನಿಶ್ಚಯವೇ. ದೇವತೆಗಳ ಉಪದೇಶವೂ ಇದೇ, ಎಲ್ಲ ಗುರುಗಳು ಉಪದೇಶಿಸುವುದೂ ಈ ಸಿದ್ಧಾಂತವನ್ನೇ. ೫೬-೫೭॥

ಎಲ್ಲ ಮಹಾಭೂತಗಳ ಉಪದೇಶವೂ ನಾನು ಬ್ರಹ್ಮನೆಂಬ ನಿಶ್ಚಯವೇ. ನಾನು ಬ್ರಹ್ಮನೆಂಬ ನಿಶ್ಚಯವೇ ಮಹಾಮುಕ್ತಿಯು. ॥೫೮॥

ನಾನು ಬ್ರಹ್ಮನೆಂಬ ಅನುಭವವೇ ಮಹಾಜ್ಞಾನವು, ಅದು ಅತಿ ರಹಸ್ಯವಾದುದು, ಅತಿ ದುರ್ಲಭವಾದುದು, ಅದೇ ಬ್ರಹ್ಮಸ್ವರೂಪವು. ॥೫೯॥

ನಾನು ಬ್ರಹ್ಮನೆಂಬ ನಿಶ್ಚಯವೇ ಮಹಾಪ್ರಕಾಶವು, ಇದೇ ಮಹಾಮಂತ್ರವು, ಇದೇ ಮಹಾಜಪವು, ಇದೇ ಬ್ರಹ್ಮಸ್ವರೂಪವು. ॥೬೦॥

ನಾನೇ ಬ್ರಹ್ಮನೆಂಬ ನಿಶ್ಚಯವೇ ಮಹಾಸ್ನಾನವು, ಈ ನಿಶ್ಚಯವೇ ಪವಿತ್ರವಾದ ದೇವಗಂಗೆಯು. ॥೬೧॥

ಏತದೇವ ಮಹಾತೀರ್ಥಮಹಂ ಬ್ರಹ್ಮೇತಿ ನಿಶ್ಚಯಂ ।
ಏತದೇವ ಮಹಾಗಂಗಾ ಅಹಂ ಬ್ರಹ್ಮೇತಿ ನಿಶ್ಚಯಃ ॥೬೨॥

ಏಷ ಏವ ಪರೋಧರ್ಮಃ ಅಹಂ ಬ್ರಹ್ಮೇತಿ ನಿಶ್ಚಯಃ ।
ಏಷ ಏವ ಮಹಾನಾಶಂ ಅಹಂ ಬ್ರಹ್ಮೇತಿ ನಿಶ್ಚಯಃ ॥೬೩॥

ಏತದೇವ ಹಿ ವಿಜ್ಞಾನಮಹಂ ಬ್ರಹ್ಮಾಸ್ಮಿ ಕೇವಲಂ ।
ಸರ್ವಸಿದ್ಧಾಂತಮೇವೈತದಹಂ ಬ್ರಹ್ಮೇತಿ ನಿಶ್ಚಯಃ ॥೬೪॥

॥ ಸೂತ ಉವಾಚ ॥

ಸನ್ಯಾಸಮ್ಯಕಶಯಾಢ್ಯಮಜ್ಞಹೃದಯಾಗೋಪೋದಹಾರ್ಯಸ್ಸ್ತ್ರಿಯೋ
ಪಶ್ಯಂತ್ಯಂಬುಜಮಿತ್ರಮಂಡಲಗತಂ ಶಂಭುಂ ಹಿರಣ್ಯಾತ್ಮಕಂ ।
ಸರ್ವತ್ರ ಪ್ರಸೃತೈಃ ಕರೈರ್ಜಗದಿದಂ ಪುಷ್ಣಾತಿ ಮುಷ್ಣಂಧನ್ಯೈಃ
ವೃಷ್ಟಂ ಚೋಷಧಿಜಾಲಮಂಬುನಿಕರೈರ್ವಿಶ್ವೋತ್ಥಭೂತಂ ಹರಃ ॥೬೫॥

---

ನಾನು ಬ್ರಹ್ಮನೆಂಬ ಬ್ರಹ್ಮಾನುಭವವೇ ಮಹಾತೀರ್ಥದಲ್ಲಿ. ಆ ತೀರ್ಥದಲ್ಲಿಯೇ ಎಲ್ಲ ಪಾಪಗಳೂ ತೊಳೆದುಹೋಗುವುವು. ಇದೇ ಮಹಾಗಂಗೆಯು.॥೬೨॥

ನಾನು ಬ್ರಹ್ಮನೆಂಬ ನಿಶ್ಚಯವೇ ಪರಮಧರ್ಮವು. ಈ ನಿಶ್ಚಯವೇ ಅನಿತ್ಯ ವಸ್ತುಗಳೆಲ್ಲವುಗಳ ನಾಶವು. ॥೬೩॥

ನಾನು ಬ್ರಹ್ಮನೆಂಬ ನಿಶ್ಚಯವೇ ಮಹಾವಿಜ್ಞಾನವು, ಇದುವೇ ವೇದಾಂತ ಶಾಸ್ತ್ರದ ಮಹಾಸಿದ್ಧಾಂತವು. ಸರ್ವಶಾಸ್ತ್ರಸಿದ್ಧಾಂತಸ್ವರೂಪವೇ ಅಹಂ ಬ್ರಹ್ಮಾಸ್ಮಿ ಎಂಬುದಾಗಿರುವುದು. ಆದುದರಿಂದ ನಾನೇ ಬ್ರಹ್ಮನೆಂಬ ಭಾವವನ್ನು ಬೆಳೆಯಿಸಿ ಕೊಂಡು ಸಚ್ಚಿದಾನಂದಸ್ವರೂಪನಾಗಬೇಕು. ಇದೇ ವೇದಾಂತಶಾಸ್ತ್ರದ ರಹಸ್ಯವು. ॥೬೪॥

ಪರಮೇಶ್ವರನು ಚಿನ್ನದ ಬಣ್ಣವುಳ್ಳವನಾಗಿ ಸೂರ್ಯರೂಪದಿಂದ ಜಗತ್ತನ್ನು ಬೆಳಗುತ್ತಾ, ತನ್ನ ಕಿರಣಗಳಿಂದ ಜಗತ್ತಿನ ಅಂಧಕಾರವನ್ನು ತೊಲಗಿಸುವನು. ಇಂತಹ ದೇವದೇವನನ್ನು ಮಹಾಮಹಾ ಮುನಿಗಳೂ, ಮೂಢರೂ, ಸ್ತ್ರೀಯರೂ ಸಹ ನೋಡುವರು. ಪ್ರಪಂಚದ ವೃಷ್ಟಿಗೂ, ಪೈರುಪಚ್ಚೆಗಳು ಬೆಳೆದು ಪ್ರಪಂಚ

ನಾರಾಯಣಸ್ಯ ಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ।
ಚತುರ್ಮುಖಸ್ಯ ಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ॥೫೬॥

ಋಷೀಣಾಂ ಹೃದಯಂ ಹ್ಯೇತದ್ದೇವಾನಾಮುಪದೇಶಕಂ ।
ಸರ್ವದೇಶಿಕಸಿದ್ಧಾಂತಮಹಂ ಬ್ರಹ್ಮೇತಿ ನಿಶ್ಚಯಂ ॥೫೭॥

ಯಚ್ಚ ಯಾವಚ್ಚ ಭೂತಾನಾಂ ಮಹೋಪದೇಶ ಏವ ತತ್ ।
ಅಹಂ ಬ್ರಹ್ಮ ಮಹಾಮೋಕ್ಷಂ ಪರಂ ಚೈತದಹಂ ಸ್ವಯಂ ॥೫೮॥

ಅಹಂ ಚಾನುಭವಂ ಚೈತನ್ಮಹಾಗೋಪ್ಯಮಿದಂ ಚ ತತ್ ।
ಅಹಂ ಬ್ರಹ್ಮೈತದೇವ ಸದಾ ಜ್ಞಾನಂ ಸ್ವಯಂ ಮಹತ್ ॥೫೯॥

ಮಹಾಪ್ರಕಾಶಮೇವೈತತ್ತದಹಂ ಬ್ರಹ್ಮ ಏವ ತತ್ ।
ಏತದೇವ ಮಹಾಮಂತ್ರಮೇತದೇವ ಮಹಾಜಪಂ ॥೬೦॥

ಏತದೇವ ಮಹಾಸ್ನಾನಮಹಂ ಬ್ರಹ್ಮೇತಿ ನಿಶ್ಚಯಂ ।
ಏತದೇವ ಮಹಾಗಂಗಾ ಅಹಂ ಬ್ರಹ್ಮೇತಿ ನಿಶ್ಚಯಃ ॥೬೧॥

---

ನಾನು ಬ್ರಹ್ಮನೆಂಬ ನಿಶ್ಚಯವೇ ನಾರಾಯಣನ ಸಿದ್ಧಾಂತವು, ಚತುರ್ಮುಖನ ಸಿದ್ಧಾಂತವು. ಋಷಿಗಳ ಹೃದಯಸಿದ್ಧಾಂತವೂ ಈ ನಿಶ್ಚಯವೇ. ದೇವತೆಗಳ ಉಪದೇಶವೂ ಇದೇ, ಎಲ್ಲ ಗುರುಗಳು ಉಪದೇಶಿಸುವುದೂ ಈ ಸಿದ್ಧಾಂತವನ್ನೇ. ೫೬-೫೭॥

ಎಲ್ಲ ಮಹಾಭೂತಗಳ ಉಪದೇಶವೂ ನಾನು ಬ್ರಹ್ಮನೆಂಬ ನಿಶ್ಚಯವೇ. ನಾನು ಬ್ರಹ್ಮನೆಂಬ ನಿಶ್ಚಯವೇ ಮಹಾಮುಕ್ತಿಯು. ॥೫೮॥

ನಾನು ಬ್ರಹ್ಮನೆಂಬ ಅನುಭವವೇ ಮಹಾಜ್ಞಾನವು, ಅದು ಅತಿ ರಹಸ್ಯವಾದುದು, ಅತಿ ದುರ್ಲಭವಾದುದು, ಅದೇ ಬ್ರಹ್ಮಸ್ವರೂಪವು. ॥೫೯॥

ನಾನು ಬ್ರಹ್ಮನೆಂಬ ನಿಶ್ಚಯವೇ ಮಹಾಪ್ರಕಾಶವು, ಇದೇ ಮಹಾಮಂತ್ರವು, ಇದೇ ಮಹಾಜಪವು, ಇದೇ ಬ್ರಹ್ಮಸ್ವರೂಪವು. ॥೬೦॥

ನಾನೇ ಬ್ರಹ್ಮನೆಂಬ ನಿಶ್ಚಯವೇ ಮಹಾಸ್ನಾನವು, ಈ ನಿಶ್ಚಯವೇ ಪವಿತ್ರವಾದ ದೇವಗಂಗೆಯು. ॥೬೧॥

ಏತದೇವ ಮಹಾತೀರ್ಥಮಹಂ ಬ್ರಹ್ಮೇತಿ ನಿಶ್ಚಯಂ।
ಏತದೇವ ಮಹಾಗಂಗಾ ಅಹಂ ಬ್ರಹ್ಮೇತಿ ನಿಶ್ಚಯಃ ॥೬೨॥

ಏಷ ಏವ ಪರೋಧರ್ಮೋ ಅಹಂ ಬ್ರಹ್ಮೇತಿ ನಿಶ್ಚಯಃ।
ಏಷ ಏವ ಮಹಾನಾಶಂ ಅಹಂ ಬ್ರಹ್ಮೇತಿ ನಿಶ್ಚಯಃ ॥೬೩॥

ಏತದೇವ ಹಿ ವಿಜ್ಞಾನಮಹಂ ಬ್ರಹ್ಮಾಸ್ಮಿ ಕೇವಲಂ।
ಸರ್ವಸಿದ್ಧಾಂತಮೇವೈತದಹಂ ಬ್ರಹ್ಮೇತಿ ನಿಶ್ಚಯಃ ॥೬೪॥

॥ ಸೂತ ಉವಾಚ ॥

ಸನ್ಯಾಸವ್ಯಕಶಯಾದ್ಯವಜ್ಞ ಹೃದಯಾಗೋಪೋದಹಾರ್ಯಸ್ಸಿಯೋ
ಪಶ್ಯಂತ್ಯಂಬುಜಮಿತ್ರಮಂಡಲಗತಂ ಶಂಭುಂ ಹಿರಣ್ಯಾತ್ಮಕಂ।
ಸರ್ವತ್ರ ಪ್ರಸೃತೈಃ ಕರೈರ್ಜಗದಿದಂ ಪುಷ್ಣಾತಿ ಮುಷ್ಣಂಧನೈಃ
ವೃಷ್ಟಿಂ ಚೋಷಧಿಜಾಲಮಂಬುನಿಕರೈರ್ನಿಶ್ಯೋತ್ಥಭೂತಂ ಹರಃ ॥೬೫॥

---

ನಾನು ಬ್ರಹ್ಮನೆಂಬ ಬ್ರಹ್ಮಾನುಭವವೇ ಮಹಾತೀರ್ಥದಲ್ಲಿ. ಆ ತೀರ್ಥದಲ್ಲಿಯೇ ಎಲ್ಲ ಪಾಪಗಳೂ ತೊಳೆದುಹೋಗುವುವು. ಇದೇ ಮಹಾಗಂಗೆಯು.॥೬೨॥

ನಾನು ಬ್ರಹ್ಮನೆಂಬ ನಿಶ್ಚಯವೇ ಪರಮಧರ್ಮವು. ಈ ನಿಶ್ಚಯವೇ ಅನಿತ್ಯ ವಸ್ತುಗಳೆಲ್ಲವುಗಳ ನಾಶವು. ॥೬೩॥

ನಾನು ಬ್ರಹ್ಮನೆಂಬ ನಿಶ್ಚಯವೇ ಮಹಾವಿಜ್ಞಾನವು, ಇದುವೇ ವೇದಾಂತ ಶಾಸ್ತ್ರದ ಮಹಾಸಿದ್ಧಾಂತವು. ಸರ್ವಶಾಸ್ತ್ರಸಿದ್ಧಾಂತಸ್ವರೂಪವೇ ಅಹಂ ಬ್ರಹ್ಮಾಸ್ಮಿ ಎಂಬುದಾಗಿರುವುದು. ಆದುದರಿಂದ ನಾನೇ ಬ್ರಹ್ಮನೆಂಬ ಭಾವವನ್ನು ಬೆಳೆಯಿಸಿಕೊಂಡು ಸಚ್ಚಿದಾನಂದಸ್ವರೂಪನಾಗಬೇಕು. ಇದೇ ವೇದಾಂತಶಾಸ್ತ್ರದ ರಹಸ್ಯವು. ॥೬೪॥

ಪರಮೇಶ್ವರನು ಚಿನ್ನದ ಬಣ್ಣವುಳ್ಳವನಾಗಿ ಸೂರ್ಯರೂಪದಿಂದ ಜಗತ್ತನ್ನು ಬೆಳಗುತ್ತಾ, ತನ್ನ ಕಿರಣಗಳಿಂದ ಜಗತ್ತಿನ ಅಂಧಕಾರವನ್ನು ತೊಲಗಿಸುವನು. ಇಂತಹ ದೇವದೇವನನ್ನು ಮಹಾಮಹಾ ಮುನಿಗಳೂ, ಮೂಢರೂ, ಸ್ತ್ರೀಯರೂ ಸಹ ನೋಡುವರು. ಪ್ರಪಂಚದ ವೃಷ್ಟಿಗೂ, ಪೈರುಪಚ್ಚೆಗಳು ಬೆಳೆದು ಪ್ರಪಂಚ

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಸಪ್ತತ್ರಿಂಶೋಽಧ್ಯಾಯಃ

---

ಸುಭಿಕ್ಷವಾಗಿರುವುದಕ್ಕೂ ಪರಶಿವನೇ ಮೂಲಕಾರಣನು ಎಂದು ಸೂತಮಹರ್ಷಿಗಳು ಇತರ ಋಷಿಜನರಿಗೆ ತಿಳಿಯಪಡಿಸಿದರು. ||೬೫||

ಹೀಗೆಂದು ಋಭುಮಹಾಮುನಿಯು ನಿದಾಘಮಹರ್ಷಿಗೆ ಪರಶಿವಸ್ವರೂಪವನ್ನು ವಿವರಿಸಿ ತಿಳಿಸಿದನು.

ಇಲ್ಲಿಗೆ ಶ್ರೀ ಶಿವರಹಸ್ಯದ ಆರನೆಯ ಅಂಶದಲ್ಲಿ ಮೂವತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಅಷ್ಟತ್ರಿಂಶೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇಽತ್ಯಂತಾದ್ಭುತಂ ವ್ಯಕ್ತಂ ಸಚ್ಚಿದಾನಂದಮಾತ್ರಕಂ ।
ಸರ್ವಪ್ರಪಂಚಶೂನ್ಯತ್ವಂ ಸರ್ವಮಾತ್ಮೇತಿ ನಿಶ್ಚಿತಂ ॥೧॥

ಆತ್ಮರೂಪಪ್ರಪಂಚಂ ವಾ ಆತ್ಮರೂಪಪ್ರಪಂಚಕಂ ।
ಸರ್ವಪ್ರಪಂಚಂ ನಾಸ್ತ್ಯೇವ ಸರ್ವಂ ಬ್ರಹ್ಮೇತಿ ನಿಶ್ಚಿತಂ ॥೨॥

ನಿತ್ಯಾನುಭವಮಾನಂದಂ ನಿತ್ಯಂ ಬ್ರಹ್ಮೇತಿ ಭಾವನಂ ।
ಚಿತ್ತರೂಪಪ್ರಪಂಚಂ ವಾ ಚಿತ್ತಂ ಸಂಸಾರಮೇವ ವಾ ॥೩॥

---

## ಮೂವತ್ತೆಂಟನೆಯ ಅಧ್ಯಾಯವು

ಎಲೈ ನಿದಾಘನೇ, ಕೇಳು, ಈಗ "ಯಾವ ಪ್ರಪಂಚವೂ ಇಲ್ಲ. ಎಲ್ಲವೂ ಸಚ್ಚಿದಾನಂದಸ್ವರೂಪವಾದ ಆತ್ಮನೇ" ಎಂಬ ಅತ್ಯಮೋಘವಾದ ವಿಷಯವನ್ನು ಹೇಳುವೆನು. ಎಂದು ಋಭುಮಹರ್ಷಿಯು ನಿದಾಘನಿಗೆ ಬ್ರಹ್ಮಸ್ವರೂಪವನ್ನು ವಿವರಿಸತೊಡಗಿದನು. ॥೧॥

ಆತ್ಮರೂಪವಾದ ಪ್ರಪಂಚವಾಗಲೀ ಬೇರೆ ವಿಧವಾದ ಲೋಕವಾಗಲೀ ಒಂದೂ ಇಲ್ಲವೇ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ॥೨॥

ಬ್ರಹ್ಮವಸ್ತುವು ನಿತ್ಯಾನುಭವರೂಪವಾದ ಆನಂದವೇ ಆಗಿದೆ. ಚಿತ್ತಸ್ವರೂಪವಾದ ಪ್ರಪಂಚವಾಗಲೀ ಸಂಸಾರವಾಗಲೀ ವಸ್ತುತಃ ಇಲ್ಲವೇ ಇಲ್ಲ. ॥೩॥

ಸರ್ವಂ ಬ್ರಹ್ಮ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ।
ಇದಮಸ್ತೀತಿ ಸತ್ತಾತ್ವಂ ಅಹಮಸ್ಮೀತಿ ವಾ ಜಗತ್ ॥೪॥

ಸ್ವಾಂತಃಕರಣದೋಷಂ ವಾ ಸ್ವಾಂತಃಕರಣಕಾರ್ಯಕಂ ।
ಸ್ವಸ್ಯ ಜೀವಭ್ರಮಃ ಕಶ್ಚಿತ್ ಸ್ವಸ್ಯ ನಾಶಂ ಚ ಜನ್ಮನಾ ॥೬॥

ಸರ್ವಂ ಬ್ರಹ್ಮ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ॥೭॥

ಈಶ್ವರಃ ಕಶ್ಚಿದಸ್ತೀತಿ ಜೀವೋಹಮಿತಿ ವೈ ಜಗತ್ ।
ಮಾಯಾಸತ್ತಾ ಮಹಾಸತ್ತಾ ಚಿತ್ತಸತ್ತಾ ಜಗನ್ಮಯಂ ॥೮॥

ಯದ್ಯಚ್ಚ ದೃಶ್ಯತೇ ಶಾಸ್ತ್ರೈರ್ಯದ್ಯದ್ವೇದೇ ಚ ಭಾಷಣಂ ।
ಏಕಮಿತ್ಯೇವ ನಿರ್ದೇಶಂ ದ್ವೈತಮಿತ್ಯೇವ ಭಾಷಣಂ ॥೯॥

ಸರ್ವಂ ಬ್ರಹ್ಮ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ।
ಶಿವೋಸ್ಮೀತಿ ಭ್ರಮಃ ಕಶ್ಚಿತ್ ಬ್ರಹ್ಮಾಸ್ಮೀತಿ ಚ ವಿಭ್ರಮಃ ॥೧೦॥

---

ಈ ಜಗತ್ತು ಇದೆ. ನಾನು ಇರುವೆನು-ಎನ್ನುವುದಾವುದೂ ಇಲ್ಲ. ಬ್ರಹ್ಮ ವಸ್ತುವೊಂದೇ ಇರುವುದು, ಆ ಬ್ರಹ್ಮವಸ್ತುವೇ ನಾನು. ॥೪॥

ಅಂತಃಕರಣದ ದೋಷವಾಗಲೀ ಅಂತಃಕರಣದ ಕಾರ್ಯವಾಗಲೀ ಜೀವ ಭ್ರಾಂತಿಯಾಗಲೀ, ಜನ್ಮನಾಶಗಳಾಗಲೀ ಯಾವುದೂ ಆತ್ಮನಿಗಿಲ್ಲವೇ ಇಲ್ಲ. ಆತ್ಮನೇ ಬ್ರಹ್ಮವಸ್ತುವು, ಬ್ರಹ್ಮವಸ್ತುವಿನ ಹೊರತು ಬೇರೇನೂ ಇಲ್ಲ. ॥೬-೭॥

"ಈಶ್ವರನು ಇದ್ದಾನೆ, ಜೀವನು ನಾನು, ಮಾಯೆಯು ಇದೆ. ಚಿತ್ತವು ಇದೆ,—ಎಂದು ಮೊದಲಾದ ಭಾವನೆಗಳೆಲ್ಲವೂ, ಶಾಸ್ತ್ರದರ್ಶನಗಳೆಲ್ಲವೂ, ವೇದೋಪ ದೇಶಗಳೆಲ್ಲವೂ ಒಂದು-ಎನ್ನು ಅಭೇದ ಭಾಷಣ, ಎರಡು-ಎನ್ನುವ ಭೇದಭಾಷಣ —ಇವಾವುವೂ ಇಲ್ಲವೇ ಇಲ್ಲ. ಬ್ರಹ್ಮವಸ್ತುವೇ ಇರುವುದು. ಆ ಬ್ರಹ್ಮವಸ್ತುವೇ ನಾನು. ॥೮-೯॥

ಶಿವನು ನಾನು, ಬ್ರಹ್ಮನು ನಾನು, ವಿಷ್ಣುವು ನಾನು—ಎಂಬ ಭಾವನೆಗಳು, ಜಗತ್ ಇದೆಯೆಂಬ ಭಾವನೆ, ಸ್ವಲ್ಪವಿದೆ ಸ್ವಲ್ಪವಿಲ್ಲ-ಎನ್ನುವ ವಿಶಿಷ್ಟಾದ್ವೈತವಾದ,

ವಿಷ್ಣುರಸ್ಮೀತಿ ವಿಭ್ರಾಂತಿರ್ಜಗದಸ್ತೀತಿ ವಿಭ್ರಮಃ ।
ಈಶದಸ್ತೀತಿ ವಾ ಭೇದವಿಶೇಷದಸ್ತೀತಿ ವಾ ದ್ವಯಂ ॥೧೧॥

ಸರ್ವಮಸ್ತೀತಿ ನಾಸ್ತೀತಿ ಸರ್ವಂ ಬ್ರಹ್ಮೇತಿ ನಿಶ್ಚಯಃ ।
ಆತ್ಮಧ್ಯಾನಪ್ರಪಂಚಂ ವಾ ಆತ್ಮರೂಪಪ್ರಪಂಚಕಂ ॥೧೨॥

ವಾರ್ತಾರೂಪಪ್ರಪಂಚಂ ವಾ ಸ್ಮರಣಾದಿಪ್ರಪಂಚಕಂ ।
ಸರ್ವಂ ಬ್ರಹ್ಮ ನ ಸಂದೇಹಃ ಬ್ರಹ್ಮೈವಾಹಂ ನ ಸಂಶಯಃ ॥೧೩॥

ಜಾಗ್ರತ್ಪ್ರಪಂಚಮೇವಾಪಿ ತಥಾ ಸ್ವಪ್ನಪ್ರಪಂಚಕಂ ।
ಸುಪ್ತಿಜ್ಞಾನಪ್ರಪಂಚಂ ವಾ ಗುಣಜ್ಞಾನಪ್ರಪಂಚಕಂ ॥೧೪॥

ಗುಣಾಗುಣಪ್ರಪಂಚಂ ವಾ ದೋಷಾದೋಷವಿನಿರ್ಣಯಂ ।
ವೇದಜ್ಞಾನಪ್ರಪಂಚಂ ವಾ ಶಾಸ್ತ್ರಜ್ಞಾನಪ್ರಪಂಚಕಂ ॥೧೫॥

ಪಾಪಬುದ್ಧಿಪ್ರಪಂಚಂ ವಾ ಪುಣ್ಯಭೇದಪ್ರಪಂಚಕಂ ।
ಜ್ಞಾನರೂಪಪ್ರಪಂಚಂ ವಾ ನಿರ್ಗುಣಸ್ಯ ಪ್ರಪಂಚಕಂ ॥೧೬॥

ಸತ್ಯಾಸತ್ಯಪ್ರಪಂಚಂ ವಾ ಚರಾಚರವಿಚಾರಣಂ ।
ಏಕ ಆತ್ಮೇತಿ ಸದ್ಭಾವಂ ಮುಖ್ಯ ಆತ್ಮೇತಿ ಭಾವನಂ ॥೧೭॥

---

ಎಲ್ಲವೂ ಇದೆಯೆನ್ನುವ ದ್ವೈತವಾದ, ಯಾವುದೂ ಇಲ್ಲವೆನ್ನುವ ಶೂನ್ಯವಾದ, ಎಲ್ಲವೂ ಬ್ರಹ್ಮವೆನ್ನುವ ಅದ್ವೈತವಾದ, ಆತ್ಮಧ್ಯಾನ, ಆತ್ಮರೂಪಗಳ ಪ್ರಪಂಚ, ವಾರ್ತಾರೂಪವಾದ ಪ್ರಪಂಚ, ಸ್ಮರಣದ ಪ್ರಪಂಚ—ಇವೆಲ್ಲವೂ ಬ್ರಹ್ಮವಸ್ತುವೇ ಹೊರತು ಬೇರೆಯಿಲ್ಲ. ಆ ಬಹ್ಮವಸ್ತುವೇ ನಾನು. ॥೧೦-೧೧-೧೨-೧೩॥

ಜಾಗ್ರದವಸ್ಥೆಯ ಪ್ರಪಂಚವಾಗಲೀ, ಸ್ವಪ್ನದ ಪ್ರಪಂಚವಾಗಲೀ ಸುಷುಪ್ತಿಯ ಜ್ಞಾನಪ್ರಪಂಚವಾಗಲೀ, ಗುಣಾವಗುಣ ನಿರ್ಗುಣಗಳ ಪ್ರಪಂಚವಾಗಲೀ, ದೋಷಾದೋಷಗಳ ಪ್ರಪಂಚವಾಗಲೀ ವೇದಜ್ಞಾನದ ಪ್ರಪಂಚವಾಗಲೀ, ಶಾಸ್ತ್ರಜ್ಞಾನದ ಪ್ರಪಂಚವಾಗಲೀ ಇವಾವುವೂ ವಸ್ತುತಃ ಇಲ್ಲವೇ ಇಲ್ಲ. ॥೧೪-೧೫॥

ಪಾಪಬುದ್ಧಿಯ ಪ್ರಪಂಚ, ಪುಣ್ಯದ ಭೇದಗಳು, ಜ್ಞಾನಪ್ರಪಂಚ, ನಿರ್ಗುಣ ಪ್ರಪಂಚ, ಸತ್ಯಾಸತ್ಯಪ್ರಪಂಚ, ಸ್ಥಿರಚರಪ್ರಪಂಚ, ಓರ್ವನೇ ಆತ್ಮನೆಂಬ ವಿಚಾರ,

ದ್ವೈತಾದ್ವೈತಸಮುದ್ಭೇದಂ ನಾಸ್ತಿ ನಾಸ್ತೀತಿ ಭಾಷಣಂ ।
ಅಸತ್ಯಂ ಜಗದೇವೇತಿ ಸತ್ಯಂ ಬ್ರಹ್ಮೇತಿ ನಿಶ್ಚಯಂ ॥೧೯॥

ಕಾರ್ಯರೂಪಂ ಕಾರಣಂ ಚ ನಾನಾಭೇದವಿಜೃಂಭಣಂ ।
ಸರ್ವಮಂತ್ರಪ್ರದಾತಾರಂ ದೂರೇ ದೂರಂ ತಥಾ ತಥಾ ॥೨೦॥

ಸರ್ವಂ ಸಂತ್ಯಜ್ಯ ಸತತಂ ಸ್ವಾತ್ಮನ್ಯೇವ ಸ್ಥಿರೋ ಭವ ।
ಮೌನಭಾವಂ ಮೌನಕಾರ್ಯಂ ಮೌನಯೋಗಂ ಮನಃಪ್ರಿಯಂ॥೨೧॥

ಪಂಚಾಕ್ಷರೋಪದೇಷ್ಟಾ ಚ ತಥಾ ಚಾಷ್ಟಾಕ್ಷರಪ್ರದಂ ।
ಸರ್ವಂ ಬ್ರಹ್ಮ ನಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೨॥

ಯದ್ಯದದ್ಯತ್ವದಂ ಶಾಸ್ತ್ರಂ ಯದ್ಯದ್ಭೇದೋ ಗುರೋಽಪಿ ವಾ ।
ಸರ್ವದಾ ಸರ್ವಲೋಕೇಷು ಸರ್ವಸಂಕಲ್ಪಕಲ್ಪನಂ ॥೨೩॥

ಸರ್ವಾಕಾರವಿಕಲ್ಪಶ್ಚ ಸರ್ವಕಾರಣ ಕಲ್ಪನಂ ।
ಸಹಾದೇಯಮುಪಾದೇಯಂ ಗ್ರಾಹ್ಯಂ ತ್ಯಾಜ್ಯಂ ಚ ಭಾಷಣಂ ॥೨೪॥

---

ಇವೆಲ್ಲವೂ ಇಲ್ಲವೇ ಇಲ್ಲ. ಬ್ರಹ್ಮವಸ್ತುವೊಂದೇ ಸತ್ಯವಾದುದು, ನಿತ್ಯವಾದುದು. ಅಂತಹ ವಸ್ತುವೇ ನಾನು ಎಂದು ಭಾವಿಸಬೇಕು. ॥೧೭-೧೮॥

ದ್ವೈತಾದ್ವೈತಗಳ ಭೇದ, ಇಲ್ಲವೇ ಇಲ್ಲವೆನ್ನುವ ಶೂನ್ಯವಾದಗಳ ಭೇದ, ಜಗತ್ತು ಅಸತ್ಯ, ಬ್ರಹ್ಮ ಸತ್ಯ-ಎನ್ನುವವಾದ, ಕಾರಣವು ಕಾರ್ಯರೂಪಹೊಂದಿ ನಾನಾ ಭೇದದಿಂದ ತೋರುವುದೆಂಬ ವಾದ,—ಇವೆಲ್ಲವನ್ನೂ ಬಿಟ್ಟು ಆತ್ಮನಲ್ಲಿಯೇ ತಲ್ಲೀನನಾಗು. ॥೧೯-೨೦॥

ಮೌನಭಾವ, ಮೌನಕಾರ್ಯ, ಮೌನಯೋಗ, ಮನಃಪ್ರೀತಿ, ಪಂಚಾಕ್ಷರಜಪ ಮೊದಲಾದ ಮಂತ್ರಗಳನ್ನುಪದೇಶಿಸುವ ಗುರು, ಉಪದೇಶ, ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಿಲ್ಲ, ಆ ಬ್ರಹ್ಮವಸ್ತುವೇ ನಾನು. ॥೨೧-೨೨॥

ನವೀನವಾದ ಪ್ರಗತಿಯೆನ್ನುವ ಶಾಸ್ತ್ರಗಳೆಲ್ಲವೂ, ಭೇದಗಳು, ನಾನಾಬಗೆಯ ಸಂಕಲ್ಪಗಳು, ನೂರೆಂಟು ಆಕಾರಕಲ್ಪನೆಗಳು, ಕಾರಣಕಲ್ಪನೆಗಳು, ಹಾನೋಪಾ

ಸರ್ವಂ ಬ್ರಹ್ಮ ನಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ।
ಸರ್ವವಾಕ್ಯಪ್ರಪಂಚಂ ಚ ಸರ್ವಚಿತ್ತಪ್ರಪಂಚಕಂ ॥೨೫॥

ಸರ್ವದೋಷಪ್ರಪಂಚಶ್ಚ ಸುಖದುಃಖಪ್ರಪಂಚಕಂ ।
ಸರ್ವಂ ಬ್ರಹ್ಮ ನಸಂದೇಹಸ್ತದ್ಬ್ರಹ್ಮಾಹಂ ನ ಸಂಶಯಃ ॥೨೬॥

ವಿಚಾರ್ಯಜನ್ಮಮರಣಂ ವಾಸನಾಚಿತ್ತರೂಪಕಂ ॥೨೭॥

ಕಾಮಕ್ರೋಧೌ ಲೋಭಮೋಹೌ ಸರ್ವಂ ದಂಭಂ ಚ ಹುಂಕೃತಿಃ ।
ಸರ್ವಂ ಬ್ರಹ್ಮ ನ ಸಂದೇಹಃ ಬ್ರಹ್ಮೈವಾಹಂ ನ ಸಂಶಯಃ ॥೨೮॥

ತ್ರೈಲೋಕ್ಯಸಂಭವಾದ್ದೈತಂ ಬ್ರಹ್ಮೇಂದ್ರವರುಣಾದಿಕಂ ।
ಜ್ಞಾನೇಂದ್ರಿಯಂ ಚ ಶಬ್ದಾದಿದಿಗ್ವಾಯ್ವರ್ಕಾದಿದೈವತಂ ॥೨೯॥

ಬ್ರಹ್ಮೇಂದ್ರಿಯಾದಿಸದ್ಭಾವಂ ವಿಷಯಂ ದೇವತಾಗಣಂ ।
ಸರ್ವಂ ಬ್ರಹ್ಮ ನ ಸಂದೇಹಃ ಬ್ರಹ್ಮೈವಾಹಂ ನ ಸಂಶಯಃ ॥೩೦॥

---

ದಾನಗಳು, ತ್ಯಾಜ್ಯಗ್ರಾಹ್ಯಗಳು—ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಿಲ್ಲ. ನಾನೇ ಆ ಬ್ರಹ್ಮವಸ್ತುವು. ॥೨೩-೨೪॥

ಎಲ್ಲ ವಾಕ್ಯಗಳ ಪ್ರಪಂಚ, ನಾನಾಬಗೆಯ ಮನಸ್ಸಿನ ಪ್ರಪಂಚಗಳು, ದೋಷಗಳು ಸುಖದುಃಖಗಳು ಇವೆಲ್ಲವೂ ಬ್ರಹ್ಮವೇ ವಿನಾ ಬೇರೆಯಲ್ಲ. ॥೨೫-೨೬॥

ಜನನಮರಣಗಳು, ಮನಸ್ಸಿನ ಕರ್ಮವಾಸನೆಗಳು, ಕಾಮಕ್ರೋಧಲೋಭ ಮೋಹಮದಮಾತ್ಸರ್ಯಗಳು ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ಆ ಬ್ರಹ್ಮವಸ್ತುವೇ ನಾನು. ॥೨೭-೨೮॥

ಮೂರುಲೋಕಗಳ ಸತ್ತೆ, (ಇರುವಿಕೆ) ಬ್ರಹ್ಮ ಇಂದ್ರ ವರುಣಾದಿಗಳು, ಜ್ಞಾನೇಂದ್ರಿಯಗಳು, ಶಬ್ದಾದಿವಿಷಯಗಳು, ವಾಯುಸೂರ್ಯಾದಿ ದಿಕ್ಪಾಲಕರು ಕರ್ಮೇಂದ್ರಿಯಗಳು ಇವಾವುವೂ ಇಲ್ಲ. ಎಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ಆ ವಸ್ತುವೇ ನಾನು. ॥೨೯-೩೦॥

ಅಂತಃಕರಣವೃತ್ತಿಂ ಚ ವಿಷಯಂ ಚಾಧಿದೈವತಂ ।
ಸರ್ವಂ ಬ್ರಹ್ಮ ನ ಸಂದೇಹಃ ಬ್ರಹ್ಮೈವಾಹಂ ನ ಸಂಶಯಃ ॥೩೧॥

ಚಿತ್ತವೃತ್ತಿವಿಭೇದಂ ಚ ಬುದ್ಧಿವೃತ್ತಿನಿರೂಪಣಂ ।
ಮಾಯಾಮಾತ್ರಮಿದಂ ದ್ವೈತಂ ಸದಸತ್ತ್ವಾದಿನಿರ್ಣಯಂ ॥೩೨॥

ಸರ್ವಂ ಬ್ರಹ್ಮ ನ ಸಂದೇಹಃ ಬ್ರಹ್ಮೈವಾಹಂ ನ ಸಂಶಯಃ ।
ಕಿಂಚಿತ್‌ದ್ವೈತಂ ಬಹುದ್ವೈತಂ ಜೀವದ್ವೈತಂ ಸದಾಽಪ್ಯಸತ್ ॥೩೩॥

ಜಗದುತ್ಪತ್ತಿಮೋಹಂ ಚ ಗುರುಶಿಷ್ಯತ್ವನಿರ್ಣಯಂ ।
ಗೋಪನಂ ತತ್ಪದಾರ್ಥಸ್ಯ ತ್ವಂಪದಾರ್ಥಸ್ಯ ಮೇಲನಂ ॥೩೪॥

ತಥಾ ಚಾಸಿ ಪದಾರ್ಥಸ್ಯ ಐಕ್ಯಬುದ್ಧ್ಯಾನುಭಾವನಂ ।
ಸರ್ವಂ ಬ್ರಹ್ಮ ನ ಸಂದೇಹಃ ಬ್ರಹ್ಮೈವಾಹಂ ನ ಸಂಶಯಃ ॥೩೫॥

ಭೇದೇಷು ಭೇದಾಭೇದಂ ಚ ನಾನ್ಯತ್ಕಿಂಚಿಚ್ಚ ವಿದ್ಯತೇ ।
ಏತತ್ಪ್ರಪಂಚಂ ನಾಸ್ತ್ಯೇವ ಸರ್ವಂ ಬ್ರಹ್ಮೇತಿ ನಿಶ್ಚಯಃ ॥೩೬॥

---

ಅಂತಃಕರಣವೃತ್ತಿಗಳು, ವಿಷಯಗಳು, ಆಧಿದೈವತ ವಿಷಯಗಳು— ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ಆ ವಸ್ತುವೇ ನಾನು. ॥೩॥

ಚಿತ್ತವೃತ್ತಿಭೇದಗಳು, ಬುದ್ಧಿಯ ನಿರೂಪಣೆಗಳು, ಸತ್ತ್ವ ಅಸತ್ತ್ವ ಮೊದಲಾದ ನಿರ್ಣಯ— ಇವೆಲ್ಲವೂ ಮಾಯಾಮಾತ್ರವಾದುವುಗಳು. ಬ್ರಹ್ಮವಸ್ತುವಿನ ವಿನಾ ಬೇರೆ ಏನೂ ಇಲ್ಲ. ॥೩೨॥

ಕೆಲವು ಭೇದಗಳು, ಅನೇಕ ಬಗೆಯ ಭೇದಗಳು, ಜೀವಭೇದಗಳು ಇವೆಲ್ಲವೂ ಸುಳ್ಳು, ಜಗತ್ತು ಜನಿಸುವುದು, ಗುರುಶಿಷ್ಯಭಾವ, ತತ್ ತ್ವಂ ಅಸಿ— ಎಂಬ ಪದಾರ್ಥಗಳ ನಿರ್ಣಯ, ವಾಕ್ಯಾನ್ವಯ ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ಆ ಬ್ರಹ್ಮವಸ್ತುವೇ ನಾನು. ॥೩೪-೩೫॥

ಭೇದವಾದ, ಭೇದಾಭೇದವಾದ ಮೊದಲಾದ ಯಾವ ವಾದಗಳೂ ಇಲ್ಲವೇ ಇಲ್ಲ. ಚೈತನ್ಯಸ್ವರೂಪವಾದ ಬ್ರಹ್ಮವಸ್ತುವನ್ನು ವಿನಾ ಬೇರೆ ಏನೂ ಇಲ್ಲ. ಆ ಬ್ರಹ್ಮವಸ್ತುವೇ ನಾನು. ॥೩೬॥

ಸರ್ವಂ ಚೈತನ್ಯಮಾತ್ರತ್ವಾತ್ಕೇವಲಂ ಬ್ರಹ್ಮ ಏವ ಸಃ ।
ಆತ್ಮಾಕಾರಮಿದಂ ಸರ್ವಮಾತ್ಮನೋಽನ್ಯನ್ನ ಕಿಂಚನ ॥೩೭॥

ತುರ್ಯಾತೀತಂ ಬ್ರಹ್ಮಣೋಽನ್ಯತ್ಸತ್ಯಾಸತ್ಯಂ ನ ವಿದ್ಯತೇ ।
ಸರ್ವಂ ತ್ಯಕ್ತ್ವಾ ತು ಸತತಂ ಸ್ವಾತ್ಮನ್ಯೇವ ಸ್ಥಿತೋ ಭವ ॥೩೮॥

ಚಿತ್ತಂ ಕಾಲಂ ವಸ್ತುಭೇದಂ ಸಂಕಲ್ಪಂ ಭಾವನಂ ಸ್ವಯಂ ।
ಸರ್ವಂ ಸಂತ್ಯಜ್ಯ ಸತತಂ ಸರ್ವಂ ಬ್ರಹ್ಮೈವ ಭಾವನಂ ॥೩೯॥

ಯದ್ಯದ್ಭೇದಪರಂ ಶಾಸ್ತ್ರಂ ಯದ್ಯದ್ಭೇದಪರಂ ಮನಃ ।
ಸರ್ವಂ ಸತತಂ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ॥೪೦॥

ಮನಃಕಲ್ಪಿತಕಲ್ಪಂ ವಾ ಆತ್ಮಕಲ್ಪನವಿಭ್ರಮಂ ।
ಅಹಂಕಾರಪರಿಚ್ಛೇದಂ ದೇಹೋಽಹಂ ದೇಹಭಾವನಾ ॥೪೧॥

ಸರ್ವಂ ಸತತಂ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ।
ಪ್ರಪಂಚಸ್ಯ ಚ ಸದ್ಭಾವಂ ಪ್ರಪಂಚೋದ್ಭವಮನ್ಯಕಂ ॥೪೨॥

---

ಈ ಜಗತ್ತೆಲ್ಲವೂ ಆತ್ಮರೂಪವಾದುದು, ಆತ್ಮನ ಹೊರತು ಬೇರೆ ಏನೂ ಇಲ್ಲ. ಯಾವ ಅವಸ್ಥೆಗಳೂ ಇಲ್ಲದ ನಿರ್ಗುಣಬ್ರಹ್ಮನ ಹೊರತು ಸತ್ಯ-ಅಸತ್ಯ—ಮೊದಲಾದವಾವುದೂ ಇಲ್ಲ. ಆತ್ಮನೇ ಬ್ರಹ್ಮವಸ್ತು, ಆದುದರಿಂದ ನೀನು ಆತ್ಮನಲ್ಲಿಯೇ ನಿರತನಾಗು. ॥೩೭-೩೮॥

ಚಿತ್ತ, ಕಾಲ, ವಸ್ತುಭೇದ, ಸಂಕಲ್ಪ, ಭಾವನೆ—ಇವೆಲ್ಲವನ್ನೂ ಬಿಟ್ಟು ಕೇವಲ ಬ್ರಹ್ಮಸ್ವರೂಪವನ್ನೇ ಭಾವಿಸು. ॥೩೯॥

ಭೇದಪರವಾದ ಶಾಸ್ತ್ರಗಳನ್ನೂ ಮನಸ್ಸನ್ನೂ ಬಿಟ್ಟು ನಿನ್ನ ಆತ್ಮನಲ್ಲಿಯೇ ಸ್ಥಿರನಾಗು, ಅಭೇದದಿಂದ ಭಾವಿಸು. ॥೪೦॥

ಮನಸ್ಸಿನ ಕಲ್ಪನೆಗಳಾದ ಕಲ್ಪಗಳು, ಸಂಕಲ್ಪಗಳು, ಅಹಂಕಾರನಿರ್ಣಯಗಳು, ದೇಹಾತ್ಮಭಾವನೆ—ಇವೆಲ್ಲವನ್ನೂ ಬಿಟ್ಟು ನಿನ್ನ ಆತ್ಮನಲ್ಲಿಯೇ ಸ್ಥಿರನಾಗು. ॥೪೧॥

ಬಂಧಸದ್ಭಾವಕಲನಂ ಮೋಕ್ಷಸದ್ಭಾವಭಾಷಣಂ ।
ಸರ್ವಂ ಸತತಂ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ॥೪೩॥

ದೇವತಾಭಾವಸದ್ಭಾವಂ ದೇವಪೂಜಾವಿನಿರ್ಣಯಂ ।
ಪಂಚಾಕ್ಷರೇತಿ ಯದ್ದ್ವೈತಮಷ್ಟಾಕ್ಷರಸ್ಯ ದೈವತಂ ॥೪೪॥

ಸರ್ವಂ ಸತತಂ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ।
ಪ್ರಾಣಾದಿಪಂಚಕಾಸ್ತಿತ್ವಮುಪಪ್ರಾಣಾದಿಪಂಚಕಂ ॥೪೫॥

ಪೃಥಿವೀಭೂತಭೇದಂ ವಾ ಗುಣಾ ಯತ್ಕುಂತನಾದಿಕಂ ।
ಸರ್ವಂ ಸತತಂ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ॥೪೬॥

ವೇದಾಂತಶಾಸ್ತ್ರಸಿದ್ಧಾಂತಂ ಶೈವಾಗಮನಮೇವ ಚ ।
ಲೌಕಿಕಂ ವಾಸ್ತವಂ ದೋಷಂ ಪ್ರವೃತ್ತಿಂ ಚ ನಿವೃತ್ತಿಕಂ ॥೪೭॥

ಸರ್ವಂ ಸಂತ್ಯಜ್ಯ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ।
ಆತ್ಮಜ್ಞಾನಂ ಪರಂ ಬ್ರಹ್ಮ ಅನಾತ್ಮಜ್ಞಾನದೂಷಣಂ ॥೪೮॥

---

ಪ್ರಪಂಚಸ್ಥಿತಿ, ಪ್ರಪಂಚಸೃಷ್ಟಿ, ಬಂಧಸ್ಥಿತಿ, ಮೋಕ್ಷಸ್ಥಿತಿ— ಇವೆಲ್ಲವನ್ನೂ ಬಿಟ್ಟು ನೀನು ನಿನ್ನಾತ್ಮನಲ್ಲಿಯೇ ಸ್ಥಿರನಾಗು. ॥೪೨-೪೩॥

ದೇವತೆಗಳ ಇರುವಿಕೆ, ದೇವಪೂಜೆ, ಪಂಚಾಕ್ಷರ, ಅಷ್ಟಾಕ್ಷರಮಂತ್ರಗಳ ಜಪ—ಮೊದಲಾದುದೆಲ್ಲವನ್ನೂ ಬಿಟ್ಟು ನಿನ್ನಾತ್ಮನಲ್ಲಿಯೇ ಸ್ಥಿರನಾಗು. ॥೪೪॥

ಪ್ರಾಣಾಪಾನಾದಿಗಳು, ಉಪಪ್ರಾಣಾದಿಗಳೈದು, ಭೂಮಿ—ಮೊದಲಾದ ಮಹಾಭೂತಗಳ ಭೇದ ಅವುಗಳ ಗಂಧ ಮೊದಲಾದ ಗುಣಗಳು — ಇಲ್ಲವನ್ನೂ ಬಿಟ್ಟು ನಿನ್ನಾತ್ಮನಲ್ಲಿಯೇ ಸ್ಥಿರನಾಗು. ॥೪೫-೪೬॥

ವೇದಾಂತಸಿದ್ಧಾಂತಗಳು, ಶೈವಾಗಮಗಳು, ಲೌಕಿಕವಸ್ತುಗಳ ದೋಷ, ಪ್ರವೃತ್ತಿ-ನಿವೃತ್ತಿಗಳು ಇವೆಲ್ಲವನ್ನೂ ಬಿಟ್ಟು ನಿನ್ನಾತ್ಮನಲ್ಲಿಯೇ ಸ್ಥಿರಭಾವನೆಯುಳ್ಳವನಾಗು. ॥೪೭॥

ಆತ್ಮಜ್ಞಾನ, ಪರಬ್ರಹ್ಮ—ಇವರ ಹೊಗಳಿಕೆ, ಅನಾತ್ಮಜ್ಞಾನದ ತೆಗಳಿಕೆ

ರೇಚಕಕಂ ಪೂರಕಂ ಕುಂಭಂ ಷಡಾಧಾರವಿಶೋಧನಂ ।
ಸರ್ವಂ ಸಂತ್ಯಜ್ಯ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ॥೪೯॥

ದ್ವೈತವೃತ್ತಿಶ್ಚ ದೇಹೋಽಹಂ ಸಾಕ್ಷಿವೃತ್ತಿಃ ಸ್ವದಂಶಕಂ ।
ಅಖಂಡಾಕಾರವೃತ್ತಿಂ ಚ ಅಖಂಡಾಕಾರ ಸಮ್ಮತಂ ॥೫೦॥

ಅನಂತಾನುಭವಂ ಚಾಪಿ ಅಹಂಬ್ರಹ್ಮೇತಿ ನಿಶ್ಚಯಂ ।
ಉತ್ತಮಂ ಮಧ್ಯಮಂ ಚಾಪಿ ತಥಾ ಚೈವಾಧಮಾಧಮಂ ॥೫೧॥

ದೂಷಣಂ ಭೂಷಣಂ ಚೈವ ಸರ್ವವಸ್ತುವಿನಿಂದನಂ ।
ಸರ್ವಂ ಸಂತ್ಯಜ್ಯ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ॥೫೨॥

ಅಹಂ ಬ್ರಹ್ಮ ಇದಂ ಬ್ರಹ್ಮ ಸರ್ವಂ ಬ್ರಹ್ಮೈವ ತತ್ವತಃ ।
ಅಹಂ ಬ್ರಹ್ಮಾಸ್ಮಿ ಮುಗ್ಧೋಽಸ್ಮಿ ಬುದ್ಧೋಽಸ್ಮಿ ಸದಸತ್ಪರಃ ॥೫೩॥

ವೈಶ್ವಾನರೋ ವಿರಾಟ್ ಸ್ಥೂಲಪ್ರಪಂಚಮಿತಿ ಭಾವನಂ ।
ಆನಂದಸ್ಫುರಣೈವಾಹಂ ಪರಾಪರವಿವರ್ಜಿತಃ ॥೫೪॥

---

ರೇಚಕ, ಪೂರಕ, ಕುಂಭಕ ಮೊದಲಾದ ಪ್ರಾಣಾಯಾಮಗಳಿಂದ ಶರೀರಶೋಧನೆ ಇವೆಲ್ಲವನ್ನೂ ಬಿಟ್ಟು ನಿನ್ನಾತ್ಮನಲ್ಲಿಯೇ ಸ್ಥಿರನಾಗು. ॥೪೮-೪೯॥

ದೇಹಾತ್ಮಬುದ್ಧಿ, ಸಾಕ್ಷಿಬುದ್ಧಿ, ಸ್ವಾಂಶಬುದ್ಧಿ, ಅಖಂಡಾಕಾರವೃತ್ತಿ, ಅನೇಕಾನುಭವ, ನಾನೇ ಬ್ರಹ್ಮನೆಂಬ ನಿಶ್ಚಯ, ಉತ್ತಮ ಮಧ್ಯಮಾಧಮಾದಿ ಭೇದಗಳು—ಇವೆಲ್ಲವನ್ನೂ ಬಿಟ್ಟು ನಿನ್ನಾತ್ಮನಲ್ಲಿಯೇ ಸ್ಥಿರನಾಗು. ॥೫೦-೫೧॥

ಖಂಡನಮಂಡನಗಳು, ವಸ್ತುನಿಂದೆಗಳು ಇವೆಲ್ಲವನ್ನೂ ಬಿಟ್ಟು ನಿನ್ನಾತ್ಮನಲ್ಲೇ ನೀನು ಸ್ಥಿರನಾಗು. ॥೫೨॥

ಇದು ಬ್ರಹ್ಮ, ನಾನು ಬ್ರಹ್ಮ, ವಸ್ತುತಃ ಎಲ್ಲವೂ ಬ್ರಹ್ಮ, ನಾನು ಬ್ರಹ್ಮ, ನಾನು ಮೂಢನು, ತಿಳಿವಳಿಕೆಯುಳ್ಳವನು, ಸರ್ವೋತ್ತಮನು, ಸರ್ವಾಧಮನು, ವೈಶ್ವಾನರನು, ವಿರಾಟ್ಪುರುಷನು, ಸ್ಥೂಲಸೂಕ್ಷ್ಮಪ್ರಪಂಚವು ನಾನು, ಆನಂದವು ನಾನು ಉತ್ತಮಾಧಮಭೇದಗಳು ನನಗಿಲ್ಲ. ॥೫೩-೫೪॥

ನಿತ್ಯಾನಂದಮಯಂ ಬ್ರಹ್ಮ ಸಚ್ಚಿದಾನಂದವಿಗ್ರಹಃ ।
ದೃಗ್ರೂಪಂ ದೃಶ್ಯರೂಪಂ ಚ ಮಹಾಸತ್ತಾಸ್ವರೂಪಕಂ ॥೫೫॥

ಕೈವಲ್ಯಂ ಸರ್ವನಿಧನಂ ಸರ್ವಭೂತಾಂತರಂಗತಂ ।
ಭೂತಂ ಭವ್ಯಂ ಭವಿಷ್ಯಂ ಚ ವರ್ತಮಾನಮಸತ್ಸದಾ ॥೫೬॥

ಕಾಲಭಾವಂ ದೇಹಭಾವಂ ಸತ್ಯಾಸತ್ಯವಿನಿರ್ಣಯಂ ।
ಪ್ರಜ್ಞಾನಘನ ಏವಾಹಂ ಶಾಂತಾಶಾಂತಂ ನಿರಂಜನಂ ॥೫೭॥

ಪ್ರಪಂಚವಾರ್ತಾಸ್ಮರಣಂ ದ್ವೈತಾದ್ವೈತವಿಭಾವನಂ ।
ಶಿವಾಗಮಸಮಾಚಾರಂ ವೇದಾಂತಶ್ರವಣಂ ಪರಂ ॥೫೮॥

ಅಹಂ ಬ್ರಹ್ಮಾಸ್ಮಿ ಶುದ್ಧೋಽಸ್ಮಿ ಚಿನ್ಮಾತ್ರೋಽಸ್ಮಿ ಸದಾಶಿವಃ ।
ಸರ್ವಂ ಬ್ರಹ್ಮೇತಿ ಸಂತ್ಯಜ್ಯ ಸ್ವಾತ್ಮನ್ಯೇವ ಸ್ಥಿರೋ ಭವ ॥೫೯॥

---

ನಿತ್ಯಾನಂದಮಯನು ನಾನು, ಸಚ್ಚಿದಾನಂದಮೂರ್ತಿಯಾದ ಬ್ರಹ್ಮನು ನಾನು, ದೃಕ್‌ದೃಶ್ಯಗಳೆರಡರ ಸ್ವರೂಪವೂ ನಾನು, ಪಾರಮಾರ್ಥಿಕ ಸತ್ತೆಯು ನಾನು. ॥೫೫॥

ಮುಕ್ತಿ, ಸರ್ವಸಂಹಾರ, ಸರ್ವಭೂತಾತ್ಮಕತೆ, ಭೂತಭವಿಷ್ಯದ್ವರ್ತಮಾನ ಇವೆಲ್ಲವೂ ಅಸತ್ಯ, ನಾನೊಬ್ಬನೇ ಸತ್ಯ. ॥೫೬॥

ಕಾಲಸ್ಥಿತಿ, ದೇಹರೂಪ, ಸತ್ಯಾಸತ್ಯವಿನಿರ್ಣಯ ಇವೆಲ್ಲವೂ ಸುಳ್ಳು, ಜ್ಞಾನಮೂರ್ತಿಯು ನಾನು, ಶಾಂತನಿರ್ಮಲರೂಪನು ನಾನು. ॥೫೭॥

ಪ್ರಪಂಚದ ವಾರ್ತೆ, ದ್ವೈತಾದ್ವೈತಭಾವನೆ, ಶಿವಾಗಮಸಿದ್ಧಾಂತವಿಮರ್ಶೆ, ವೇದಾಂತಶ್ರವಣ ಇವೆಲ್ಲವೂ ಅಸತ್ಯ. ॥೫೮॥

ನಾನು ಬ್ರಹ್ಮಸ್ವರೂಪನಾಗಿದ್ದೇನೆ; ನನ್ನ ಸ್ವರೂಪವು ಪರಿಶುದ್ಧವಾಗಿರುವುದು; ನಾನು ಚಿನ್ಮಾತ್ರಸ್ವರೂಪನಾಗಿರುವೆನು; ಮತ್ತು ಸದಾಶಿವಸ್ವರೂಪನಾಗಿರುವೆನು. ಎಂದು ಭಾವಿಸಿ, ಎಲ್ಲವನ್ನೂ ದೂರೀಕರಿಸಿ ನಿನ್ನ ಆತ್ಮನಲ್ಲಿಯೇ ಸ್ಥಿರಬುದ್ಧಿಯುಳ್ಳವನಾಗು. ಅಂದರೆ ನೀನು ಬ್ರಹ್ಮಸ್ವರೂಪನಾಗುವೆ. ॥೫೯॥

ಅಹಂ ಬ್ರಹ್ಮ ನ ಸಂದೇಹಃ ಇದಂ ಬ್ರಹ್ಮ ನ ಸಂಶಯಃ ।
ಸ್ಥೂಲದೇಹಂ ಸೂಕ್ಷ್ಮದೇಹಂ ಕಾರಣಂ ದೇಹಮೇವ ಚ ॥೬೦॥

ಏವಂ ಜ್ಞಾತುಂ ಚ ಸತತಂ ಬ್ರಹ್ಮೈವೇದಂ ಕ್ಷಣೇ ಕ್ಷಣೇ ।
ಶಿವೋಽಹ್ಯಾತ್ಮಾ ಶಿವೋ ಜೀವ ಶಿವೋ ಬ್ರಹ್ಮ ನ ಸಂಶಯಃ ॥೬೧॥

ಏತತ್ಪ್ರಕರಣಂ ಯಸ್ತು ಸಕೃದ್ವಾ ಸರ್ವದಾಪಿ ವಾ ।
ಪಠೇದ್ವಾ ಶೃಣುಯಾದ್ವಾಪಿ ಸ ಚ ಮುಕ್ತೋ ನ ಸಂಶಯಃ ॥೬೨॥

ಕ್ಷಣಮಾತ್ರಮಪಿ ಶ್ರುತ್ವಾ ಸಾಕ್ಷಾನ್ಮುಕ್ತೋ ನ ಸಂಶಯಃ ।
ನಿಮಿಷಂ ನಿಮಿಷಾರ್ಧಂ ವಾ ಶ್ರುತ್ವೈತದ್ಬ್ರಹ್ಮಭಾಗ್ಭವೇತ್ ॥೬೩॥

ಲೋಕಾಲೋಕಜಗತ್ಸ್ಥಿತಿಪ್ರವಿಲಸತ್ಪ್ರೋದ್ಭಾವಸತ್ತಾತ್ಮಿಕಾ
ಭಿತ್ತಿಃ ಶಂಕರನಾಮರೂಪಮಸಕೃದ್ವ್ಯಾಕುರ್ವತೇ ಕೇವಲಂ ।

---

ನಾನು ಬ್ರಹ್ಮಸ್ವರೂಪನಾಗಿದ್ದೇನೆ, ಎಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ತೋರುತ್ತಿರುವ ಸಕಲ ಚರಾಚರಾತ್ಮಕ ಪ್ರಪಂಚವೆಲ್ಲವೂ ಬ್ರಹ್ಮ ಸ್ವರೂಪವೆಂಬಲ್ಲಿ ಯಾವ ಸಂಶಯವೂ ಇರುವುದಿಲ್ಲ. ಸ್ಥೂಲದೇಹ ಸೂಕ್ಷ್ಮದೇಹ ಕಾರಣದೇಹ ಮೊದಲಾದ ದೇಹಗಳೆಲ್ಲವೂ ಬ್ರಹ್ಮಸ್ವರೂಪಗಳೇ ಆಗಿರುವವಲ್ಲದೆ ಬೇರೆಯಲ್ಲ. ಈ ತತ್ತ್ವವನ್ನು ನೀನು ಚನ್ನಾಗಿ ತಿಳಿದುಕೊಂಡು ಕೃತಾರ್ಥನಾಗ ಬೇಕು. ॥೬೦॥

ಇದೇ ಬ್ರಹ್ಮನೆಂಬಂತೆ, ಶಿವನೇ ಆತ್ಮ, ಶಿವನೇ ಜೀವ, ಶಿವನೇ ಬ್ರಹ್ಮ ಈ ವಿಷಯದಲ್ಲಿ ಸಂಶಯವಿಲ್ಲ. ॥೬೧॥

ಈ ಪ್ರಕರಣವನ್ನು ಒಂದುಬಾರಿಯಾದರೂ ಓದಿದರೆ ಸಾಕು, ಕ್ಷಣಮಾತ್ರ ಕೇಳಿದರೂ ಸಾಕು, ಅಥವಾ ಅರ್ಧನಿಮಿಷ ಅನುಸಂಧಾನಮಾಡಿದರೂ ಸಾಕು. ಅಂತಹವನು ಖಂಡಿತವಾಗಿಯೂ ಮುಕ್ತನಾಗುವನು. ॥೬೨-೬೩॥

ಲೋಕಾಲೋಕಪರ್ವತವೇ ಗಡಿಯಾದ ಈ ಜಗತ್ತಿಗೂ, ಅದರ ಹೊರಗಿನ ಜಗತ್ತಿಗೂ, ಮೂಲಕಾರಣವಾದ ಶ್ರೀಪರಮೇಶ್ವರನನ್ನು ವೇದಾಂತವಾಕ್ಯಗಳು ವಿಮರ್ಶಿಸುವುವು, ಸ್ತುತಿಸುವುವು, ಈಶ್ವರ ಸತ್ಯಾಸತ್ಯಾತ್ಮಕಜ್ಞಾನವನ್ನು ಆಧಾರವುರ

ಸತ್ಯಾಸತ್ಯನಿರಂಕುಶಶ್ರುತಿವಚೋವೀಚೀಭಿರಾಮೃಶ್ಯತೇ
ಯಸ್ತ್ವೇತತ್ಸದಿತೀವ ತದ್ವಚನೈರ್ನಿರ್ಮಾಮಾಂಸ್ಯತೇಯಂ ಶಿವಃ ॥೬೪॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಅಷ್ಟತ್ರಿಂಶೋಽಧ್ಯಾಯಃ

ಸ್ಸರವಾಗಿ ಪ್ರತಿಪಾದಿಸುವುವು. ಆ ಯುಕ್ತಿಗಳಿಂದಲೇ ನಾವು ಪರಶಿವನ ಸ್ವರೂಪವನ್ನರಿಯಬೇಕು. ಈ ರೀತಿ ಪರಶಿವನ ಸ್ವರೂಪವನ್ನರಿಯುವುದರಿಂದಲೇ ಕೈವಲ್ಯಸಿದ್ಧಿಯುಂಟಾಗುವುದು. ಕೈವಲ್ಯಪ್ರಾಪ್ತಿಗೆ ಶಿವಜ್ಞಾನವೇ ಮುಖ್ಯಸಾಧನವಾಗಿರುವುದು. ಆದುದರಿಂದ ಅಂತಹ ಪರಶಿವನಿಗೆ ಸಾಷ್ಟಾಂಗನಮಸ್ಕಾರಗಳು. ॥೬೪॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ಮೂವತ್ತೆಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ಋಭುರುವಾಚ ॥

ಪರಂ ಬ್ರಹ್ಮ ಪ್ರವಕ್ಷ್ಯಾಮಿ ನಿರ್ವಿಕಲ್ಪಂ ನಿರಾಮಯಂ ।
ತದೈವಾಹಂ ನ ಸಂದೇಹಃ ಸರ್ವಂ ಬ್ರಹ್ಮೈವ ಕೇವಲಂ ॥೧॥

ಚಿನ್ಮಾತ್ರಮಮಲಂ ಶಾಂತಂ ಸಚ್ಚಿದಾನಂದವಿಗ್ರಹಂ ।
ಆನಂದಂ ಪರಮಾನಂದಂ ನಿರ್ವಿಕಲ್ಪಂ ನಿರಂಜನಂ ॥೨॥

ತದೇವಾಹಂ ನ ಸಂದೇಹಃ ಸರ್ವಂ ಬ್ರಹ್ಮೈವ ಕೇವಲಂ ।
ಗುಣಾತೀತಂ ಜನಾತೀತಮವಸ್ಥಾತೀತಮವ್ಯಯಂ ॥೩॥

---

## ಮೂವತ್ತೊಂಬತ್ತನೆಯ ಅಧ್ಯಾಯವು

ಎಲೈ ನಿದಾಘಮುನಿಯೇ, ನಿರ್ಗುಣವಾದ ನಿರ್ವಿಕಾರವಾದ ಬ್ರಹ್ಮವಸ್ತುವನ್ನು ಹೇಳುವೆನು. ಆ ಬ್ರಹ್ಮವಸ್ತುವೇ ನಾನು, ಬ್ರಹ್ಮವಸ್ತುವಿನ ಹೊರತು ಬೇರೇನೂ ಇಲ್ಲ. ॥೧॥

ಬ್ರಹ್ಮವಸ್ತುವು ಚೈತನ್ಯರೂಪವಾದುದು, ನಿರ್ಮಲವಾದುದು, ಶಾಂತವಾದುದು, ಸತ್ಯಜ್ಞಾನಾನಂದರೂಪವಾದುದು, ವಿಕಾರಗಳಿಲ್ಲದುದು, ವಿಕಲ್ಪಗಳಿಲ್ಲದುದು ಆ ಬ್ರಹ್ಮವಸ್ತುವೇ ನಾನು, ಬ್ರಹ್ಮವಸ್ತುವಿನ ಹೊರತು ಬೇರೇನೂ ಇಲ್ಲ. ॥೨॥

ಗುಣಗಳಿಲ್ಲದ ಶುದ್ಧಮೂರ್ತಿಯು ನಾನು, ಜನಗಳಿಗೆ ಅಗೋಚರನು ನಾನು,

ಏವಂ ಭಾವಯ ಚೈತನ್ಯಮಹಂಬ್ರಹ್ಮಾಸ್ಮಿ ಸೋಽಸ್ಮ್ಯಹಂ ।
ಸರ್ವಾತೀತಸ್ವರೂಪೋಽಸ್ಮಿ ಸರ್ವಶಬ್ದಾರ್ಥವರ್ಜಿತಂ ॥೪॥

ಸತ್ಯೋಽಹಂ ಸರ್ವಗಶ್ಚಾಹಂ ಶುದ್ಧೋಽಹಂ ಪರಮೋಽಸ್ಮ್ಯಹಂ ।
ಅಜೋಽಹಂ ಶಾಂತರೂಪೋಽಹಮಶರೀರೋಽಹಮಾಂತರಃ ॥೫॥

ಸರ್ವಹೀನೋಽಹಮೇವಾಹಂ ಸ್ವಯಮೇವ ಸ್ವಯಂ ಮಹಃ ।
ಆತ್ಮೈವಾಹಂ ಪರಾತ್ಮಾಹಂ ಬ್ರಹ್ಮೈವಾಹಂ ಶಿವೋಽಸ್ಮ್ಯಹಂ ॥೬॥

ಚಿತ್ತಹೀನಸ್ವರೂಪೋಽಹಂ ಬುದ್ಧಿಹೀನೋಽಹಮಸ್ಮ್ಯಹಂ ।
ವ್ಯಾಪಕೋಽಹಮಹಂ ಸಾಕ್ಷೀ ಬ್ರಹ್ಮಾಹಮಿತಿ ನಿಶ್ಚಯಃ ॥೭॥

ನಿಷ್ಪ್ರಪಂಚಗಜಾರೂಢಃ ನಿಷ್ಪ್ರಪಂಚಾಶ್ವವಾಹನಃ ।
ನಿಷ್ಪ್ರಪಂಚಮಹಾರಾಜ್ಯೇ ನಿಷ್ಪ್ರಪಂಚಾಯುಧಾದಿಮಾನ್ ॥೮॥

---

ನನಗೆ ಯಾವ ಅವಸ್ಥೆಗಳೂ ಇಲ್ಲ. ನಾಶವೂ ನನಗಿಲ್ಲ, ಕೇವಲ ಚೈತನ್ಯರೂಪನು ನಾನು. ಯಾವ ಶಬ್ದಾರ್ಥವೂ ನನಗಿಲ್ಲ. ॥೩-೪॥

ಸತ್ಯವು ನಾನು, ಸರ್ವಾಂತರ್ಯಾಮಿಯು ನಾನು, ಶುದ್ಧನು ನಾನು. ಪರಮಾತ್ಮನು ನಾನು, ಜನನವು ನನಗಿಲ್ಲ, ಶರೀರವು ನನಗಿಲ್ಲ. ॥೫॥

ನನಗೆ ಯಾವುದೂ ಇಲ್ಲ. ನಾನೇ ನಾನಾಗಿರುವೆನು. ಆತ್ಮನು ನಾನು, ಪರಮಾತ್ಮನು ನಾನು, ಬ್ರಹ್ಮವಸ್ತುವು ನಾನು, ಶಿವನು ನಾನು. ॥೬॥

ನನಗೆ ಚಿತ್ತವೂ ಇಲ್ಲ, ಬುದ್ಧಿಯು ಇಲ್ಲ. ವ್ಯಾಪಕನು ನಾನು, ಸಾಕ್ಷಿಯು ನಾನು, ನಾನೇ ಬ್ರಹ್ಮವಸ್ತುವು. ॥೭॥

ಪ್ರಪಂಚಶೂನ್ಯತೆಯೆಂಬ ಆನೆಯನ್ನೇರಿ ಪ್ರಪಂಚಶೂನ್ಯತೆಯೆಂಬ ಕುದುರೆಯುಳ್ಳವನಾಗಿ ಪ್ರಪಂಚಶೂನ್ಯತೆಯೆಂಬ ಆಯುಧವನ್ನುಳ್ಳವನಾಗಿ ಪ್ರಪಂಚಶೂನ್ಯತೆಯೆಂಬ ರಾಜ್ಯವನ್ನಾಳುವೆನು. ॥೮॥

ನಿಷ್ಪ್ರಪಂಚಮಹಾವೇದೋ ನಿಷ್ಪ್ರಪಂಚಾತ್ಮಭಾವನಃ ।
ನಿಷ್ಪ್ರಪಂಚಮಹಾನಿದ್ರಃ ನಿಷ್ಪ್ರಪಂಚಸ್ವಭಾವಕಃ ॥೯॥

ನಿಷ್ಪ್ರಪಂಚಸ್ತು ಜೀವಾತ್ಮಾ ನಿಷ್ಪ್ರಪಂಚಕಲೇವರಃ ।
ನಿಷ್ಪ್ರಪಂಚಪರೀವಾರಃ ನಿಷ್ಪ್ರಪಂಚೋತ್ಸವೋಭವ ॥೧೦॥

ನಿಷ್ಪ್ರಪಂಚಸ್ತು ಕಲ್ಯಾಣಂ ನಿಷ್ಪ್ರಪಂಚಸ್ತು ದರ್ಪಣಂ ।
ನಿಷ್ಪ್ರಪಂಚರಥಾರೂಢಃ ನಿಷ್ಪ್ರಪಂಚವಿಚಾರಣಂ ॥೧೧॥

ನಿಷ್ಪ್ರಪಂಚಗೃಹಾಂತಸ್ಥೋ ನಿಷ್ಪ್ರಪಂಚಪ್ರದೀಪಕಂ ।
ನಿಷ್ಪ್ರಪಂಚಪ್ರಪೂರ್ಣಾತ್ಮಾ ನಿಷ್ಪ್ರಪಂಚಾರಿಮರ್ದನಃ ॥೧೨॥

ಚಿತ್ತಮೇವ ಪ್ರಪಂಚಂ ಹಿ ಚಿತ್ತಮೇವ ಜಗತ್ತ್ರಯಂ ।
ಚಿತ್ತಮೇವ ಮಹಾಮೋಹಶ್ಚಿತ್ತಮೇವ ಹಿ ಸಂಸೃತಿಃ ॥೧೩॥

ಚಿತ್ತಮೇವ ಮಹಾಪಾಪಂ ಚಿತ್ತಮೇವ ಹಿ ಪುಣ್ಯಕಂ ।
ಚಿತ್ತಮೇವ ಮಹಾಬಂಧಂ ಚಿತ್ತಮೇವ ಹಿ ಮುಕ್ತಿದಂ ॥೧೪॥

---

ಪ್ರಪಂಚಶೂನ್ಯತೆಯೇ ನನಗೆ ವೇದ, ಆ ಶೂನ್ಯತೆಯೇ ನನ್ನ ಭಾವನೆ, ಪ್ರಪಂಚಶೂನ್ಯತೆಯೇ ನಿದ್ರೆ, ನನ್ನ ಸ್ವಭಾವವೇ ಪ್ರಪಂಚ ಶೂನ್ಯತೆ. ॥೯॥

ಪ್ರಪಂಚಶೂನ್ಯತೆಯೇ ನನ್ನ ಜೀವಾತ್ಮ, ಆ ಶೂನ್ಯತೆಯೇ ನನಗೆ ಶರೀರ, ಪ್ರಪಂಚಶೂನ್ಯತೆಯೇ ನನಗೆ ಪರಿವಾರ, ಆ ಶೂನ್ಯತೆಯೇ ನನಗುತ್ಸವ. ॥೧೦॥

ಪ್ರಪಂಚಶೂನ್ಯತೆಯು ನನಗೆ ಮಂಗಳವು, ನನಗೆ ಕನ್ನಡಿಯು, ಪ್ರಪಂಚ ಶೂನ್ಯತೆಯು ನನಗೆ ರಥ, ಅದೇ ನನಗೆ ವಿಷಯ. ॥೧೧॥

ಪ್ರಪಂಚ ಶೂನ್ಯತೆಯೆಂಬ ಮನೆಯಲ್ಲಿದ್ದು ಪ್ರಪಂಚಶೂನ್ಯತೆಯನ್ನೇ ತುಂಬಿ ಕೊಂಡು ಪ್ರಪಂಚಶೂನ್ಯತೆಯೆಂಬ ದೀಪವನ್ನು ಬೆಳಗಿಸುತ್ತಾ ಪ್ರಪಂಚಸತ್ತೆಯೆಂಬ ಕತ್ತಲೆಯನ್ನು ಹೋಗಲಾಡಿಸುತ್ತಿರುವೆನು. ॥೧೨॥

ಚಿತ್ತವೇ ಪ್ರಪಂಚವು, ಚಿತ್ತವೇ ಮೂರು ಲೋಕಗಳು, ಚಿತ್ತವೇ ಮಹಾ ಮೋಹವು, ಚಿತ್ತವೇ ಸಂಸಾರವು. ॥೧೩॥

ಬ್ರಹ್ಮಭಾವನಯಾ ಚಿತ್ತಂ ನಾಶಯಿತ್ವಾ ನಿರಂತರಂ ।
ಬ್ರಹ್ಮಭಾವನಯಾ ಚಿತ್ತಂ ನಾಶಮೇತಿ ನ ಸಂಶಯಃ ॥೧೫॥

ಬ್ರಹ್ಮಭಾವನಯಾ ದುಃಖಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ದ್ವೈತಂ ನಾಶಮೇತಿ ನ ಸಂಶಯಃ ॥೧೬॥

ಬ್ರಹ್ಮಭಾವನಯಾ ಕಾಮಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಕ್ರೋಧಂ ನಾಶಮೇತಿ ನ ಸಂಶಯಃ ॥೧೭॥

ಬ್ರಹ್ಮಭಾವನಯಾ ಲೋಭಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಗ್ರಂಥಿಃ ನಾಶಮೇತಿ ನ ಸಂಶಯಃ ॥೧೮॥

ಬ್ರಹ್ಮಭಾವನಯಾ ಸರ್ವಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಮದಂ ನಾಶಮೇತಿ ನ ಸಂಶಯಃ ॥೧೯॥

ಬ್ರಹ್ಮಭಾವನಯಾ ಸ್ನಾನಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಮಂತ್ರಂ ನಾಶಮೇತಿ ನ ಸಂಶಯಃ ॥೨೦॥

---

ಚಿತ್ತವೇ ಮಹಾಪಾಪವು, ಚಿತ್ತವೇ ಮಹಾಪುಣ್ಯವು, ಚಿತ್ತವೇ ಮಹಾಬಂಧವು, ಚಿತ್ತವೇ ಮೋಕ್ಷದಾಯಕವು. "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬ ಮಹಾವಾಕ್ಯವು ಇದೇ ಅಭಿಪ್ರಾಯವನ್ನು ಬೋಧಿಸುತ್ತಿರುವುದು. ಎಲ್ಲಕ್ಕೂ ಮನಸ್ಸೇ ಮೂಲಕಾರಣವಾಗಿರುವುದೆಂದು ಭಾವಿಸಬೇಕು. ॥೧೪॥

ಬ್ರಹ್ಮಭಾವನೆಯಿಂದ ಆ ಚಿತ್ತವನ್ನು ನಾಶಪಡಿಸಬೇಕು, ಬ್ರಹ್ಮಭಾವನೆಯಿಂದ ಚಿತ್ತವು ನಾಶವಾಗುವುದು, ದುಃಖವು ನಾಶವಾಗುವುದು. ಭೇದವೆಲ್ಲವೂ ನಾಶವಾಗುವುದು, ಇದರಲ್ಲಿ ಸಂಶಯವಿಲ್ಲ. ॥೧೫-೧೬॥

ಬ್ರಹ್ಮಭಾವನೆಯಿಂದ ಕ್ರೋಧವೂ, ಕಾಮವೂ, ಲೋಭವೂ ಅಜ್ಞಾನಗ್ರಂಥಿಯೂ ನಾಶವಾಗುವುವು. ಇದರಲ್ಲಿ ಸಂದೇಹವಿಲ್ಲ. ॥೧೭-೧೮॥

ಬ್ರಹ್ಮಭಾವನೆಯಿಂದ ಮದವು ನಾಶವಾಗುವುದು, ಸ್ನಾನವೂ ನಾಶವಾಗುವುದು. ಮಂತ್ರತಂತ್ರಗಳೂ ಮಾಯವಾಗುವುವು. ॥೧೯-೨೦॥

ಬ್ರಹ್ಮಭಾವನಯಾ ಪೂಜಾ ಬ್ರಹ್ಮಭಾವನಯಾ ಜಪಃ ।
ಬ್ರಹ್ಮಭಾವನಯಾ ಧ್ಯಾನಂ ನಾಶಮೇತಿ ನ ಸಂಶಯಃ ॥೨೧॥

ಬ್ರಹ್ಮಭಾವನಯಾ ಪಾಪಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಪುಣ್ಯಂ ನಾಶಮೇತಿ ನ ಸಂಶಯಃ ॥೨೨॥

ಬ್ರಹ್ಮಭಾವನಯಾ ದೋಷಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಭ್ರಾಂತಿರ್ನಾಶಮೇತಿ ನ ಸಂಶಯಃ ॥೨೩॥

ಬ್ರಹ್ಮಭಾವನಯಾ ದೃಶ್ಯಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಸಂಗಂ ನಾಶಮೇತಿ ನ ಸಂಶಯಃ ॥೨೪॥

ಬ್ರಹ್ಮಭಾವನಯಾ ತೇಜೋ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಪ್ರಜ್ಞಾ ನಾಶಮೇತಿ ನ ಸಂಶಯಃ ॥೨೫॥

ಬ್ರಹ್ಮಭಾವನಯಾಽಸತ್ತಾ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಭೀತಿರ್ನಾಶಮೇತಿ ನ ಸಂಶಯಃ ॥೨೬॥

ಬ್ರಹ್ಮಭಾವನಯಾ ವೇದೋ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಶಾಸ್ತ್ರಂ ನಾಶಮೇತಿ ನ ಸಂಶಯಃ ॥೨೭॥

---

ಬ್ರಹ್ಮಭಾವನೆಯಿಂದ ಪೂಜೆಯೂ ಜಪವೂ ಧ್ಯಾನವೂ ನಾಶವಾಗುವುವು. ಇದರಲ್ಲಿ ಸಂದೇಹವಿಲ್ಲ. ॥೨೧॥

ಬ್ರಹ್ಮಭಾವನೆಯಿಂದ ಪಾಪಪುಣ್ಯಗಳು ನಾಶವಾಗುವುವು. ಬ್ರಹ್ಮಭಾವನೆಯಿಂದ ದೋಷಭ್ರಾಂತಿಗಳು ನಾಶವಾಗುವುವು ಸಂಶಯವಿಲ್ಲ. ॥೨೨-೨೩॥

ಬ್ರಹ್ಮಭಾವನೆಯಿಂದ ದೃಶ್ಯಗಳು ಮಾಯವಾಗುವುವು. ಬ್ರಹ್ಮಭಾವನೆಯಿಂದ ಸಂಗವೆಲ್ಲವೂ ನಾಶವಾಗುವುವು, ಇದರಲ್ಲಿ ಸಂದೇಹವಿಲ್ಲ. ॥೨೪॥

ಬ್ರಹ್ಮಭಾವನೆಯಿಂದ ತೇಜಸ್ಸು ನಾಶವಾಗುವುದು, ಪ್ರಜ್ಞೆಯು ಮಾಯವಾಗುವುದು, ಅಸತ್ಯವು ಶೂನ್ಯವಾಗುವುದು, ಭಯವು ನಾಶಹೊಂದುವುದು. ॥೨೫-೨೬॥

ಬ್ರಹ್ಮಭಾವನೆಯಿಂದ ವೇದವೂ ನಾಶವಾಗುವುದು, ಶಾಸ್ತ್ರವೂ ನಾಶವಾಗು

ಬ್ರಹ್ಮಭಾವನಯಾ ನಿದ್ರಾ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ಕರ್ಮ ನಾಶಮೇತಿ ನ ಸಂಶಯಃ ॥೨೮॥

ಬ್ರಹ್ಮಭಾವನಯಾ ತುರ್ಯಂ ನಾಶಮೇತಿ ನ ಸಂಶಯಃ ।
ಬ್ರಹ್ಮಭಾವನಯಾ ದ್ವಂದ್ವಂ ನಾಶಮೇತಿ ನ ಸಂಶಯಃ ॥೨೯॥

ಬ್ರಹ್ಮಭಾವನಯಾ ಪೃಚ್ಛೇದಹಂ ಬ್ರಹ್ಮೇತಿ ನಿಶ್ಚಯಂ ।
ಬ್ರಹ್ಮಭಾವನಯಾ ಬ್ರಹ್ಮ ನಾಶಮೇತಿ ನ ಸಂಶಯಃ ॥೩೦॥

ನಿಶ್ಚಯಂ ಚಾಪಿ ಸಂತ್ಯಜ್ಯ ಸ್ವಸ್ವರೂಪಾಂತರಾಸನಂ ।
ಅಹಂ ಬ್ರಹ್ಮ ಪರಂ ಬ್ರಹ್ಮ ಚಿದ್ಬ್ರಹ್ಮ ಬ್ರಹ್ಮಮಾತ್ರಕಂ ॥೩೧॥

ಜ್ಞಾನಮೇವ ಪರಂ ಬ್ರಹ್ಮ ಜ್ಞಾನಮೇವ ಪರಂ ಪದಂ ।
ದಿವಿ ಬ್ರಹ್ಮ ದಿಶೋಬ್ರಹ್ಮ ಮನೋಬ್ರಹ್ಮ ಅಹಂ ಸ್ವಯಂ ॥೩೨॥

ಕಿಂಚಿದ್ಬ್ರಹ್ಮ ಬ್ರಹ್ಮತತ್ವಂ ತತ್ವಂ ಬ್ರಹ್ಮ ತದೇವ ಹಿ ।
ಅಜೋ ಬ್ರಹ್ಮ ಶುಭಂ ಬ್ರಹ್ಮ ಆದಿ ಬ್ರಹ್ಮ ಬ್ರವೀಮಿ ತಂ ॥೩೩॥

---

ವುದು, ಅಜ್ಞಾನನಿದ್ರೆಯು ನಾಶವಾಗುವುದು, ಕರ್ಮವೂ ನಾಶವಾಗುವುದು. ॥೨೭-೨೮॥

ಬ್ರಹ್ಮಭಾವನೆಯಿಂದ ತುರೀಯ ವಸ್ತುವು ನಾಶವಾಗುವುದು ದ್ವಂದ್ವ (ಭೇದ)ವೂ ನಾಶವಾಗುವುದು, ಬ್ರಹ್ಮ, ನಾನು—ಎಂಬ ಭೇದವೂ ಲಯವಾಗುವುದು, ಬ್ರಹ್ಮ, ನಾನು—ಒಂದೇ ಎಂಬ ಭಾವ ಮೂಡುವುದು, ಬ್ರಹ್ಮಭಾವನೆಯಿಂದಲೇ "ನಾನು ಬ್ರಹ್ಮ" ನೆಂಬ ನಿಶ್ಚಯವನ್ನು ಕೇಳು (ಹೊಂದು ಅನುಭವಿಸು) ॥೨೯-೩೦॥

ಆ ನಿಶ್ಚಯವನ್ನೂ ಬಿಟ್ಟು, "ನಾನು ಬ್ರಹ್ಮ, ಪರಬ್ರಹ್ಮ, ಚೈತನ್ಯ ಬ್ರಹ್ಮ" ಎಂಬ ಜ್ಞಾನಭೇದಗಳನ್ನೂ ಬಿಟ್ಟು ಕೇವಲ ಬ್ರಹ್ಮಸ್ವರೂಪನಾಗು. ॥೩೧॥

ಜ್ಞಾನವೇ ಪರಬ್ರಹ್ಮವಸ್ತು. ಜ್ಞಾನವೇ ಪರಮಪದವಿಯು, ಆಗಸವು ಬ್ರಹ್ಮ, ದಿಕ್ಕುಗಳು ಬ್ರಹ್ಮ, ಮನಸ್ಸು ಬ್ರಹ್ಮ, ನಾನೂ ಬ್ರಹ್ಮ. ॥೩೨॥

ಸ್ವಲ್ಪವೆನ್ನುವುದೂ ಬ್ರಹ್ಮ, ತತ್ವವೂ ಬ್ರಹ್ಮ, ಬ್ರಹ್ಮವೇ ತತ್ವ, ಚತುರ್ಮುಖನು ಬ್ರಹ್ಮವಸ್ತುವೇ, ಶುಭವು ಬ್ರಹ್ಮ, ಆದಿಯು ಬ್ರಹ್ಮ. ॥೩೩॥

ಅಹಂ ಬ್ರಹ್ಮ ಹವಿರ್ಬ್ರಹ್ಮ ಕಾರ್ಯಂ ಬ್ರಹ್ಮಮಯಂ ಸದಾ ।
ನಾದೋ ಬ್ರಹ್ಮ ನದಂ ಬ್ರಹ್ಮ ತತ್ವಂ ಬ್ರಹ್ಮ ಚ ನಿತ್ಯಶಃ ॥೩೪॥

ಏತದ್ಬ್ರಹ್ಮ ಶಿಖಾಬ್ರಹ್ಮ ತದ್ಬ್ರಹ್ಮ ಬ್ರಹ್ಮ ಶಾಶ್ವತಂ ।
ನಿಜಂ ಬ್ರಹ್ಮ ಸ್ವತೋ ಬ್ರಹ್ಮ ನಿತ್ಯಂ ಬ್ರಹ್ಮ ತ್ವಮೇವ ಹಿ ॥೩೫॥

ಸುಖಂ ಬ್ರಹ್ಮ ಪ್ರಿಯಂ ಬ್ರಹ್ಮ ಮಿತ್ರಂ ಬ್ರಹ್ಮ ಸದಾಮೃತಂ ।
ಗುಹ್ಯಂ ಬ್ರಹ್ಮ ಗುರುರ್ಬ್ರಹ್ಮ ಋತಂ ಬ್ರಹ್ಮ ಪ್ರಕಾಶಕಂ ॥೩೬॥

ನಿತ್ಯಂ ಬ್ರಹ್ಮ ಸಮಂ ಬ್ರಹ್ಮ ಸಾರಂ ಬ್ರಹ್ಮ ನಿರಂಜನಂ ।
ಏಕಂ ಬ್ರಹ್ಮ ಹರಿರ್ಬ್ರಹ್ಮ ಶಿವೋ ಬ್ರಹ್ಮ ನ ಸಂಶಯಃ ॥೩೭॥

ಇದಂ ಬ್ರಹ್ಮ ತ್ವಯಾ ಬ್ರಹ್ಮ ಲೋಕಂ ಬ್ರಹ್ಮ ಸದಾ ಪರಃ ।
ಆತ್ಮಾ ಬ್ರಹ್ಮ ಪರಂ ಬ್ರಹ್ಮ ಆತ್ಮಬ್ರಹ್ಮ ನಿರಂತರಂ ॥೩೮॥

ಏಕಂ ಬ್ರಹ್ಮ ಚಿರಂ ಬ್ರಹ್ಮ ಸರ್ವ ಬ್ರಹ್ಮಾತ್ಮಕಂ ಜಗತ್ ।
ಬ್ರಹ್ಮೈವ ಬ್ರಹ್ಮ ಸದ್ಬ್ರಹ್ಮ ತತ್ಪರಂ ಬ್ರಹ್ಮ ಏವ ಹಿ ॥೩೯॥

---

ನಾನು ಬ್ರಹ್ಮ, ಹವಿಸ್ಸು ಬ್ರಹ್ಮ-ಕಾರ್ಯವು ಬ್ರಹ್ಮ, ನಾದವು ಬ್ರಹ್ಮ, ನದಿಯು ಬ್ರಹ್ಮ, ತತ್ವವು ಬ್ರಹ್ಮ. ॥೩೪॥

ಇದು ಬ್ರಹ್ಮ, ಅದು ಬ್ರಹ್ಮ, ಶಿಖೆಯು ಬ್ರಹ್ಮ, ನಿಜವು ಬ್ರಹ್ಮ ಸ್ವತ್ವವೂ ಬ್ರಹ್ಮ, ನಿತ್ಯವು ಬ್ರಹ್ಮ, ನೀನೂ ಬ್ರಹ್ಮ, ಬ್ರಹ್ಮನೇ ನೀನು. ॥೩೫॥

ಸುಖವು ಬ್ರಹ್ಮ, ಪ್ರಿಯವು ಬ್ರಹ್ಮ, ಮಿತ್ರನು ಬ್ರಹ್ಮ, ಅಮೃತವು ಬ್ರಹ್ಮ ರಹಸ್ಯವು ಬ್ರಹ್ಮ, ಗುರುವು ಬ್ರಹ್ಮ, ಸತ್ಯವು ಬ್ರಹ್ಮ, ಪ್ರಕಾಶವು ಬ್ರಹ್ಮ. ॥೩೬॥

ನಿತ್ಯವು ಬ್ರಹ್ಮ, ಸಮತೆಯು ಬ್ರಹ್ಮ, ಸಾರವು ಬ್ರಹ್ಮ, ನಿರ್ಮಲತೆಯು ಬ್ರಹ್ಮ, ಏಕತ್ವವು ಬ್ರಹ್ಮ, ಹರಿಯು ಬ್ರಹ್ಮ, ಹರನೂ ಬ್ರಹ್ಮ. ॥೩೭॥

ಇದು ಬ್ರಹ್ಮ, ನೀನು ಬ್ರಹ್ಮ, ಲೋಕವು ಬ್ರಹ್ಮ, ನಾನು ಬ್ರಹ್ಮ, ಇನ್ನೊಬ್ಬನೂ ಬ್ರಹ್ಮ, ಆತ್ಮಬ್ರಹ್ಮವೇ ಅಂತರ್ಯಾಮಿಯು. ॥೩೮॥

ಒಂದು ಬ್ರಹ್ಮ, ಬಹುಕಾಲವು ಬ್ರಹ್ಮ, ಎಲ್ಲವೂ ಬ್ರಹ್ಮ, ಜಗತ್ತೇ ಬ್ರಹ್ಮ ಮಯವಾದುದು, ಬ್ರಹ್ಮವೇ ಬ್ರಹ್ಮ, ಬ್ರಹ್ಮವೇ ಪರಬ್ರಹ್ಮ. ॥೩೯॥

ಚಿದ್ಬ್ರಹ್ಮ ಶಾಶ್ವತಂ ಬ್ರಹ್ಮ ಜ್ಞೇಯಂ ಬ್ರಹ್ಮ ನಚಾಪರಃ ।
ಆನಂದಂ ಬ್ರಹ್ಮ ಏವಾಯಮಕಾರಂ ಬ್ರಹ್ಮ ಸನ್ಮಯಂ ॥೪೦॥

ಅಹಮೇವ ಹಿ ಸದ್ಬ್ರಹ್ಮ ಅಹಮೇವ ಹಿ ನಿರ್ಗುಣಃ ।
ಅಹಮೇವ ಹಿ ನಿತ್ಯಾತ್ಮಾ ಏವಂ ಭಾವಯ ಸುವ್ರತ ॥೪೧॥

ಅಹಮೇವ ಹಿ ಶಾಸ್ತ್ರಾರ್ಥ ಇತಿ ನಿಶ್ಚಿತ್ಯ ಸರ್ವದಾ ।
ಆತ್ಮೈವ ನಾನ್ಯದ್ಭೇದೋ ಹಿ ಸರ್ವಂ ಮಿಥ್ಯೇತಿ ನಿಶ್ಚಿನು ॥೪೨॥

ಆತ್ಮೈವಾಹಂ ಚಾತ್ಮಾ ಅನಾತ್ಮಾ ನಾಸ್ತಿ ನಾಸ್ತಿ ಹಿ ।
ಆತ್ಮೈವ ಸ್ಫುರತೇ ಲೋಕೇ ಜಗದೇತಚ್ಚರಾಚರಂ ॥೪೩॥

॥ ಸೂತ ಉವಾಚ ॥

ನಿಶ್ವಂ ವಿಶ್ವತಯಾ ವಿಭಾತಿ ಹೃದಯೇ ಮೂಢಾತ್ಮನಾಂ ಬೋಧತಃ ।
ಅಜ್ಞಾನಂ ನ ನಿವರ್ತತೇ ಶ್ರುತಿಶಿರೋನಾನಾರ್ಥಾನುವೃತ್ತ್ಯಾಪಿ ಚ ।

---

ಜ್ಞಾನವು ಬ್ರಹ್ಮ, ಜ್ಞೇಯವು ಬ್ರಹ್ಮ, ಆನಂದವು ಬ್ರಹ್ಮ, ಅಕಾರವು ಬ್ರಹ್ಮ, ಸತ್ಯಸ್ವರೂಪವು ಬ್ರಹ್ಮ. ॥೪೦॥

ಎಲೈ ನಿದಾಘಮುನಿಯೇ, ನಾನು ಸತ್ಯಬ್ರಹ್ಮಸ್ವರೂಪನಾಗಿದ್ದೇನೆ, ನಿರ್ಗುಣ ಸ್ವರೂಪನಾಗಿದ್ದೇನೆ, ಮತ್ತು ನಿತ್ಯಾತ್ಮಸ್ವರೂಪನಾಗಿದ್ದೇನೆ ಎಂದು ತಿಳಿ. ॥೪೧॥

ಸರ್ವಸ್ವರೂಪವೂ ನಾನೇ ಎಂಬುದೇ ಶಾಸ್ತ್ರಾರ್ಥವು, ಎಂದು ನೀನು ನಿಶ್ಚಯಿಸಿ ಆತ್ಮನ ಹೊರತು ಇನ್ನಾವುದೂ ಭೇದಪ್ರಪಂಚವಿಲ್ಲವೆಂದೂ, ಕಾಣುವುದೆಲ್ಲವೂ ಮಿಥ್ಯೆಯೆಂದೂ ತಿಳಿಯುವವನಾಗು. ॥೪೨॥

ಆತ್ಮನೇ ನಾನು, ನಾನೇ ಆತ್ಮನು, ಅನಾತ್ಮವಸ್ತುವು ಇಲ್ಲವೇ ಇಲ್ಲ. ಲೋಕದಲ್ಲಿ ಆತ್ಮನೇ ಸ್ಥಿರಚರರೂಪವಾಗಿ ತೋರುತ್ತಲಿರುವನು. ॥೪೩॥

ಈ ಜಗತ್ತು ಸತ್ಯವೆಂಬುದಾಗಿ ತಿಳಿಯುವವರು ಮೂಢರು. ಸಾವಿರಾರು ವೇದಾಂತವಾಕ್ಯಗಳನ್ನು ಕೇಳಿದರೂ ಆ ಭೇದವಾದಿಗಳ ಅಜ್ಞಾನವು ಹೋಗ

ವಿಶ್ವೇಶಸ್ಯ ಸಮರ್ಚನೇನ ಸುಮಹಾಲಿಂಗಾರ್ಚನಾಭಸ್ಮಧೃಕ್
ರುದ್ರಾಕ್ಷಾಮಲಧಾರಣೇನ ಭಗವದ್ಧ್ಯಾನೇನ ಭಾತ್ಯಾತ್ಮವತ್ ॥೪೪॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಏಕೋನಚತ್ವಾರಿಂಶತ್ತಮೋಽಧ್ಯಾಯಃ

---

ಲಾರದು, ಭಸ್ಮರುದ್ರಾಕ್ಷಧಾರಿಯಾಗಿ ಯಾರು ಸದಾ ಶಿವಲಿಂಗವನ್ನರ್ಚಿಸುವರೋ ಶಿವಧ್ಯಾನವನ್ನು ಮಾಡುವರೋ ಅವರಿಗೆ ಮಾತ್ರ ಈ ವೇದಾಂತಜ್ಞಾನ ಉದಯಿಸುವುದು. ಆಗ ಅವರಿಗೆ ಜಗನ್ಮಿಥ್ಯಾ, ಬ್ರಹ್ಮಸತ್ಯ, ಎಂಬ ಜ್ಞಾನವು ಲಭಿಸುವುದು. ॥೪೪॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಆರನೆಯುಂಶದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಚತ್ವಾರಿಂಶೋಽಧ್ಯಾಯಃ

॥ ಋಭುರುವಾಚ ॥

ಸರ್ವಸಾರಾತ್ಸಾರತರಂ ತತಸ್ಸಾರತರಾಂತರಂ ।
ಇದಮಂತಿಮಮತ್ಯಂತಂ ಶೃಣು ಪ್ರಕರಣಂ ಮುದಾ ॥೧॥

ಬ್ರಹ್ಮೈವ ಸರ್ವಮೇವೇದಂ ಬ್ರಹ್ಮೈವಾನ್ಯನ್ನ ಕಿಂಚನ ।
ನಿಶ್ಚಯಂ ದೃಢಮಾಶ್ರಿತ್ಯ ಸರ್ವತ್ರ ಸುಖಮಾವಹ ॥೨॥

ಬ್ರಹ್ಮೈವ ಸರ್ವಭುವನಂ ಭುವನಂ ನಾಮ ಸಂತ್ಯಜ ।
ಅಹಂ ಬ್ರಹ್ಮೇತಿ ನಿಶ್ಚಿತ್ಯ ಅಹಂ ಭಾವಂ ಪರಿತ್ಯಜ ॥೩॥

---

## ನಲವತ್ತನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ಈ ಎಲ್ಲಕ್ಕಿಂತಲೂ ಸಾರತರವಾದ ಮತ್ತು ಅತಿದುರ್ಲಭವಾದ ಪ್ರಕರಣವನ್ನು ಹೇಳುವೆನು ಕೇಳು. ॥೧॥

ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವಿನ ಹೊರತು ಬೇರೇನೂ ಇಲ್ಲ ಎಂದು ದೃಢವಾಗಿ ತಿಳಿದು ಸುಖವಾಗಿರು. ॥೨॥

ಎಲ್ಲ ಭುವನಗಳೂ ಬ್ರಹ್ಮವಸ್ತುವೇ ಎಂದು ತಿಳಿದು ಆ ಭುವನಗಳೆಂಬ ಹೆಸರನ್ನೂ ಬಿಟ್ಟುಬಿಡು. ನಾನು ಬ್ರಹ್ಮನೆಂದು ನಿಶ್ಚಯಿಸಿ ನಾನು ಎಂಬ ಭಾವವನ್ನೂ ಬಿಟ್ಟು ಕೇವಲ ಬ್ರಹ್ಮಸ್ವರೂಪನಾಗು. ॥೩॥

ಸರ್ವಮೇವಲಯಂ ಯಾತಿ ಸ್ವಯಮೇವ ಪತತ್ರಿವತ್ ।
ಸ್ವಯಮೇವಲಯಂ ಯಾತಿ ಸುಪ್ತಹಸ್ತಸ್ಥಪುಷ್ಪವತ್ ॥೪॥

ನ ತ್ವಂ ನಾಹಂ ನ ಪ್ರಪಂಚಂ ಸರ್ವಂ ಬ್ರಹ್ಮೇತಿ ಕೇವಲಂ ।
ನ ಭೂತಂ ನ ಚ ಕಾರ್ಯಂ ಚ ಸರ್ವಂ ಬ್ರಹ್ಮೈವ ಕೇವಲಂ ॥೫॥

ನ ದೈವಂ ನ ಚ ಕಾರ್ಯಾಣಿ ನ ದೇಹಂ ನೇಂದ್ರಿಯಾಣಿ ಚ ।
ನ ಜಾಗ್ರನ್ನ ಚ ವಾ ಸ್ವಪ್ನಂ ನ ಸುಷುಪ್ತಿಸ್ತುರೀಯಕಂ ॥೬॥

ಇದಂ ಪ್ರಪಂಚಂ ನಾಸ್ತ್ಯೇವ ಸರ್ವಂ ಬ್ರಹ್ಮೇತಿ ನಿಶ್ಚಯಂ ।
ಸದಾ ಬ್ರಹ್ಮವಿಚಾರಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ॥೭॥

ತಥಾ ದ್ವೈತಪ್ರತೀತಿಶ್ಚ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಸರ್ವಂ ಮಿಥ್ಯಾ ಸದಾ ಮಿಥ್ಯಾ ಸರ್ವಂ ಬ್ರಹ್ಮೇತಿ ನಿಶ್ಚಿನು ॥೮॥

---

ಹೀಗೆ ಬ್ರಹ್ಮಭಾವವುಳ್ಳವನಾದರೆ ಎಲ್ಲ ಭೇದಪ್ರಪಂಚವೂ ಸಹ ಬೆಂಕಿಯಲ್ಲಿ ಬೀಳುವ ದೀಪದ ಹುಳುವಿನಂತೆ ತಾನಾಗಿಯೇ ಲಯವಾಗುವುದು. ನಿದ್ರಿಸಿದವನ ಕೈಯಲ್ಲಿರುವ ಹೂವಿನಂತೆ ತಾನಾಗಿಯೇ ಮಮತೆಯಿಲ್ಲದೆ ಮರೆಯಾಗುವುದು. ॥೪॥

ನೀನು, ನಾನು, ಪ್ರಪಂಚ, ಭೂತಗಳು, ಕಾರ್ಯಗಳು ಇವಾವುವೂ ಇಲ್ಲವು. ಎಲ್ಲವೂ ಬ್ರಹ್ಮವಸ್ತುವೇ, ಆ ವಸ್ತುವಿನ ಹೊರತು ಬೇರೇನೂ ಇಲ್ಲ. ॥೫॥

ಅದೃಷ್ಟವು ಇಲ್ಲ, ಅದೃಷ್ಟ ಕಾರ್ಯವೂ ಇಲ್ಲ, ಪ್ರಯತ್ನವು ಇಲ್ಲ, ದೇಹವು ಇಲ್ಲ, ಇಂದ್ರಿಯಗಳಿಲ್ಲ, ಜಾಗ್ರತ್ ಸ್ವಪ್ನ ಸುಷುಪ್ತಿ ಈ ಮೂರವಸ್ಥೆಗಳೂ ಇಲ್ಲ, ನಾಲ್ಕನೆಯ ಅವಸ್ಥೆಯೂ ಇಲ್ಲ, ಈ ಪ್ರಪಂಚವು ಎಲ್ಲವೂ ಬ್ರಹ್ಮವಸ್ತುವೇ. ॥೬॥

ಯಾವಾಗಲೂ ಬ್ರಹ್ಮವಿಚಾರವನ್ನೇ ಮಾಡು. ಭೇದಪ್ರತೀತಿಯೆಲ್ಲವೂ ಮಿಥ್ಯೆ (ಸುಳ್ಳು) ಯೆಂದೂ ಎಲ್ಲವೂ ಮಿಥ್ಯೆಯೆಂದೂ ತಿಳಿ. ಬ್ರಹ್ಮವಸ್ತುವಿನ ಹೊರತು ಬೇರಾವುದೂ ಇಲ್ಲ. ॥೭-೮॥

ಸದಾಹಂ ಭಾವರೂಪಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ।
ನಿತ್ಯಾನಿತ್ಯವಿವೇಕಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ॥೯॥

ಭಾವಾಭಾವಪ್ರತೀತಿಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಗುಣದೋಷವಿಭಾಗಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೦॥

ಕಾಲಾಕಾಲವಿಭಾಗಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಅಹಂ ಜೀವೇತ್ಯನುಭವಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೧॥

ಅಹಂ ಮುಕ್ತೋऽಸ್ಮ್ಯನುಭವಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಸರ್ವಂ ಬ್ರಹ್ಮೇತಿ ಕಲನಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೨॥

ಸರ್ವಂ ನಾಸ್ತೀತಿ ವಾರ್ತಾ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ।
ದೇವತಾಂತರಸತ್ತಾಕಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೩॥

ದೇವತಾಂತರಪೂಜಾ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ।
ದೇಹೋऽಹಮಿತಿ ಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೪॥

---

ಅಹಂಭಾವ, (ನಾನು ಎಂಬ ವ್ಯವಹಾರ) ನಿತ್ಯ ಅನಿತ್ಯವಸ್ತುಗಳ ವಿವೇಕ, ಇವೆಲ್ಲವೂ ಬ್ರಹ್ಮವಸ್ತುವೇ ಬೇರೆಯಲ್ಲವೆಂದು ತಿಳಿ. ॥೯॥

ಭಾವ-ಅಭಾವಗಳ ಜ್ಞಾನವೆಲ್ಲವೂ ಬ್ರಹ್ಮವೆಂದು ನಿಶ್ಚಯಿಸು. ಇದರಂತೆಯೇ ಗುಣದೋಷವಿಚಾರ ಇವೆಲ್ಲವೂ ಬ್ರಹ್ಮವಸ್ತುವೇ ಎಂದು ಭಾವಿಸು. ॥೧೦॥

ಕಾಲ-ಅಕಾಲಗಳ ವಿಭಾಗ, ನಾನು ಜೀವನೆಂಬ ಅನುಭವ, ನಾನು ಮುಕ್ತನೆಂಬ ಅನುಭವ, ಎಲ್ಲವೂ ಬ್ರಹ್ಮವಸ್ತುವೆಂಬ ಅನುಭವ ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೧೧-೧೨॥

ಯಾವುದೂ ಇಲ್ಲವೆಂಬ ವಾರ್ತೆಯೂ, ನೂರಾರು ದೇವತೆಗಳಿರುವರೆಂಬ ಕಲ್ಪನೆಯೂ, ನೂರೆಂಟು ದೇವತೆಗಳ ಪೂಜೆಯೂ, ದೇಹವು ನಾನೆಂಬ ದೇಹಾತ್ಮ ಭಾವನೆಯೂ ಸಹ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೧೩-೧೪॥

ಬ್ರಹ್ಮಾಹಮಿತಿ ಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಗುರುಶಿಷ್ಯಾದಿಕಂ ಸರ್ವಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೫॥

ತುಲ್ಯಾತುಲ್ಯಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ವೇದಶಾಸ್ತ್ರಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೬॥

ಚಿತ್ತಸತ್ತಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೭॥

ಬುದ್ಧಿನಿಶ್ಚಯಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಮನೋವಿಕಲ್ಪಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೮॥

ಅಹಂಕಾರಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಪಂಚಭೂತಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೯॥

ಶಬ್ದಾದಿಸತ್ತಾಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ದಿಗ್ವಾತಾರ್ಕಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೦॥

ಕರ್ಮೇಂದ್ರಿಯಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ವಚನಾದಾನಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೧॥

ಮುನೀಂದ್ರೋಪೇಂದ್ರಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಮನೋಬುಧ್ಯಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೨॥

---

ನಾನು ಬ್ರಹ್ಮನೆಂಬ ನಿಶ್ಚಯ, ಗುರುಶಿಷ್ಯಕಲ್ಪನೆ, ಸದೃಶಾಸದೃಶಕಲ್ಪನೆ, ವೇದಶಾಸ್ತ್ರಗಳ ಕಲ್ಪನೆ, ಚಿತ್ತವು, ಸತ್ತೆ, ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೧೫-೧೬-೧೭॥

ಬುದ್ಧಿಯ ನಿಶ್ಚಯಸಂಕಲ್ಪ, ಮನಸ್ಸಿನ ಸಂದೇಹವಿರುದ್ಧಜ್ಞಾನಸಂಕಲ್ಪಗಳು ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೧೮॥

ಅಹಂಕಾರಗಳ ಕಲ್ಪನೆ, ಪಂಚಭೂತಗಳ ಕಲ್ಪನೆ, ಶಬ್ದಾದಿಗುಣಗಳ ಕಲ್ಪನೆ, ದಿಕ್ಕು, ವಾಯು, ಸೂರ್ಯಾದಿಗಳ ಕಲ್ಪನೆ ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೧೯-೨೦॥

ಕರ್ಮೇಂದ್ರಿಯಗಳ ಕಲ್ಪನೆ, ಅವುಗಳ ಕಾರ್ಯಗಳಾದ ವಚನ, ಆದಾನಾದಿಗಳ

ಸಂಕಲ್ಪಾಧ್ಯವಸಾಯಾದಿ ಸರ್ವಂ ಬ್ರಹ್ಮೇತಿ ನಿಶ್ಚಿನು ।
ರುದ್ರಕ್ಷೇತ್ರಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೩॥

ಪ್ರಾಣಾದಿದಶಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಮಾಯಾವಿದ್ಯಾದೇಹಜೀವ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೪॥

ಸ್ಥೂಲವ್ಯಷ್ಟ್ಯಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಸೂಕ್ಷ್ಮವ್ಯಷ್ಟ್ಯಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೫॥

ವ್ಯಷ್ಟ್ಯಜ್ಞಾನಾದಿಸಂಕಲ್ಪಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ವಿಶ್ವಂ ವೈಶ್ವಾನರತ್ವಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೬॥

ತೈಜಸಪ್ರಾಜ್ಞಭೇದಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ।
ವಾಚ್ಯಾರ್ಥಂ ಚಾಪಿ ಲಕ್ಷ್ಯಾರ್ಥಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೭॥

ಜಹಲ್ಲಕ್ಷಣಯಾನೈಕ್ಯಮಜಹಲ್ಲಕ್ಷಣಾಧ್ರುವಂ ।
ಭಾಗತ್ಯಾಗೇನ ನಿತ್ಯೈಕ್ಯಂ ಸರ್ವಂ ಬ್ರಹ್ಮ ಉಪಾಧಿಕಂ ॥೨೮॥

---

ಕಲ್ಪನೆ, ಮುನೀಂದ್ರ, ಉಪೇಂದ್ರ ಮುಂತಾದ ಕಲ್ಪನೆ, ಮನಸ್ಸು, ಬುದ್ಧಿ ಇವುಗಳ ಕಲ್ಪನೆ ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೨೧-೨೨॥

ಸಂಕಲ್ಪನಿಶ್ಚಯಾದಿಗಳು, ರುದ್ರಕ್ಷೇತ್ರಗಳ ಕಲ್ಪನೆ, ಹತ್ತು ಪ್ರಾಣಗಳ ಕಲ್ಪನೆ, ಮಾಯೆ, ಅವಿದ್ಯೆ, ದೇಹ, ಜೀವ ಇವುಗಳ ಕಲ್ಪನೆ ಇವೆಲ್ಲ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ. ॥೨೩-೨೪॥

ಮಹಾವಸ್ತುವೆಂಬ ಚಿಕ್ಕವಸ್ತುವೆಂಬ ಸಂಕಲ್ಪಗಳು, ಚಿಕ್ಕಚಿಕ್ಕ ಅಜ್ಞಾನಗಳ ಕಲ್ಪನೆ, ವಿಶ್ವವೈಶ್ವಾನರಗಳೆಂಬ ಭೇದಕಲ್ಪನೆ, ತೈಜಸಪ್ರಾಜ್ಞರೆಂಬ ಭೇದಕಲ್ಪನೆ, ವಾಚ್ಯಾರ್ಥ ಲಕ್ಷ್ಯಾರ್ಥಗಳೆಂಬ ಭೇದ—ಇವೆಲ್ಲವೂ ಬ್ರಹ್ಮವಸ್ತುವೇ ವಿನಾ ಬೇರೆಯಲ್ಲ, ಬೇರೆಯಿಲ್ಲ. ॥೨೫-೨೬-೨೭॥

ತತ್ತ್ವಮಸಿ ಎಂಬಲ್ಲಿ ಸರ್ವಜ್ಞನಾದ ಈಶ್ವರನಿಗೂ ಅಸರ್ವಜ್ಞನಾದ ಜೀವನಿಗೂ ಅಭೇದವು ಕೂಡದುದರಿಂದ ಸರ್ವಜ್ಞತ್ವಾ ಸರ್ವಜ್ಞತ್ವರೂಪ ಭಾಗಗಳನ್ನು ತ್ಯಜಿಸಿ, ಜಹಲ್ಲಕ್ಷಣೆ ಅಜಹಲ್ಲಕ್ಷಣೆಗಳಿಂದ ಭಿನ್ನವಾದ ಭಾಗತ್ಯಾಗಲಕ್ಷಣೆಯಿಂದ

ಲಕ್ಷ್ಯಂ ಚ ನಿರುಪಾಧ್ಯೈಕ್ಯಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಏವಮಾಹುರ್ಮಹಾತ್ಮಾನಂ ಸರ್ವಂ ಬ್ರಹ್ಮೇತಿ ಕೇವಲಂ ॥೨೯॥

ಸರ್ವಮಂತಃ ಪರಿತ್ಯಜ್ಯ ಅಹಂ ಬ್ರಹ್ಮೇತಿ ಭಾವಯ ॥೩೦॥

ಅಸಂಕಲಿತಕಾಪಿಲೈರ್ಮಧುಹರಾಕ್ಷಿಪೂಜ್ಯಾಂಬುಜಂ ।
ಪ್ರಭಾಂಘ್ರಿಜನಿನೋತ್ತಮೋಪರಿಷಿಚೇದ್ಯದೀಂದುಪ್ರಭಂ ।
ತಂಡೀಡಿರನಿಭೋತ್ತಮೋತ್ತಮಮಹಾಖಂಡಾಜ್ಯದಧ್ನಾಪರಂ
ಕ್ಷೀರಾದ್ಯೈರಭಿಷಿಂಚ್ಯ ಮುಕ್ತಿಪರಮಾನಂದಂ ಲಭೇಚ್ಛಾಂಭವಂ ॥೩೧॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಚತ್ವಾರಿಂಶೋಽಧ್ಯಾಯಃ

---

ಕೇವಲ ಆತ್ಮರಿಗೆ ಅಭೇದವೆಂದು ವೇದಾಂತ ಸಿದ್ಧಾಂತವು. ಈ ಸಿದ್ಧಾಂತವೂ ಬ್ರಹ್ಮ ವಸ್ತುವೇ. (ಭಾಗತ್ಯಾಗಲಕ್ಷಣೆಯನ್ನೇ ಜಹದಜಹಲ್ಲಕ್ಷಣೆ ಎನ್ನುವರು) ॥೨೮॥

ಒಟ್ಟಿನಲ್ಲಿ ತತ್ತ್ವಮಸಿ—ಎಂಬಲ್ಲಿ ಉಪಾಧಿಗಳನ್ನು ಬಿಟ್ಟು ಕೇವಲ ಲಕ್ಷ್ಯ ವಸ್ತುವಾದ ಆತ್ಮರಿಗೆ ಅಭೇದವೆಂದು ಸಿದ್ಧಾಂತವು. ಈ ಸಿದ್ಧಾಂತವನ್ನು ತಿಳಿದು ಕೊಂಡು ಮಿಕ್ಕದ್ದೆಲ್ಲವನ್ನೂ ಬಿಟ್ಟು ನಾನೇ ಬ್ರಹ್ಮನೆಂದು ಭಾವಿಸು. ॥೨೯-೩೦॥

ಮಾಧವನಿಂದ ಕಣ್ಣನ್ನೇ ಕಮಲವಾಗರ್ಪಿಸಿ ಪೂಜಿಸಲ್ಪಟ್ಟಿರುವ, ಪೂರ್ಣ ಮಿಯ ಚಂದ್ರನಂತೆ ನಿರ್ಮಲ ತೇಜಸ್ವಿಯಾದ ಪರಶಿವನನ್ನು, ಭಕ್ತಿಪೂರ್ವಕವಾಗಿ ಪ್ರಶಸ್ತವಾದ ಹಾಲು, ಮೊಸರು ತುಪ್ಪ-ಮೊದಲಾದವುಗಳಿಂದ ಅಭಿಷೇಕಮಾಡಿ ಸಹಸ್ರನಾಮಾದಿಗಳಿಂದ ಪೂಜಿಸಿ ಮುಕ್ತಿಯ ಪರಮಾನಂದವನ್ನು ಹೊಂದು. ॥೩೧॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯಂಶದಲ್ಲಿ ನಲವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಏಕಚತ್ವಾರಿಂಶೋಽಧ್ಯಾಯಃ

॥ ಋಭುರುವಾಚ ॥

ಅಹಂ ಬ್ರಹ್ಮ ನ ಸಂದೇಹ ಅಹಂ ಬ್ರಹ್ಮ ನ ಸಂಶಯಃ ।
ಅಹಂ ಬ್ರಹ್ಮೈವ ನಿತ್ಯಾತ್ಮಾ ಅಹಮೇವ ಪರಾತ್ಪರಃ ॥೧॥

ಚಿನ್ಮಾತ್ರೋಽಹಂ ನ ಸಂದೇಹ ಇತಿ ನಿಶ್ಚಿತ್ಯ ತಂ ತ್ಯಜ ।
ಸತ್ಯಂ ಸತ್ಯಂ ಪುನಸ್ಸತ್ಯಮಾತ್ಮನೋಽನ್ಯನ್ನ ಕಿಂಚನ ॥೨॥

ಶಿವಪಾದದ್ವಯಂ ಸ್ಪೃಷ್ಟ್ವಾ ವದಾಮೀದಂ ನ ಕಿಂಚನ ।
ಗುರುಪಾದದ್ವಯಂ ಸ್ಪೃಷ್ಟ್ವಾ ವದಾಮೀದಂ ನ ಕಿಂಚನ ॥೩॥

---

## ನಲವತ್ತೊಂದನೆಯ ಅಧ್ಯಾಯವು

ಎಲೈ ನಿದಾಘನೇ, ಕೇಳು, ನಾನೇ ಬ್ರಹ್ಮನು, ಇದರಲ್ಲಿ ಸಂಶಯವಿಲ್ಲ, ಸರ್ವೋತ್ತಮನಾದ ನಿತ್ಯನಾದ ಬ್ರಹ್ಮನೇ ನಾನು. ॥೧॥

ಚೈತನ್ಯಸ್ವರೂಪನು ನಾನು ಎಂದು ತಿಳಿದು ಅಸತ್ಯವಾದೀ ಜಗತ್ತನ್ನು ಇದು ಸತ್ಯವಾದುದು, ಆತ್ಮನ ಹೊರತು ಬೇರೆ ಏನೂ ಇಲ್ಲ. ॥೨॥

ಶಿವನ ಪಾದಗಳನ್ನು ಮುಟ್ಟಿಕೊಂಡು ಹೇಳುತ್ತೇನೆ. ಈ ಜಗತ್ತೇನೂ ಸ್ಥಿರವಲ್ಲ. ಗುರುವಿನ ಪಾದಗಳನ್ನು ಮುಟ್ಟಿಕೊಂಡು ಆಣೆಯಾಗಿ ಹೇಳುತ್ತೇನೆ. ಈ ಜಗತ್ತು ಇಲ್ಲವೇ ಇಲ್ಲ. ॥೩॥

ಜಿಹ್ವಯಾ ಪರಶುಂ ತಪ್ತಂ ಧಾರಯಾಮಿ ನ ಸಂಶಯಃ ।
ವೇದಶಾಸ್ತ್ರಾದಿಕಂ ದೃಷ್ಟ್ವಾ ವದಾಮಿಾದಂ ನ ಸಂಶಯಃ ॥೪॥

ನಿಶ್ಚಯಾತ್ಮಾನಿಶ್ಚಯಸ್ತ್ವಂ ನಿಶ್ಚಯೇನ ಸುಖೀ ಭವ ।
ಚಿನ್ಮಯಸ್ತ್ವಂ ಚಿನ್ಮಯತ್ವಂ ಚಿನ್ಮಯಾನಂದ ಏವ ಹಿ ॥೫॥

ಬ್ರಹ್ಮೈವ ಬ್ರಹ್ಮ ಭೂವಾತ್ವಂ ಬ್ರಹ್ಮೈವ ತ್ವಂ ನ ಸಂಶಯಃ ।
ಸರ್ವಮುಕ್ತಂ ಭಗವತಾ ಯೋಗಿನಾಮಪಿ ದುರ್ಲಭಂ ॥೬॥

ದೇವಾನಾಂ ಚ ಋಷೀಣಾಂ ಚ ಅತ್ಯಂತಂ ದುರ್ಲಭಂ ಸದಾ ।
ಐಶ್ವರಂ ಪರಮಂ ಜ್ಞಾನಂ ಉಪದಿಷ್ಟಂ ಶಿವೇನ ಹಿ ॥೭॥

ಏತಜ್ಞ್ಞಾನಂ ಸಮಾನೀತಂ ಕೈಲಾಸಾಚ್ಛಂಕರಾಂತಿಕಾತ್ ।
ದೇವಾನಾಂ ದಕ್ಷಿಣಾಮೂರ್ತಿರ್ದಶಸಾಹಸ್ರವತ್ಸರಾನ್ ॥೮॥

---

ವೇದಶಾಸ್ತ್ರಗಳನ್ನು ನೋಡಿ ಸ್ವಾನುಭವದಿಂದಲೂ ಈ ಮಾತನ್ನು ನಿನಗೆ ಹೇಳುತ್ತಲಿರುವೆನು. ನಾಲಿಗೆಯ ಮೇಲೆ ಕಾದ ಕೊಡಲಿಯನ್ನು ತಂದಿರಿಸಿದರೂ ನಾನು ಈ ಜಗತ್ತು ಅಸತ್ಯವೆಂಬ ವಿಷಯವನ್ನೇ ಹೇಳುತ್ತೇನೆ. ॥೪॥

ನಾನು ಚೈತನ್ಯಮೂರ್ತಿಯು, ಆನಂದಮಯನು ಎಂಬ ನಿಶ್ಚಯವನ್ನು ಹೊಂದಿ ಸುಖಿಯಾಗು, ಆ ನಿಶ್ಚಯವೂ ನೀನೇ. ॥೫॥

ನೀನು ವ್ಯಾಪಕನಾದ ಬ್ರಹ್ಮವಸ್ತುವೇ ಆಗಿರುವೆ, ಸಂಶಯವಿಲ್ಲ. ಈ ವಿಷಯವನ್ನು ಭಗವಾನ್ ಶಂಕರನೇ ಹೇಳಿರುವನು. ಈ ಆತ್ಮಜ್ಞಾನವು ಯೋಗಿಗಳಿಗೂ ದುರ್ಲಭವಾದುದು. ॥೬॥

ದೇವತೆಗಳು ಮತ್ತು ಋಷಿಗಳು ಇವರಿಗೂ ಈ ಜ್ಞಾನವು ದುರ್ಲಭವಾದುದು. ಈ ಈಶ್ವರೀಯಜ್ಞಾನವನ್ನು ಶಿವನೇ ಉಪದೇಶಿಸಿರುವನು. ॥೭॥

ಈ ಜ್ಞಾನವನ್ನು ಕೈಲಾಸದಿಂದ ಶಂಕರನ ಸನ್ನಿಧಿಯಿಂದಲೇ ತಂದಿರುವರು. ಇದನ್ನು ದಕ್ಷಿಣಾಮೂರ್ತಿಯಾದ ಈಶ್ವರನೇ ದೇವತೆಗಳಿಗೆ ಹತ್ತುಸಾವಿರ ವರ್ಷಗಳವರೆಗೆ ಉಪದೇಶಿಸಿದನು. ॥೮॥

ವಿಘ್ನೇಶೋ ಬಹುಸಾಹಸ್ರಂ ವತ್ಸರಂ ಚೋಪದಿಷ್ಟವಾನ್ ।
ಸಾಕ್ಷಾಚ್ಛಿವೋಪಿ ಪಾರ್ವತ್ಯೈ ವತ್ಸರಂ ಚೋಪದಿಷ್ಟವಾನ್ ॥೯॥

ಕ್ಷೀರಾಬ್ಧೌ ಚ ಮಹಾವಿಷ್ಣುಃ ಬ್ರಹ್ಮಣಶ್ಚೋಪದಿಷ್ಟವಾನ್ ।
ಕದಾಚಿತ್ ಬ್ರಹ್ಮಲೋಕೇ ಚ ಮತ್ಪಿತುಶ್ಚೋಕ್ತವಾನಹಂ ॥೧೦॥

ನಾರದಾದಿ ಋಷೀಣಾಂ ಚ ಉಪದಿಷ್ಟಂ ಮಹದ್ಬಹು ।
ಆಯಾತಯಾಮಂ ವಿಸ್ತಾರಂ ಗೃಹೀತ್ವಾಹಮಿಹಾಗತಃ ॥೧೧॥

ನ ಸಮಂ ಪಾದಮೇಕಸ್ಯ ಯಜ್ಞಕೋಟಿಫಲಂ ಲಭೇತ್ ।
ನ ಸಮಂ ಪಾದಮೇಕಂ ಚ ತೀರ್ಥಕೋಟಿಫಲಂಲಭೇತ್ ॥೧೨॥

ನ ಸಮಂ ಗ್ರಂಥಮೇಕಸ್ಯ ಭೂಮಿದಾನಫಲಂ ಲಭೇತ್ ।
ಏಕಾನುಭವಮಾತ್ರಸ್ಯ ನ ಸಮಂ ಸರ್ವದಾನಕಂ ॥೧೩॥

---

ಗಣೇಶನೂ ಈ ಈಶ್ವರೀಯಜ್ಞಾನವನ್ನು ಅನೇಕ ಸಾವಿರ ವರ್ಷಗಳ ವರೆಗೆ ಜನರಿಗೆ ಉಪದೇಶಿಸಿದನು. ಸಾಕ್ಷಾತ್ ಶಿವನೂ ಕೂಡ ಪಾರ್ವತಿಗೆ ಈ ಶಿವರಹಸ್ಯವನ್ನು ಉಪದೇಶಿಸಿದನು. ॥೯॥

ಕ್ಷೀರಸಾಗರದಲ್ಲಿ ಮಹಾವಿಷ್ಣುವು ಈ ಈಶ್ವರೀಯಜ್ಞಾನವನ್ನು ಬ್ರಹ್ಮದೇವನಿಗೆ ಉಪದೇಶಿಸಿದನು. ಬ್ರಹ್ಮಲೋಕದಲ್ಲಿ ಬ್ರಹ್ಮನು ಒಂದು ದಿನ ಇದನ್ನು ನನಗೂ ನಾರದಾದಿ ಋಷಿಗಳಿಗೂ ಉಪದೇಶಿಸಿದನು. ವಿಸ್ತಾರವಾದ ಆ ಗ್ರಂಥಭಾಗವನ್ನೇ ಕೇಳಿಕೊಂಡು ನಾನಿಲ್ಲಿಗೆ ಬಂದೆನು. ॥೧೦-೧೧॥

ಈ ಗ್ರಂಥದ ಒಂದು ಪದ್ಯದ ಒಂದು ಪಾದವನ್ನು ಕೇಳಿದರೂ ಸಹ ಕೋಟಿಯಜ್ಞಫಲಗಳು ಮತ್ತು ಕೋಟಿತೀರ್ಥಗಳ ಫಲಗಳು ಅನಾಯಾಸವಾಗಿ ಲಭಿಸುವುವೆಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ॥೧೨॥

ಇದರ ಒಂದು ಪದ್ಯಕ್ಕೂ ಸಹ ಭೂದಾನದ ಫಲವು ಸರಿಯಾಗಲಾರದು. ಇದನ್ನು ಒಂದು ಬಾರಿ ಕೇಳಿದುದರ ಅನುಭವವನ್ನು ದಾನಗಳೆಲ್ಲವುಗಳ ಫಲವೂ ಸರಿಗಟ್ಟಲಾರದು. ॥೧೩॥

ಶ್ಲೋಕಾರ್ಥಶ್ರವಣಸ್ಯಾಪಿ ನ ಸಮಂ ಕಿಂಚಿದೇವ ಹಿ ।
ತಾತ್ಪರ್ಯಶ್ರವಣಾಭಾವೇ ಪಠನ್ ತೂಷ್ಣೀಂ ಸಮುಚ್ಛ್ರಿತೇ ॥೧೪॥

ಸರ್ವಂ ಸಂತ್ಯಜ್ಯ ಸತತಂ ಏತದ್ಗ್ರಂಥಂ ಸಮಭ್ಯಸೇತ್ ।
ಸರ್ವಮಂತ್ರಂ ಪರಿತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೧೫॥

ಸರ್ವತಂತ್ರಾಂಶ್ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಸರ್ವದಾನಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೧೬॥

ಸರ್ವಸ್ನಾನಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಸರ್ವಭಾವಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೧೭॥

ಸರ್ವಹೋಮಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಸರ್ವದೇವಾಂಶ್ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೧೮॥

---

ಅರ್ಧಶ್ಲೋಕವನ್ನು ಕೇಳಿದರೂ ಸಾಕು—ಅದಕ್ಕೆ ಸಮನಾದ ಪುಣ್ಯ ಕರ್ಮವೇ ಇಲ್ಲ. ಈ ಗ್ರಂಥವು ಅರ್ಥವಾಗದಿದ್ದರೂ ಅಡ್ಡಿಯಿಲ್ಲ. ಸುಮ್ಮನೆ ಪಾರಾಯಣ ಮಾಡಿದರೂ ಫಲವು ಲಭಿಸುವುದು. ॥೧೪॥

ಎಲ್ಲ ಕಾರ್ಯವನ್ನೂ ಬಿಟ್ಟು ಎಲ್ಲ ಮಂತ್ರಗಳನ್ನೂ ಬಿಟ್ಟು ಈ ಗ್ರಂಥವನ್ನು ಯಾವಾಗಲೂ ಅಭ್ಯಾಸಿಸಬೇಕು. ॥೧೫॥

ಎಲ್ಲ ತಂತ್ರಗಳನ್ನೂ ಎಲ್ಲ ದಾನಗಳನ್ನೂ ಬಿಟ್ಟು ಈ ಶಿವರಹಸ್ಯ ಗ್ರಂಥವನ್ನು ಯಾವಾಗಲೂ ಓದಬೇಕು. ॥೧೬॥

ಸರ್ವವಿಧವಾದ ಸ್ನಾನಗಳನ್ನೂ ಬಿಟ್ಟು ಸರ್ವವಿಧವಾದ ಭಾವಗಳನ್ನೂ ಬಿಟ್ಟು, ಸರ್ವವಿಧವಾದ ಹೋಮಗಳನ್ನೂ ಬಿಟ್ಟು, ಸರ್ವವಿಧ ದೇವತೆಗಳನ್ನೂ ಬಿಟ್ಟು, ಈ ಶಿವರಹಸ್ಯ ಗ್ರಂಥವನ್ನು ಓದಬೇಕು. ॥೧೭-೧೮॥

ಎಲ್ಲ ಪೂಜೆಗಳನ್ನೂ ಎಲ್ಲ ರಹಸ್ಯಗಳನ್ನೂ ಎಲ್ಲ ಸೇವೆಗಳನ್ನೂ ಎಲ್ಲ ಅಸ್ತಿತ್ವಗಳನ್ನೂ ಬಿಟ್ಟು ಈ ಗ್ರಂಥವನ್ನು ಅಭ್ಯಸಿಸಬೇಕು. ॥೧೯-೨೦॥

ಸರ್ವಪೂಜಾಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಸರ್ವಗುಹ್ಯಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೧೯॥

ಸರ್ವಸೇವಾಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಸರ್ವಾಸ್ತಿತ್ವಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೨೦॥

ಸರ್ವಪಾಠಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಸರ್ವಾಭ್ಯಾಸಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೨೧॥

ದೇಶಿಕಂ ಚ ಪರಿತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಗುರುಂ ಚಾಪಿ ಪರಿತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೨೨॥

ಸರ್ವಲೋಕಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ।
ಸರ್ವೈಶ್ವರ್ಯಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಭ್ಯಸೇತ್ ॥೨೩॥

ಸರ್ವಸಂಕಲ್ಪಂ ಸಂತ್ಯಜ್ಯ ಏತದ್ಗ್ರಂಥಂ ಸದಾಽಭ್ಯಸೇತ್ ।
ಸರ್ವಪುಣ್ಯಂ ಚ ಸಂತ್ಯಜ್ಯ ಏತದ್ಗ್ರಂಥಂ ಸದಾಽಭ್ಯಸೇತ್ ॥೨೪॥

ಏತದ್ಗ್ರಂಥಂ ಪರಂ ಬ್ರಹ್ಮ ಏತದ್ಗ್ರಂಥಂ ಸದಾಽಭ್ಯಸೇತ್ ।
ಅತ್ರೈವ ಸರ್ವವಿಜ್ಞಾನಮತ್ರೈವ ಪರಮಂ ಪದಂ ॥೨೫॥

ಅತ್ರೈವ ಪರಮಂ ಮೋಕ್ಷಮತ್ರೈವ ಸಕಲಂ ಜಪಂ ।
ಏತದ್ಗ್ರಂಥಂ ಪಠನ್ ಲಕ್ಷ್ಮೀಂ ಸದ್ಯೋಮುಕ್ತಿಮವಾಪ್ನುಯಾತ್ ॥೨೬॥

---

ಎಲ್ಲ ಪಾಠಗಳನ್ನೂ, ಎಲ್ಲ ಅಭ್ಯಾಸಗಳನ್ನೂ, ಆಚಾರ್ಯನನ್ನೂ, ಗುರುವನ್ನೂ ಎಲ್ಲ ಲೋಕಗಳನ್ನೂ, ಎಲ್ಲ ಐಶ್ವರ್ಯಗಳನ್ನೂ ಬಿಟ್ಟು ಈ ಶಿವರಹಸ್ಯ ಮಹಾ ಗ್ರಂಥವನ್ನು ಓದಬೇಕು. ॥೨೧-೨೨-೨೩॥

ಎಲ್ಲ ಸಂಕಲ್ಪಗಳನ್ನೂ ಎಲ್ಲ ಪುಣ್ಯಗಳನ್ನೂ ಬಿಟ್ಟು ಈ ಗ್ರಂಥವನ್ನು ಯಾವಾಗಲೂ ಓದಬೇಕು. ಈ ಗ್ರಂಥದಲ್ಲಿಯೇ ಎಲ್ಲ ವಿಜ್ಞಾನಗಳೂ ಪರಮ ಪದವೂ ಅಡಗಿರುವುವು. ॥೨೪-೨೫॥

ಈ ಗ್ರಂಥದಲ್ಲಿಯೇ ಪರಮ ಮುಕ್ತಿಯೂ, ಎಲ್ಲ ಜಪಗಳೂ ಇರುವುವು. ಈ ಗ್ರಂಥವನ್ನು ಪಠಿಸುವವನು ಮುಕ್ತಿಲಕ್ಷ್ಮಿಯನ್ನು ಸುಲಭವಾಗಿ ಹೊಂದುವನು. ॥೨೬॥

ಅತ್ರೈವ ಜೀವನ್ಮುಕ್ತಿಶ್ಚ ಅತ್ರೈವ ಪರಮಂ ಸುಖಂ ।
ಅತ್ರೈವ ಚಿತ್ತವಿಶ್ರಾಂತಿರತ್ರೈವ ಗ್ರಂಥಿಭೇದನಂ ॥೨೭॥

ಸರ್ವಶಾಸ್ತ್ರಾಣಿ ಸಂತ್ಯಜ್ಯ ಏತನ್ಮಾತ್ರಂ ಸದಾಭ್ಯಸೇತ್ ।
ದಿನೇ ದಿನೇ ಚೈಕವಾರಂ ಪಠಿತಂ ಚೇತ್ಸ ಏವ ಸಃ ॥೨೮॥

ಜನ್ಮಮಧ್ಯೇ ಸಕೃದ್ವಾಽಪಿ ಶ್ರುತಂ ಚೇತ್ಸೋಽಪಿ ಮುಚ್ಯತೇ ।
ಸರ್ವಶಾಸ್ತ್ರಸ್ಯ ಸಿದ್ಧಾಂತಂ ಸರ್ವವೇದಸ್ಯ ಸಂಗ್ರಹಂ ॥೨೯॥

ಸಾರಾತ್ಸಾರತರಂ ಸಾರಂ ಸಾರಾತ್ಸಾರತರಂ ಮಹತ್ ।
ಏತದ್ಗ್ರಂಥಸ್ಯ ನ ಸಮಂ ತ್ರೈಲೋಕ್ಯೇಽಪಿ ಭವಿಷ್ಯತಿ ॥೩೦॥

ನ ಪ್ರಸಿದ್ಧಿಂ ಗತೋ ಲೋಕೇ ನ ಸ್ವರ್ಗೇಽಪಿ ಚ ದುರ್ಲಭಃ ।
ಬ್ರಹ್ಮಲೋಕೇಷು ವೇದೇಷು ಶಾಸ್ತ್ರೇಷ್ವಪಿ ಚ ದುರ್ಲಭಂ ॥೩೧॥

ಏತದ್ಗ್ರಂಥಂ ಕದಾಚಿತ್ತು ಚೌರ್ಯಂ ಕೃತ್ವಾ ಪಿತಾಮಹಃ ।
ಕ್ಷೀರಾಬ್ಧೌ ಚ ಪರಿತ್ಯಜ್ಯ ಸರ್ವೇ ಮುಚ್ಯಂತಿ ವಾ ಇತಿ ॥೩೨॥

---

ಈ ಗ್ರಂಥದಲ್ಲಿಯೇ ಜೀವನ್ಮುಕ್ತಿಯೂ ಪರಮಸುಖವೂ ಲಭಿಸುವುವು. ಇಲ್ಲಿಯೇ ಅಜ್ಞಾನನಾಶವಾಗಿ ಚಿತ್ತಶುದ್ಧಿಯೊದಗಿ ಶಾಂತಿಯು ಮೈದೋರುವುದು. ॥೨೭॥

ಎಲ್ಲ ಶಾಸ್ತ್ರಗಳನ್ನೂ ಬಿಟ್ಟು ಈ ಗ್ರಂಥವನ್ನು ಮಾತ್ರವೇ ಓದಬೇಕು. ಪ್ರತಿದಿನವೂ ಇದನ್ನು ಒಂದುಬಾರಿ ಓದಿದರೂ ಸಾಕು. ಅಂತಹವನು ಪರಮಾತ್ಮ ಸ್ವರೂಪನೇ ಆಗುವನು. ॥೨೮॥

ಯಾವುದಾದರೂ ಒಂದು ಜನ್ಮದಲ್ಲಿ ಒಂದು ಬಾರಿಯಾದರೂ ಈ ಶಿವರಹಸ್ಯವನ್ನು ಕೇಳಿದವನೂ ಮುಕ್ತಿಯನ್ನು ಹೊಂದುವನು. ಈ ರಹಸ್ಯವು ಎಲ್ಲ ಶಾಸ್ತ್ರಗಳ ಸಿದ್ಧಾಂತವು, ನಿಜವಾದ ತತ್ವವಿದು. ಎಲ್ಲ ವೇದಗಳ ಸಂಗ್ರಹವಿದು. ಈ ಗ್ರಂಥಕ್ಕೆ ಸಮನಾದುದು ಮೂರು ಲೋಕಗಳಲ್ಲೂ ಇಲ್ಲ. ॥೨೯-೩೦॥

ಭೂಮಿಯಲ್ಲಾಗಲೀ, ಸ್ವರ್ಗದಲ್ಲಾಗಲೀ ಈ ಗ್ರಂಥವು ದುರ್ಲಭವಾದುದು. ಬ್ರಹ್ಮಲೋಕದಲ್ಲೂ ವೇದಶಾಸ್ತ್ರಗಳಲ್ಲೂ ಈ ವಿಷಯವು ದುರ್ಲಭವೇ. ॥೩೧॥

ಹಿಂದೆ ಈ ಗ್ರಂಥವನ್ನೋದಿ ಎಲ್ಲರೂ ಮುಕ್ತರಾಗ ತೊಡಗಿದರು, ಪ್ರಪಂಚವೇ ನಡೆಯದಾಯಿತು. ಆಗ ಸೃಷ್ಟಿಕರ್ತನಾದ ಬ್ರಹ್ಮದೇವನು ಈ ಗ್ರಂಥವನ್ನು

ಜ್ಞಾತ್ವಾ ಕ್ಷೀರಸಮುದ್ರಸ್ಯ ತೀರೇ ಪ್ರಾಪ್ತಂ ಗೃಹೀತವಾನ್ ।
ಗೃಹೀತಂ ಚಾಪ್ಯಸೌ ದೃಷ್ಟ್ವಾ ಶಪಥಂ ಚ ಪ್ರದತ್ತವಾನ್ ॥೩೩॥

ತತ ಆರಭ್ಯತಲ್ಲೋಕಂ ತ್ಯಕ್ತ್ವಾಹಮಿಹಮಾಗತಃ ।
ಅತ್ಯದ್ಭುತಮಿದಂ ಜ್ಞಾನಂ ಗ್ರಂಥಂ ಚೈವ ಮಹಾದ್ಭುತಂ ॥೩೪॥

ತಜ್ಞೋ ವಕ್ತಾ ಚ ನಾಸ್ತ್ಯೇವ ಗ್ರಂಥಶ್ರೋತಾ ಚ ದುರ್ಲಭಃ ।
ಆತ್ಮನಿಷ್ಠೈಕಲಭ್ಯೋಽಸೌ ತದ್ಗುರುರ್ನೋಪಲಭ್ಯತೇ ॥೩೫॥

ಗ್ರಂಥವಂತೋ ನ ಲಕ್ಷ್ಯಂತೇ ತೇನ ವಿಖ್ಯಾತಿರಾಗತಾ ।
ಭವತೇ ದರ್ಶಿತಂ ಹ್ಯೇತದ್ಗಮಿಷ್ಯಾಮಿ ಯಥಾಗತಂ ॥೩೬॥

---

ಒಯ್ದು ಕ್ಷೀರಸಮುದ್ರಕ್ಕೆಸೆದುಬಿಟ್ಟನು. ಆದುದರಿಂದ ಈ ಮಹಾಗ್ರಂಥವು ಬ್ರಹ್ಮ ಲೋಕದಲ್ಲೂ ಇಲ್ಲದಂತಾಯಿತು. ॥೩೨॥

ಆ ಮೇಲೆ ಒಂದುದಿನ ನನಗೆ ಈ ಗ್ರಂಥವು ಕ್ಷೀರಸಮುದ್ರದ ತೀರದಲ್ಲಿ ಸಿಕ್ಕಿತು. ಅದನ್ನು ತೆಗೆದುಕೊಂಡೆನು. ಅದನ್ನು ನೋಡಿ ಬ್ರಹ್ಮದೇವನು ನೀನೀ ಬ್ರಹ್ಮಲೋಕದಲ್ಲಿರಕೂಡದೆಂದು ಅಪ್ಪಣೆಮಾಡಿದನು. ॥೩೩॥

ಆ ಮೊದಲ್ಗೊಂಡು ಆ ಲೋಕವನ್ನು ಬಿಟ್ಟು ನಾನು ಈ ಗ್ರಂಥವನ್ನು ಹೃದಯದಲ್ಲಿ ಧರಿಸಿಕೊಂಡು ಇಲ್ಲಿಗೆ ಬಂದೆನು, ಈ ಗ್ರಂಥವು ಮಹಾದ್ಭುತ ವಾದುದು, ಜ್ಞಾನಪ್ರಧಾನವಾದುದು. ॥೩೪॥

ಈ ಗ್ರಂಥದ ರಹಸ್ಯವನ್ನು ತಿಳಿದವನೂ ಹೇಳುವವನೂ, ಕೇಳುವವನೂ ದುರ್ಲಭರು. ಪರಮಾತ್ಮನಲ್ಲಿ ತಲ್ಲೀನನಾದವನೇ ಇದಕ್ಕೆ ಸರಿಯಾದ ಗುರುವು. ಅಂತಹ ಗುರುವು ದುರ್ಲಭನು. ॥೩೫॥

ಈ ಗ್ರಂಥಕ್ಕೆ ಅಂತವೇ (ಕೊನೆಯೇ) ಇಲ್ಲವು. ಅಷ್ಟು ಪ್ರಸಿದ್ಧವಾದೀ ಗ್ರಂಥಸಾರವನ್ನು ನಿನಗೆ ಹೇಳಿರುವೆನು. ಎಲೈ ನಿದಾಘಮುನಿಯೆ, ಇನ್ನು ನಾನು ಬಂದಂತೆ ಹಿಂದಕ್ಕೆ ತೆರಳುವೆನು ಅನುಮತಿಸು. ॥೩೬॥

ಏತಾವದುಕ್ತಮಾತ್ರೇಣ ನಿದಾಘೋ ಋಷಿಸತ್ತಮಃ ।
ಪತಿತ್ವಾ ಪಾದಯೋಸ್ತಸ್ಯ ಆನಂದಾಶ್ರುಪರಿಪ್ಲುತಃ ॥೩೭॥

ಉವಾಚ ವಾಕ್ಯಮಾನಂದಂ ಸಾಷ್ಟಾಂಗಂ ಪ್ರಣಿಪತ್ಯ ಚ ।
ಅಹೋ ಬ್ರಹ್ಮನ್ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ನ ಸಂಶಯಃ ॥೩೮॥

ಭವತಾಂ ದರ್ಶನೇನೈವ ಮಜ್ಜನ್ಮ ಸಫಲಂ ಕೃತಂ ।
ಏಕವಾಕ್ಯಸ್ಯ ಮನನೇ ಮುಕ್ತೋಽಹಂ ನಾತ್ರ ಸಂಶಯಃ ॥೩೯॥

ನಮಸ್ಕರೋಮಿ ಪಾದೌ ತೇ ಸೋಪಚಾರಂ ನ ವಾಸ್ತವಂ ।
ತಸ್ಯಾಪಿ ನಾವಕಾಶೋಸ್ತಿ ಅಹಮೇವ ನ ವಾಸ್ತವಂ ॥೪೦॥

ತ್ವಮೇವ ನಾಸ್ತಿ ಮೇ ನಾಸ್ತಿ ಬ್ರಹ್ಮೇತಿವಚನೇನ ಚ ।
ಬ್ರಹ್ಮೇತಿ ವಚನಂ ನಾಸ್ತಿ ಬ್ರಹ್ಮಭಾವಂ ನ ಕಿಂಚನ ॥೪೧॥

ಏತದ್ಗ್ರಂಥಂ ನ ಮೇ ನಾಸ್ತಿ ಸರ್ವಂ ಬ್ರಹ್ಮೈವ ವಿದ್ಯತೇ ।
ಸರ್ವಂ ಬ್ರಹ್ಮೇತಿವಾಕ್ಯಂ ಚ ಸರ್ವಂ ಬ್ರಹ್ಮೇತಿ ತಂ ನ ಹಿ ॥೪೨॥

---

ಋಭುವು ಹೀಗೆ ಹೇಳಿದೊಡನೆ ನಿದಾಘನು ಆನಂದದ ಕಣ್ಣೀರನ್ನು ಸುರಿಸುತ್ತಾ ಸಾಷ್ಟಾಂಗನಮಸ್ಕಾರಮಾಡಿ ಕಾಲಿಗೆ ಬಿದ್ದು ಹೀಗೆ ಹೇಳಿದನು. ॥೩೭॥

ಓ ಮಹಾಬ್ರಹ್ಮಣ್ಯನಾದ ಋಭುಮುನಿಯೇ, ನಿನ್ನ ದರ್ಶನದಿಂದಲೇ ನಾನು ಕೃತಾರ್ಥನಾದೆನು. ಸಂಶಯವಿಲ್ಲ. ನೀನು ಹೇಳಿದ ಒಂದು ವಾಕ್ಯವನ್ನು ಮನನ ಮಾಡಿದರೂ ಸಾಕು, ಕೂಡಲೇ ನಾನು ಮುಕ್ತನಾಗುವೆನು. ನಿಸ್ಸಂಶಯವು. ॥೩೮-೩೯॥

ಈಗ ನಾನು ನಿನಗೆ ನಮಸ್ಕಾರಮಾಡಿದುದೂ ಅಸಂಗತವು. ನಾನು ಎಂಬುದೇ ಇಲ್ಲದುದರಿಂದಲೂ, ಭೇದವಿಲ್ಲದುದರಿಂದಲೂ ನಮಸ್ಕಾರವೂ ಇಲ್ಲ ಏನೂ ಇಲ್ಲ. ॥೪೦॥

ನೀನು ಎಂಬುದೂ ಇಲ್ಲ. ನಾನು ಎಂಬುದೂ ಇಲ್ಲ. ಎಲ್ಲವೂ ಬ್ರಹ್ಮವಸ್ತುವಾಗಿರುವುದು. ಆದರೆ ಆ ಬ್ರಹ್ಮವಸುವೆನ್ನುವ ವಸ್ತುವೊಂದು ವಿನಾ ಯಾವ ಮಾತೂ ಇಲ್ಲ. ॥೪೧॥

ಈ ಶಿವರಹಸ್ಯವೆಂಬ ಗ್ರಂಥವೂ ಸಹ ವಸ್ತುತಃ ಇಲ್ಲ. ಇರುವುದು ಎಲ್ಲವೂ ಬ್ರಹ್ಮವಸ್ತುವೊಂದೇ. ಎಲ್ಲವೂ ಬ್ರಹ್ಮವೊಂದೇ ಎಂಬ ಮಾತೂ ಸತ್ಯವಲ್ಲ. ॥೪೨॥

ತದಿತಿ ಬ್ರಹ್ಮಾನುಭವಂ ತದಿತಿ ದ್ವೈತಮಪ್ಯಲಂ ।
ಏವಂ ಕಿಂಚಿತ್ ಕ್ವಚಿನ್ನಾಸ್ತಿ ಸರ್ವಂ ಬ್ರಹ್ಮೇತಿ ತಂ ನಹಿ ॥೪೩॥

ಏಕಮೇವದ್ವಯಂ ನಾಸ್ತಿ ಏಕತ್ವಮಪಿ ನಾಸ್ತಿ ಹಿ ।
ಭಿನ್ನಂ ದ್ವಂದ್ವಂ ಜಗದ್ದೋಷಂ ಸಂಸಾರದ್ವೈತವಾರ್ತಿಕಂ ॥೪೪॥

ಸಾಕ್ಷಿವೃತ್ತಿಪ್ರಪಂಚಂ ವಾ ಅಖಂಡಾಕಾರವೃತ್ತಿಕಂ ।
ಅಖಂಡೈಕರಸೋ ನಾಸ್ತಿ ಗುರುರ್ವಾ ಶಿಷ್ಯ ಏವ ವಾ ॥೪೫॥

ಭವದ್ದರ್ಶನಮಾತ್ರೇಣ ಸರ್ವಂ ಬ್ರಹ್ಮ ನ ಸಂಶಯಃ ।
ಬ್ರಹ್ಮಜ್ಯೋತಿರಹಂ ಪ್ರಾಪ್ತಃ ಜ್ಯೋತಿಷಾಂ ಜ್ಯೋತಿರಸ್ಮ್ಯಹಂ ॥೪೬॥

ನಮಸ್ತೇ ಸದ್ಗುರೋ ಬ್ರಹ್ಮನ್ ನಮಸ್ತೇ ಗುರುನಂದನ ।
ಏವಂ ಕೃತ್ವಾ ನಮಸ್ಕಾರಂ ತೂಷ್ಣೀಮಾಸ್ತೇ ಸುಖೀ ಸ್ವಯಂ ॥೪೭॥

---

ಎಲ್ಲವೂ ಬ್ರಹ್ಮವಸ್ತುವೇ. ಆದುದರಿಂದ ಅದು ಎಂಬ ಬ್ರಹ್ಮಾನುಭವವಾಗಲೀ ಇದು ಎಂಬ ಭೇದಾನುಭವವಾಗಲೀ ಇಲ್ಲ ॥೪೩॥

ಒಂದೇ ವಸ್ತುವೇ ವಿನಾ ಎರಡಿಲ್ಲ. ಆದರೆ ಒಂದು ಎಂಬ ಸಂಖ್ಯೆಯೂ ಇಲ್ಲ. ಭೇದ, ದೋಷ, ಸಂಸಾರವಾರ್ತೆಯೆಲ್ಲವೂ ಜ್ಞಾನದಿಂದ ನಾಶವಾಗುವುವು. ॥೪೪॥

ಸಾಕ್ಷಿವೃತ್ತಿಯಾಗಲೀ ಅಖಂಡಾಕಾರವೃತ್ತಿಯಾಗಲೀ, ಅಖಂಡೈಕರಸವೆಂದಾಗಲೀ ಗುರುಶಿಷ್ಯರೆಂದಾಗಲೀ ಯಾವ ಭೇದವೂ ಇಲ್ಲ. ॥೪೫॥

ಓ ಗುರುವೇ, ನಿನ್ನ ದರ್ಶನಮಾತ್ರದಿಂದ ಅದ್ವೈತಜ್ಞಾನವು ನನಗುಂಟಾಯಿತು. ಬ್ರಹ್ಮಜ್ಯೋತಿಯನ್ನು ಪಡೆದು ನಾನು ಎಲ್ಲ ಜ್ಯೋತಿಸ್ಸುಗಳ ಜ್ಯೋತಿಯೇ ಆಗಿರುವೆನು. ॥೪೬॥

ಗುರುಪುತ್ರನೂ ನನ್ನ ಸದ್ಗುರುವೂ ಆದ ಓ ಋಭುಮುನಿಯೇ ನಿನಗೆ ಪುನಃ ಪುನಃ ನಮಸ್ಕಾರವು— ಎಂದು ಹೇಳಿ, ನಿದಾಘನು ನಮಸ್ಕರಿಸಿ ಸುಖಿಯಾಗಿದ್ದನು. ॥೪೭॥

ಕಿಂ ಚಂಡಭಾನುಕರದಂಡಿತಾನಿ
ಕಾಷ್ಠಾಮುಖೇಷು ಗಲಿತಾನಿ ತಮಸ್ತತೀತಿ ।
ಯಾದೃಕ್ಚ ತಾದೃಗಥ ಶಂಕರಲಿಂಗಸಂಗ
ಭಂಗೀನಿ ಪಾಪಕುಲಶೈಲಕುಲಾನಿ ಸದ್ಯಃ ॥೪೮॥

ಶ್ರೀಮೃತ್ಯುಂಜಯ ರಂಜಯ ತ್ರಿಭುವನಾ ।
ಧ್ಯಕ್ಷ ಪ್ರಭೋ ಪಾಹಿ ನಃ ॥೪೯॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶ ಏಕಚತ್ವಾರಿಂಶೋಧ್ಯಾಯಃ

---

ಸೂರ್ಯನ ಖರಕಿರಣಗಳಿಂದ ಕತ್ತರಿಸಲ್ಪಟ್ಟು ದಿಕ್ಕುವಿದಿಕ್ಕುಗಳಲ್ಲಿ ಚದರಿ ನಾಶವಾಗುವ ಕತ್ತಲೆಯಂತೆ ಮಾನವನ ಪಾಪಗಳೆಲ್ಲವೂ ಸಹ ಶಿವಲಿಂಗಾರ್ಚನೆ, ಶಿವಸೇವೆ ಶಿವಪ್ರಾರ್ಥನೆ ಶಿವನಮಸ್ಕಾರಗಳಿಂದ ಸಂಪೂರ್ಣವಾಗಿ ನಾಶವನ್ನೈದುವುವು. ॥೪೮॥

ಓ ಮೃತ್ಯುಂಜಯ, ಓ ತ್ರಿಲೋಕಾಧಿಪತಿ, ಓ ಪರಮೇಶ್ವರ, ನಮ್ಮನ್ನು ಪಾಲಿಸು, ಸುಖವನ್ನು ಕರುಣಿಸು. ಎಂದು ಋಭುಮುನಿಯು ಶಿವಸ್ಮರಣೆ ಮಾಡುತ್ತಲಿದ್ದನು. ॥೪೯॥

ಶಿವರಹಸ್ಯದ ಆರನೆಯಂಶದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ದ್ವಿಚತ್ವಾರಿಂಶೋಽಧ್ಯಾಯಃ

|| ಋಭುರುವಾಚ ||

ಶ್ರುತಂ ಕಚ್ಚಿನ್ಮಯಾ ಪ್ರೋಕ್ತಂ ಬ್ರಹ್ಮಜ್ಞಾನಂ ಸುದುರ್ಲಭಂ ।
ಮನಸಾ ಧಾರಿತಂ ಬ್ರಹ್ಮನ್ ಚಿತ್ತಂ ಕೀದೃಕ್ ಸ್ಥಿತಂ ವದ ||೧||

|| ನಿದಾಘ ಉವಾಚ ||

ಶೃಣು ತ್ವಂ ಸದ್ಗುರೋ ಬ್ರಹ್ಮನ್ ತ್ವತ್ಪ್ರಸಾದಾದ್ವದಾಮಿ ತತ್ ।
ಮಮಾಜ್ಞಾನಂ ಮಹಾದೋಷಂ ಮಹಾಜ್ಞಾನ ನಿರೋಧಕಂ ||೨||

ಸದಾ ಕರ್ಮಣಿ ವಿಶ್ವಾಸಂ ಪ್ರಪಂಚೇ ಸತ್ಯಭಾವನಂ ।
ನಷ್ಟಂ ಕ್ಷಣಾತ್ಸರ್ವಮೇವಂ ತ್ವತ್ಪ್ರಸಾದಾನ್ಮಹದ್ಭಯಂ ||೩||

---

## ನಲವತ್ತೆರಡನೆಯ ಅಧ್ಯಾಯವು

ಎಲೈ ನಿದಾಘಮುನಿಯೆ, ನಾನು ಹೇಳಿದ ಅತ್ಯಮೋಘವಾದ ಬ್ರಹ್ಮಜ್ಞಾನವು ಮನಸ್ಸಿಗೆ ಹಿಡಿಯಿತೆ? ಈಗ ನಿನ್ನ ಚಿತ್ತವು ಹೇಗಿದೆ? ಹೇಳು. ||೧||

ಓ ಗುರುವೇ, ನಿನ್ನ ಅನುಗ್ರಹದಿಂದ ಜ್ಞಾನಶತ್ರುವಾದ ನನ್ನ ಅಜ್ಞಾನವೆಲ್ಲವೂ ನಷ್ಟವಾಯಿತು. ಈಗ ನನಗೆ ಕರ್ಮದಲ್ಲಿ ವಿಶ್ವಾಸವಾಗಲೀ ಪ್ರಪಂಚದಲ್ಲಿ ಸತ್ಯವೆಂಬ ಭಾವನೆಯಾಗಲೀ ಇಲ್ಲ. ಈಗ ನನಗೆ ಯಾವ ಭಯವೂ ಇಲ್ಲ. ಇದು ನಿನ್ನ ಅನುಗ್ರಹವು. ||೨-೩||

ಏತಾವಂತಮಿಮಂ ಕಾಲಮಜ್ಞಾನರಿಪುಣಾ ಹತಂ ।
ಮಹದ್ಭಯಂ ಚ ನಷ್ಟಂ ಮೇ ಕರ್ಮತತ್ವಂ ಚ ನಾಶಿತಂ ॥೪॥

ಅಜ್ಞಾನಂ ಮನಸಾ ಪೂರ್ವಮಿದಾನೀಂ ಬ್ರಹ್ಮತಾಂ ಗತಃ ।
ಪುರಾಹಂ ಚಿತ್ತವಿಭ್ರಾಂತ ಇದಾನೀಂ ಸನ್ಮಯೋಽಭವಂ ॥೫॥

ಪೂರ್ವಮಜ್ಞಾನವದ್ಭಾವಮಿದಾನೀಂ ಸನ್ಮಯಂ ಗತಂ ।
ಅಜ್ಞಾನವತ್ಸ್ಥಿತೋಽಹಂ ವೈ ಬ್ರಹ್ಮೈವಾಹಂ ಪರಂಗತಃ ॥೬॥

ಪುರಾಹಂ ಚಿತ್ತವದ್ಭ್ರಾಂತಃ ಬ್ರಹ್ಮೈವಾಹಂ ಪರಂ ಗತಃ ।
ಸರ್ವಂ ವಿಗಲಿತಂ ದೋಷಂ ಸರ್ವಭೇದೋ ಲಯಂಗತಃ ॥೭॥

ಸರ್ವಂ ಪ್ರಪಂಚಂ ಗಲಿತಂ ಚಿತ್ತಮೇವ ಹಿ ಸರ್ವಗಂ ।
ಸರ್ವಾಂತಃಕರಣೋ ಲೀನಂ ಬ್ರಹ್ಮಸದ್ಭಾವಭಾವನಾತ್ ॥೮॥

---

ಇಷ್ಟು ದಿನಗಳ ವರೆಗೆ ನನಗೆ ಅಜ್ಞಾನವು ಆವರಿಸಿದ್ದು ಮಹಾಭಯವು ಇದ್ದಿತು. ಈಗ ನಿನ್ನ ಅನುಗ್ರಹದಿಂದ ಕರ್ಮತತ್ವವೆಲ್ಲವೂ ನಾಶವಾಗಿ ಆ ಭಯವೆಲ್ಲವೂ ನಾಶವಾಯಿತು. ॥೪॥

ಹಿಂದೆ ಅಜ್ಞಾನವು ತುಂಬಿದ್ದು ಭ್ರಾಂತನಾಗಿದ್ದೆನು. ಈಗ ಆ ಅಜ್ಞಾನ ಭ್ರಾಂತಿಗಳು ತೊಲಗಿ ಸತ್ಯಸ್ವರೂಪ ಬ್ರಹ್ಮನಾಗಿರುವೆನು. ॥೫॥

ಹಿಂದೆ ನಾನು ಅಜ್ಞಾನಿಯಂತೆ ಇದ್ದೆನು, ಈಗ ನಿನ್ನ ಅನುಗ್ರಹದಿಂದ ಸತ್ಯ ಬ್ರಹ್ಮನೇ ಆಗಿರುವೆನು. ॥೬॥

ಹಿಂದೆ ನಾನು ಚಿತ್ತದಂತೆ ಭ್ರಾಂತನಾಗಿ ನೂರಾರು ಭೇದಗಳನ್ನು ಕಲ್ಪಿಸುತ್ತಾ ದೋಷಭಾಗಿಯಾಗಿದ್ದೆನು. ಈಗ ಆ ಭ್ರಾಂತಿಯು ಹೋಗಿ ಭೇದವು ನಷ್ಟವಾಗಿ ನಿರ್ದೋಷಿಯಾಗಿ ಬ್ರಹ್ಮಸ್ವರೂಪನಾಗಿರುವೆನು. ॥೭॥

ಈಗ ನಿನ್ನನುಗ್ರಹದಿಂದ ಬ್ರಹ್ಮಭಾವನೆಯುದಯಿಸಿ ಅಂತಃಕರಣವೂ ಚಿತ್ತವೂ ಲಯವಾದುವು. ಪ್ರಪಂಚವೆಲ್ಲವೂ ಲಯವಾಯಿತು. ॥೮॥

ಅಹಮೇವ ಚಿದಾಕಾಶಃ ಅಹಮೇವ ಹಿ ಚಿನ್ಮಯಃ ।
ಅಹಮೇವ ಹಿ ಪೂರ್ಣಾತ್ಮಾ ಅಹಮೇವ ಹಿ ನಿರ್ಮಲಃ ॥೯॥

ಅಹಮೇವಾಹಮೇವೇತಿ ಭಾವನಾಪಿ ವಿನಿರ್ಗತಾ ।
ಅಹಮೇವ ಚಿದಾಕಾಶೋ ಬ್ರಾಹ್ಮಣತ್ವಂ ನ ಕಿಂಚನ ॥೧೦॥

ಕ್ಷತ್ರಿಯೋಽಹಂ ಚ ವೈಶ್ಯೋಽಹಮಿತಿ ವಕ್ತಿರ್ನ ಕಿಂಚನ ।
ಶೂದ್ರೋಽಹಂ ಶ್ವಪಚೋಽಹಂ ವೈ ವರ್ಣೀ ಚಾಪಿ ಗೃಹಸ್ಥಕಃ ॥೧೧॥

ವಾನಪ್ರಸ್ಥೋ ಯತಿರಹಮಿತ್ಯೇಷಾ ಚಿತ್ತವಿಭ್ರಮಃ ।
ತತ್ತದಾಶ್ರಮಕರ್ಮಾಣಿ ಚಿತ್ತೇನ ಪರಿಕಲ್ಪಿತಂ ॥೧೨॥

ಅಹಮೇವ ಹಿ ಲಕ್ಷ್ಯಾತ್ಮಾ ಅಹಮೇವ ಹಿ ಪೂರ್ಣಕಂ ।
ಅಹಮೇವಾಂತರಾತ್ಮಾ ಹಿ ಅಹಮೇವ ಪರಾಯಣಂ ॥೧೩॥

ಅಹಮೇವ ಸದಾಧಾರೋ ಅಹಮೇವ ಸುಖಾತ್ಮಕಃ ।
ತ್ವತ್ಪ್ರಸಾದಾದಹಂ ಬ್ರಹ್ಮ ತ್ವತ್ಪ್ರಸಾದಾಜ್ಜನಾರ್ದನಃ ॥೧೪॥

---

ಜ್ಞಾನಾಕಾಶವು ನಾನೇ. ಜ್ಞಾನಮೂರ್ತಿಯು ನಾನೇ, ಪೂರ್ಣಾತ್ಮನು ನಾನು ನಿರ್ಮಲಸ್ವರೂಪನು ನಾನು. ॥೯॥

ನಾನು—ಎಂಬ ಭಾವನೆಯೂ ನನಗಿಲ್ಲ. ಜ್ಞಾನಾಕಾಶವು ನಾನು, ಬ್ರಾಹ್ಮಣನು ನಾನು, ಕ್ಷತ್ರಿಯನು ನಾನು, ವೈಶ್ಯನು ನಾನು, ಶೂದ್ರನು ನಾನು, ಹೊಲೆಯನು ನಾನು, ಬ್ರಹ್ಮಚಾರಿಯು ನಾನು, ಗೃಹಸ್ಥನೂ ನಾನು, ಅಂದರೆ ನನಗೆ ವರ್ಣಾಶ್ರಮ ಭೇದಗಳು ಇಲ್ಲ. ॥೧೦-೧೧॥

ವಾನಪ್ರಸ್ಥ, ಯತಿ–ಮೊದಲಾದ ಆಶ್ರಮಗಳೂ ಅವುಗಳ ಕರ್ಮಗಳೂ ಸಹ ಮನಸ್ಸಿನ ಭ್ರಾಂತಿಕಲ್ಪನೆಗಳು. ॥೧೨॥

ಲಕ್ಷ್ಯವಸ್ತುವು ನಾನು, ಪೂರ್ಣವಸ್ತುವು ನಾನು. ಅಂತರಾತ್ಮನು ನಾನು, ನಾನೇ ಎಲ್ಲರಿಗೆ ಗತಿಯು. ॥೧೩॥

ಜಗತ್ತಿಗೆ ನಾನೇ ಆಧಾರವು. ಸುಖಸ್ವರೂಪನು ನಾನು, ಓ ಮುನಿಯೇ, ನಿನ್ನ ಅನುಗ್ರಹದಿಂದ ನಾನು ಬ್ರಹ್ಮನೂ ವಿಷ್ಣುವೂ ಆಗಿರುವೆನು. ॥೧೪॥

ತ್ವತ್ಪ್ರಸಾದಾಚ್ಚಿದಾಕಾಶಃ ಶಿವೋಽಹಂ ನಾತ್ರ ಸಂಶಯಃ ।
ತ್ವತ್ಪ್ರಸಾದಾದಹಂ ಚಿದ್ವೈ ತ್ವತ್ಪ್ರಸಾದಾನ್ನ ಮೇ ಜಗತ್ ॥೧೫॥

ತ್ವತ್ಪ್ರಸಾದಾದ್ವಿಮುಕ್ತೋಽಸ್ಮಿ ತ್ವತ್ಪ್ರಸಾದಾತ್ಪರಂ ಗತಃ ।
ತ್ವತ್ಪ್ರಸಾದಾದ್ವ್ಯಾಪಕೋಽಹಂ ತ್ವತ್ಪ್ರಸಾದಾನ್ನಿರಂಕುಶಃ ॥೧೬॥

ತ್ವತ್ಪ್ರಸಾದೇನ ತೀರ್ಣೋಽಹಂ ತ್ವತ್ಪ್ರಸಾದಾನ್ಮಹತ್ಸುಖಂ ।
ತ್ವತ್ಪ್ರಸಾದಾದಹಂ ಬ್ರಹ್ಮ ತ್ವತ್ಪ್ರಸಾದಾತ್ತ್ವಮೇವ ನ ॥೧೭॥

ತ್ವತ್ಪ್ರಸಾದಾದಿದಂ ನಾಸ್ತಿ ತ್ವತ್ಪ್ರಸಾದಾನ್ನ ಕಿಂಚನ ।
ತ್ವತ್ಪ್ರಸಾದಾನ್ನಮೇ ಕಿಂಚಿತ್ತ್ವತ್ಪ್ರಸಾದಾನ್ನಮೇ ವಿಯತ್ ॥೧೮॥

ತ್ವತ್ಪ್ರಸಾದಾನ್ನ ಭೇದಶ್ಚ ತ್ವತ್ಪ್ರಸಾದಾನ್ನಮೇ ಭಯಂ ।
ತ್ವತ್ಪ್ರಸಾದಾನ್ನಮೇ ರಾಗಂ ತ್ವತ್ಪ್ರಸಾದಾನ್ನಮೇ ಕ್ಷತಿಃ ॥೧೯॥

॥ ಸ್ಕಂದ ಉವಾಚ ॥

ಯತ್ಪಾದಾಂಬುಜಪೂಜಯಾ ಹರಿರಭೂದಚ್ಯೋಽಯದಂಘ್ರ್ಯರ್ಚನಾತ್
ಅಚ್ಯಾಽಭೂತ್ಕಮಲಾವಿಧಿಪ್ರಭೃತಯೋ ಹ್ಯಚ್ಯಾ ಯದಾಜ್ಞಾವಶಾತ್ ।

---

ನಿನ್ನ ಅನುಗ್ರಹದಿಂದ ನಾನು ಜ್ಞಾನಮೂರ್ತಿಯಾದ ಶಿವನಾದೆನು, ಅಸ್ಥಿರವಾದೀ ಜಗತ್ತು ಇಲ್ಲದಾಯಿತು. ॥೧೫॥

ನಿನ್ನ ಅನುಗ್ರಹದಿಂದ ಮುಕ್ತನಾದೆನು. ಪರಮಾತ್ಮನಾದೆನು, ವ್ಯಾಪಕನಾದೆನು, ನಿರಂಕುಶನಾದೆನು. ॥೧೬॥

ಓ ಗುರುವೇ, ನಿನ್ನ ಅನುಗ್ರಹದಿಂದ ನಾನು ಸಂಸಾರಸಾಗರವನ್ನು ದಾಟಿ ಸುಖಿಯಾದೆನು, ಬ್ರಹ್ಮಸ್ವರೂಪನಾದೆನು. ನೀನು-ಎಂಬ ಭೇದ ವ್ಯವಹಾರವನ್ನೂ ಕಳೆದುಕೊಂಡೆನು. ॥೧೭॥

ನಿನ್ನ ಅನುಗ್ರಹದಿಂದ ಇದು ಎಂಬ ಭೇದವನ್ನು ಕಳೆದುಕೊಂಡೆನು. ನಾನು ಮಾಡಬೇಕಾದುದೇನೂ ಇಲ್ಲ, ಆಕಾಶಾದಿಗಳು ಲಯವಾದುವು. ॥೧೮॥

ನಿನ್ನ ಅನುಗ್ರಹದಿಂದ ಭೇದವು ಲಯವಾಯ್ತು. ಭಯವು ಹೋಯಿತು, ರಾಗವು ಅಳಿಯಿತು, ನನಗೆ ಮರಣಭಯವಿಲ್ಲ. ॥೧೯॥

ಯಾವ ದೇವನ ಪಾದಕಮಲಪೂಜೆಯನ್ನು ಮಾಡಿ ನಾರಾಯಣನು

ತಂ ಕಾಲಾಂತಕಮಂತಕಾಂತಕಮುಮಾಕಾಂತಂ ಮುಹುಸ್ಸಂತತಂ
ಸಂತಃ ಸ್ವಾಂತಸರೋಜರಾಜಚರಣಾಂಭೋಜಂ ಭಜಂತ್ಯಾದರಾತ್ ॥೨೦॥

ಕಿಂ ವಾ ಧರ್ಮಶತಾಯುರಾರ್ಜಿತಮಹಾಸೌಖ್ಯೈಕಸೀಮಾಯುತಂ
ನಾಕಂ ಪಾತಮಹೋಗ್ರದುಃಖನಿಕರಂ ದೇವೇಷು ತುಷ್ಟಿಪ್ರದಂ ।
ತಸ್ಮಾಚ್ಛಂಕರಲಿಂಗಪೂಜನಮುಮಾಕಾಂತಪ್ರಿಯಂ ಮುಕ್ತಿದಂ
ಭೂಮಾನಂದಘನೈಕಮುಕ್ತಿಪರಮಾನಂದೈಕಮೋದಂ ಮಹಃ ॥೨೧॥

ಯೇ ಶಾಂಭವಾಃ ಶಿವರತಾಃ ಶಿವನಾಮಮಾತ್ರಾಃ
ಶಬ್ದಾಕ್ಷರಜ್ಞಹೃದಯಾ ಭಸಿತತ್ರಿಪುಂಡ್ರಾಃ ।

---

ಪೂಜ್ಯತೆಯನ್ನು ಪಡೆದನೋ, ಯಾವ ದೇವನ ಚರಣಾಬ್ಜವನ್ನು ಪೂಜಿಸಿ ಲಕ್ಷ್ಮಿ, ಬ್ರಹ್ಮ ಮೊದಲಾದ ದೇವತೆಗಳು ಜಗತ್ತಿನಲ್ಲಿ ಪೂಜ್ಯರೆನಿಸಿರುವರೋ, ಅಂತಹ ಕಾಲಕಾಲನಾದ ದೇವಾಧಿದೇವನಾದ ಶ್ರೀಗಿರಿಜಾರಮಣನಾದ ಶ್ರೀಪರಮೇಶ್ವರನನ್ನು ಸತ್ಪುರುಷರು ತಮ್ಮ ಹೃದಯಕಮಲದಲ್ಲಿ ಧ್ಯಾನಿಸಿ, ಪೂಜಿಸಿ ಧನ್ಯರಾಗುತ್ತಿರುವರು. ಇದರಿಂದ ಶ್ರೀ ಪರಮೇಶ್ವರನು ವಿಷ್ಣು ಬ್ರಹ್ಮ ಮೊದಲಾದ ಮೂವತ್ತುಮೂರು ಕೋಟಿ ದೇವತೆಗಳಿಂದಲೂ ಸಹ ಪೂಜೆಗೊಳ್ಳುವನೆಂದು ಕರದರ್ಪಣದಂತೆ ಸ್ಪಷ್ಟವಾಗುವುದು. ಈ ಕಾರಣದಿಂದಲೇ ಶ್ರೀ ಪರಮೇಶ್ವರನಿಗೆ "ಮಹಾದೇವ"ನೆಂಬ ನಾಮವು ಪ್ರಾಪ್ತವಾಗಿರುವುದು. ಪರಮೇಶ್ವರನು ದೇವತಾಸಮೂಹಕ್ಕೆ ದೊಡ್ಡವನಾಗಿರುವುದರಿಂದ ಶಾಸ್ತ್ರಗಳು ಈ ದೇವಾಧಿದೇವನನ್ನು ಮಹಾದೇವನೆಂದು ಮುಕ್ತಕಂಠದಿಂದ ಸಾರುತ್ತಿರುವವು. ॥೨೦॥

ಅಸ್ಥಿರವಾದ ಸ್ವರ್ಗಸುಖವನ್ನುಂಟುಮಾಡುವ ನೂರಾರು ಧರ್ಮಕರ್ಮಗಳಿಂದೇನು ಪ್ರಯೋಜನ? ಅದು ದುಃಖದಿಂದ ಯುಕ್ತವಾಗಿರುವುದು. ಅದರ ಬದಲು ಮುಕ್ತಿದಾಯಕವಾದ ಉಮೆಯ ಅನುರಾಗಕ್ಕೆ ಪಾತ್ರವಾದ ಆನಂದಪರಿಪೂರ್ಣವಾದ ಶಂಕರನೆಂಬ ಜ್ಯೋತಿಸ್ಸನ್ನು ಮಾನವರು ಭಕ್ತಿಯಿಂದ ಸೇವಿಸಬೇಕು. ಇದೇ ಪರಮಾನಂದಸ್ವರೂಪವಾದ ಮುಕ್ತಿಗೆ ಕಾರಣವಾಗಿರುವುದು. ಶಿವಲಿಂಗಪೂಜೆ, ಶಿವಧ್ಯಾನ, ಶಿವಮಂತ್ರಜಪ, ಶಿವನ ಸೇವೆ ಇವೇ ಮುಕ್ತಿಗೆ ಸಾಧನಗಳೆಂದು ತಿಳಿಯಬೇಕು. ॥೨೧॥

ಯಾರು ಯಾವಾಗಲೂ ಶಿವನಲ್ಲಿ ಪ್ರೀತಿಯನ್ನಿಟ್ಟಿರುವರೋ, ಯಾರು ಯಾವಾಗಲೂ ಶಿವನಾಮಸಂಕೀರ್ತನೆಯಲ್ಲಿ ಕಾಲವನ್ನು ಕಳೆಯುತ್ತಿರುವರೋ,

ಯಾಂ ಪ್ರಾಪ್ನುವಂತಿ ಗತಿಮೀಶಪದಾಂಬುಜೋದ್ಯತ್
ಧ್ಯಾನಾನುರಕ್ತಹೃದಯಾ ನಹಿ ಯೋಗಸಾಂಖ್ಯೈಃ ॥೨೨॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ದ್ವಿಚತ್ವಾರಿಂಶೋಽಧ್ಯಾಯಃ

---

ಯಾರು ಯಾವಾಗಲೂ ತಮ್ಮ ಹೃದಯದಲ್ಲಿ ಶಿವಶಬ್ದದ ಮತ್ತು ಆ ಶಬ್ದಾಕ್ಷರಗಳ ಯಥಾರ್ಥಸ್ವರೂಪವನ್ನು ಚಿಂತಿಸುತ್ತಿರುವರೋ, ಯಾರು ಯಾವಾಗಲೂ ತಮ್ಮ ಶರೀರದ ಮೇಲೆ ಭಸ್ಮರುದ್ರಾಕ್ಷಾದಿ ಶಿವಚಿಹ್ನಗಳನ್ನು ಧರಿಸಿಕೊಂಡು ಸಾಕ್ಷಾತ್ ಪರಮೇಶ್ವರನಂತೆ ಕಾಣುತ್ತಿರುವರೋ ಅಂತಹ ಶಿವಭಕ್ತರು, ಶಿವನ ಅನುಗ್ರಹದಿಂದ ಮುಕ್ತಿಯನ್ನು ಪಡೆಯುವರು. ಅದು ಹೊರತು ಯೋಗಸಾಂಖ್ಯಕ್ರಮಗಳಿಂದ ಎಂದೂ ಯಾರೂ ಮುಕ್ತಿಯನ್ನು ಪಡೆಯಲಾರರು. ॥೨೨॥

ಶ್ರೀಶಿವರಹಸ್ಯದ ಆರನೆಯಂಶದಲ್ಲಿ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ತ್ರಿಚತ್ವಾರಿಂಶೋಽಧ್ಯಾಯಃ

॥ ನಿದಾಘ ಉವಾಚ ॥

ನ ಪಶ್ಯಾಮಿ ಶರೀರಂ ವಾ ಲಿಂಗಂ ಕಾರಣಮೇವ ಚ ।
ನ ಪಶ್ಯಾಮಿ ಮನೋ ವಾಪಿ ನ ಪಶ್ಯಾಮಿ ಜಡಂ ತತಃ ॥೧॥

ನ ಪಶ್ಯಾಮಿ ಚಿದಾಕಾಶಂ ನ ಪಶ್ಯಾಮಿ ಜಗತ್ ಕ್ವಚಿತ್ ।
ನ ಪಶ್ಯಾಮಿ ಹರಿಂ ವಾಪಿ ನ ಪಶ್ಯಾಮಿ ಶಿವಂ ಚ ವಾ ॥೨॥

ಆನಂದಸಾಗರೇ ಮಗ್ನಂ ತನ್ಮಯತ್ವಾನ್ನ ಚೋತ್ಥಿತಃ ।
ನ ಪಶ್ಯಾಮಿ ಸದಾ ಭೇದಂ ನ ಜಗನ್ನ ಜಡಂ ಕ್ವಚಿತ್ ॥೩॥

---

## ನಲವತ್ತುಮೂರನೆಯ ಅಧ್ಯಾಯವು

ಓ ಸದ್ಗುರು ಋಭುಮುನಿಯೇ, ನನಗೀಗ ಸ್ಥೂಲಶರೀರ ಲಿಂಗಶರೀರ ಕಾರಣಶರೀರಗಳು ಕಾಣಿಸುತ್ತಿಲ್ಲ. ಮನಸ್ಸೇ ಮೊದಲಾದ ಜಡವಸ್ತುವೂ ತೋರುತ್ತಿಲ್ಲ. ॥೧॥

ಜ್ಞಾನಾಕಾಶವನ್ನಾಗಲೀ ಜಗತ್ತನ್ನಾಗಲೀ ಹರಿಶಿವರನ್ನಾಗಲೀ ನಾನು ಬೇರೆ ಬೇರೆ ನೋಡುತ್ತಿಲ್ಲ. ॥೨॥

ಆನಂದಸಾಗರದಲ್ಲಿ ಆನಂದಮಯನಾಗಿ ಮುಳುಗಿಬಿಟ್ಟಿರುವೆನು. ಜಡ ಜಗತ್ತಾಗಲೀ ಭೇದವಾಗಲೀ ನನಗೆ ಗೋಚರಿಸುತ್ತಲೇ ಇಲ್ಲ. ॥೩॥

ನ ದ್ವೈತಂ ನ ಶುಭಂ ದುಃಖಂ ನಗುರುರ್ನ ಪರಾಪರಂ ।
ನಗುಣಂ ದಾನತುರ್ಯಂ ವಾ ನ ಬುದ್ಧಿರ್ನ ಚ ಸಂಶಯಃ ॥೪॥

ನ ಚ ಕಾಲಂ ನ ಚ ಭಯಂ ನ ಶೋಕಂ ನ ಶುಭಾಶುಭಂ ।
ನ ಪಶ್ಯಾಮಿ ನ ಸಂದೀನಂ ನ ಬಂಧಂ ನ ಚ ಸಂಭಯಂ ॥೫॥

ನ ದೇಹೇಂದ್ರಿಯಸದ್ಭಾವೋ ನ ಚ ಸದ್ವಸ್ತು ಸನ್ಮನಃ ।
ನ ಪಶ್ಯಾಮಿ ಸದಾ ಸ್ಥೂಲಂ ನ ಕೃಶಂ ನ ಚ ಕುಬ್ಜಕಂ ॥೬॥

ನ ಭೂಮಿರ್ನ ಜಲಂ ನಾಗ್ನಿರ್ನ ಮೋಹೋ ನ ಚ ಮಂತ್ರಕಂ ।
ನ ಗುರುರ್ನ ಚ ವಾಕ್ಯಂ ವಾ ನ ದೃಢಂ ನ ಚ ಸರ್ವಕಂ ॥೭॥

ನ ಜಗಚ್ಛ್ರವಣಂ ಚೈವ ನಿದಿಧ್ಯಾಸಂ ನ ಚಾಪರಃ ।
ಆನಂದಸಾಗರೇ ಮಗ್ನಃ ತನ್ಮಯತ್ವಾನ್ನ ಚೋತ್ಥಿತಃ ॥೮॥

ಆನಂದೋಽಹಮಶೇಷೋಽಹಮಜೋಽಹಮಮೃತೋಽಸ್ಮ್ಯಹಂ ।
ನಿತ್ಯೋಽಹಮಿತಿ ನಿಶ್ಚಿತ್ಯ ಸದಾ ಪೂರ್ಣೋಽಸ್ಮಿ ನಿತ್ಯಧೀಃ ॥೯॥

---

ದ್ವೈತ, ಶುಭ, ದುಃಖ, ಗುರು, ಉತ್ತಮಾಧಮ, ಗುಣ, ಕೊನೆಯವಸ್ಥೆ, ಬುದ್ಧಿ, ಸಂಶಯ-ಇವಾವುವೂ ನನಗೆ ಗೋಚರಿಸುತ್ತಲೇ ಇಲ್ಲ. ॥೪॥

ಕಾಲ, ಭಯ, ಶೋಕ, ಶುಭಾಶುಭಗಳು, ದೀನತೆ, ಬಂಧನ, ಮುಕ್ತಿ, ಇದಾವುದೂ ನನಗೆ ಕಾಣಿಸುತ್ತಲಿಲ್ಲ. ॥೫॥

ದೇಹೇಂದ್ರಿಯಗಳು, ವಸ್ತುಗಳು, ಮನಸ್ಸು, ಸ್ಥೂಲಸೂಕ್ಷ್ಮಗಳು, ಕೃಶತೆ ಕುಳ್ಳತನಗಳು—ಇವಾವುವೂ ನನಗೆ ಸತ್ಯವಸ್ತುಗಳಾಗಿ ತೋರುತ್ತಿಲ್ಲ. ॥೬॥

ಭೂಮಿ, ಜಲ, ಅಗ್ನಿ, ಮೋಹ, ಮಂತ್ರ, ಗುರುವಾಕ್ಯ, ದೃಢ, ಜರ್ಜರ, ಇವುಗಳಾವುವು ಸತ್ಯವಸ್ತುಗಳಾಗಿ ನನಗೆ ಕಾಣಿಸುತ್ತಿಲ್ಲ. ॥೭॥

ಶ್ರವಣ ಮನನ ನಿದಿಧ್ಯಾಸನಾದಿಗಳೂ ನನಗೆ ಗೋಚರಿಸುತ್ತಿಲ್ಲ. ಕೇವಲ ಆನಂದಸಾಗರದಲ್ಲಿ ಆನಂದಮಯನಾಗಿ ಮುಳುಗಿಬಿಟ್ಟಿರುವೆನು. ॥೮॥

ಆನಂದವು ನಾನು, ಎಲ್ಲವೂ ನಾನೇ. ಜನನವು ನನಗಿಲ್ಲ. ಮರಣವು ನನಗಿಲ್ಲ. ನಿತ್ಯನು ನಾನು,—ಎಂದು ನಿಶ್ಚಯಿಸಿಕೊಂಡು ನಾನು ಆನಂದಪೂರ್ಣನಾಗಿರುವೆನು. ॥೯॥

ಪೂರ್ಣೋಽಹಂ ಪೂರ್ಣಚಿತ್ತೋಽಹಂ ಪುಣ್ಯೋಽಹಂ ಜ್ಞಾನವಾನಹಂ ।
ಶುದ್ಧೋಽಹಂ ಸರ್ವಮುಕ್ತೋಽಹಂ ಸರ್ವಾಕಾರೋಽಹಮವ್ಯಯಃ ॥೧೦॥

ಚಿನ್ಮಾತ್ರೋಽಹಂ ಸ್ವಯಂ ಸೋಽಹಂ ತತ್ಸ್ವರೂಪೋಽಹಮೀಶ್ವರಃ ।
ಪರಾಪರೋಽಹಂ ತುರ್ಯೋಽಹಂ ಪ್ರಸನ್ನೋಽಹಂ ರಸೋಽಸ್ಮ್ಯಹಂ ॥೧೧॥

ಬ್ರಹ್ಮಾಹಂ ಸರ್ವಲಕ್ಷ್ಯೋಽಹಂ ಸದಾಪೂರ್ಣೋಽಹಮಕ್ಷರಃ ।
ಮಮಾನುಭವರೂಪಂ ಯತ್ಸರ್ವಮುಕ್ತಂ ಚ ಸದ್ಗುರೋ ॥೧೨॥

ನಮಸ್ಕರೋಮಿ ತೇನಾಹಂ ಸರ್ವಂ ಚ ಗುರುದಕ್ಷಿಣಾ ।
ಮದ್ದೇಹಂ ತ್ವತ್ಪದೇ ದತ್ತಂ ತ್ವಯಾ ಭಸ್ಮೀಕೃತಂ ಕ್ಷಣಾತ್ ॥೧೩॥

ಮಮಾತ್ಮಾ ಚ ಮಯಾ ದತ್ತಃ ಸ್ವಯಮಾತ್ಮನಿ ಪೂರಿತಃ ।
ತ್ವಮೇವಾಹಂ ಅಹಂ ತ್ವಂ ಚ ಅಹಮೇವ ತ್ವಮೇವ ಹಿ ॥೧೪॥

---

ಪೂರ್ಣನು ನಾನು, ನನ್ನ ಚಿತ್ತವೂ ಪೂರ್ಣವಾಗಿದೆ. ಪುಣ್ಯವು ನಾನು ಜ್ಞಾನಿಯು ನಾನು, ಶುದ್ಧನು ನಾನು, ಮುಕ್ತನು ನಾನು, ನಾನೇ ನಾನಾಬಗೆಯ ಆಕಾರಗಳಿಂದ ಕಾಣಿಸುತ್ತಿರುವೆನು. ॥೧೦॥

ಚೈತನ್ಯಸ್ವರೂಪನು ನಾನು, ಆ ಪರಮಾತ್ಮನು ನಾನು, ಈ ಜೀವನೂ ನಾನು, ಈಶ್ವರನೂ ನಾನು, ಪ್ರಸನ್ನನು ನಾನು, ಆನಂದಮಯನು ನಾನು. ॥೧೧॥

ಬ್ರಹ್ಮವಸ್ತುವು ನಾನು, ಎಲ್ಲರ ಗುರಿಯೂ ನಾನೇ, ಪೂರ್ಣನೂ ನಾಶರಹಿತನೂ ನಾನೇ ಆಗಿರುವೆನು. ಓ ಗುರುವೇ, ನನ್ನ ಅನುಭವವನ್ನು ಹೀಗೆ ನಿನಗೆ ವಿಸ್ತರಿಸಿ ಹೇಳಿರುವೆನು. ॥೧೨॥

ಆದುದರಿಂದ ನಿನಗೆ ನಮಸ್ಕಾರವು. ಈವರೆಗೆ ನನ್ನದಾಗಿದ್ದುದೆಲ್ಲವೂ ನಿನಗೆ ಗುರುದಕ್ಷಿಣೆಯು. ನನ್ನ ದೇಹವನ್ನೂ ನಿನ್ನ ಪಾದಗಳಡಿಯಲ್ಲಿ ಕೆಡುಹುವೆನು. ಆ ದೇಹವೆಂಬುದನ್ನು ಜ್ಞಾನದಿಂದ ನೀನು ಭಸ್ಮಮಾಡಬಲ್ಲೆ. ॥೧೩॥

ನನ್ನ ಆತ್ಮವನ್ನು ನಿನ್ನಾತ್ಮಕ್ಕೇ ಕೊಟ್ಟಿರುವೆನು, ಅಂದರೆ ನಿನ್ನಲ್ಲಿಯೇ ಪೂರ್ಣನಾಗಿರುವೆನು. ನೀನೂ ನನ್ನಲ್ಲಿ ಪೂರ್ಣನಾಗಿರುವೆ, ಆದುದರಿಂದ ನೀನೇ ನಾನು, ನಾನೇ ನೀನು, ಇಬ್ಬರಿಗೂ ಭೇದವಿಲ್ಲ. ॥೧೪॥

ಐಕ್ಯಾರ್ಣವೇಸ್ಮಿ ನ ಮನೋ ಐಕ್ಯಜ್ಞಾನಂ ತ್ವಮೇವ ಹಿ ।
ಏಕಂ ಚೈತನ್ಯಮೇವಾಹಂ ತ್ವಯಾ ಗಂತುಂ ನ ಶಕ್ಯತೇ ॥೧೫॥

ಗಂತವ್ಯದೇಶೋ ನಾಸ್ತ್ಯೇವ ಏಕಾಕಾರಂ ನ ಚಾನ್ಯತಃ ।
ತ್ವಯಾ ಗಂತವ್ಯದೇಶೋ ನ ಮಯಾಗಂತವ್ಯಮಸ್ತಿ ನ ॥೧೬॥

ಏಕಾಕಾರೇಣ ಏಕಂ ಚ ಏಕಮೇವ ದ್ವಯಂ ನ ಹಿ ।
ತ್ವಯಾ ವಕ್ತವ್ಯಕಂ ನಾಸ್ತಿಮಯಾಶ್ರೋತವ್ಯಮಪ್ಯಲಂ ॥೧೭॥

ತ್ವಮೇವ ಸದ್ಗುರುರ್ನಾಸ್ತಿ ಅಹಂ ನಾಸ್ಮಿ ಸ ಶಿಷ್ಯಕಃ ।
ಬ್ರಹ್ಮಮಾತ್ರಮಿದಂ ಸರ್ವಂ ಅಸ್ಮಿನ್ಮಗ್ನೋಽಸ್ಮಿ ತನ್ಮಯಃ ॥೧೮॥

ಭೇದಾಭೇದಂ ನ ಪಶ್ಯಾಮಿ ಕಾರ್ಯಾಕಾರ್ಯಂ ನ ಕಿಂಚನ ।
ಮಮೈವ ಚೇನ್ನಮಸ್ಕಾರೋ ನಿಷ್ಪ್ರಯೋಜನಮೇವ ಹಿ ॥೧೯॥

---

ನಾನು ಅಭೇದ ಸಾಗರದಲ್ಲಿ ಮುಳುಗಿರುವೆನು, ಆ ಅಭೇದಜ್ಞಾನವು ನೀನೇ. ನಾನು ಮತ್ತು ನೀನು ಚೈತನ್ಯಮೂರ್ತಿಗಳಾಗಿರುವೆವು. ನೀನು ಬೇರೆ ಯಾಗಿರಲು ಯಾವಕಾಲಕ್ಕು ಸಾಧ್ಯವಿಲ್ಲ. ॥೧೫॥

ಆತ್ಮನ ಹೊರತು ಹೋಗುವಂತಹ ದೇಶವೇ ಇಲ್ಲದುದರಿಂದ ಸ್ವರ್ಗ ನರಕಾದಿರೂಪವಾದ ಯಾವ ಲೋಕಗಳಿಗೂ ನಾನೂ ಹೋಗುವಂತಿಲ್ಲ. ನೀನೂ ಹೋಗುವಂತಿಲ್ಲ. ॥೧೬॥

ನಾವೀರ್ವರೂ ಒಂದೇ ಆದುದರಿಂದ ನೀನು ಹೇಳಬೇಕಾದುದೂ ಇಲ್ಲ. ನಾನು ಕೇಳಬೇಕಾದುದೂ ಇಲ್ಲ. ॥೧೭॥

ನಾವೀರ್ವರೂ ಒಂದೇ ಆದುದರಿಂದ ನೀನು ಗುರುವೂ ಅಲ್ಲ. ನಾನು ಶಿಷ್ಯನೂ ಅಲ್ಲ. ನಾವೀರ್ವರೂ ಬ್ರಹ್ಮವಸ್ತುವೇ ಆಗಿದ್ದೇವೆ. ಬ್ರಹ್ಮವಸ್ತುವಿನಲ್ಲಿ ಐಕ್ಯರಾದವರು. ಗುರು-ಶಿಷ್ಯರೆಂಬ ಭೇದವ್ಯವಹಾರಕ್ಕೆ ಎಂದಿಗೂ ಕಾರಣರಾಗುವುದಿಲ್ಲ. ॥೧೮॥

ಭೇದಾಭೇದಗಳಿಲ್ಲ. ಕಾರ್ಯಾಕಾರ್ಯಗಳಿಲ್ಲ. ಆದುದರಿಂದ ನಮಸ್ಕಾರವೆಂಬುದೂ ಇಲ್ಲ. ಅದರ ಪ್ರಯೋಜನವೂ ಇಲ್ಲ. ॥೧೯॥

ತವೈವ ಚೇನ್ನಮಸ್ಕಾರೋಽಭಿನ್ನತ್ವಾನ್ನಫಲಂ ಭವೇತ್ ।
ತವಚೇನ್ಮಮ ಚೇದ್ಭೇದಂ ಫಲಾಭಾವೋ ನ ಸಂಶಯಃ ॥೨೦॥

ನಮಸ್ಕೃತೋಽಹಂ ಯುಷ್ಮಾಕಂ ಭವಾನಜ್ಞೇತಿ ವಕ್ಷ್ಯತಿ ।
ಮಮೈವೋಪಕರಿಷ್ಯಾಮಿ ಪರಿಚ್ಛಿನ್ನೋ ಭವಾಮ್ಯಹಂ ॥೨೧॥

ಮಮೈವ ಚೇನ್ನಮಸ್ಕಾರಃ ಫಲಂ ನಾಸ್ತಿ ತತಸ್ತ್ವಿತೀ ।
ಕಯಾಪಿ ಚ ನಮಸ್ಕಾರಃ ಕದಾಚಿದಪಿ ನಾಸ್ತಿ ಹಿ ॥೨೨॥

ಸದಾ ಚೈತನ್ಯಮಾತ್ರತ್ವಾನ್ನಾಹಂ ನತ್ವಂ ನಹಿ ದ್ವಯಂ ।
ನ ಬದ್ಧಂ ನ ಪರೋ ನಾನ್ಯೋ ನಾಹಂ ದೇಹಂ ನ ಕಿಂಚನ ॥೨೩॥

ನ ದ್ವಯಂ ನೈಕಮದ್ವೈತಂ ನಿಶ್ಚಿತಂ ನ ಮನೋ ನ ತತ್ ।
ನ ಬೀಜಂ ನ ಸುಖಂ ನ ದುಃಖಂ ನಾಶಂ ನಿಷ್ಠಾ ನ ಸತ್ಸದಾ ॥೨೪॥

---

ನಮಸ್ಕಾರ ಮಾಡುವುದಾದರೆ ನಾನು ನೀನು ಬೇರೆಯಾಗಿರಬೇಕು. ಏಕೆಂದರೆ ನಾವೀರ್ವರೂ ಒಂದೇ ಬ್ರಹ್ಮರೂಪರಾಗಿರುವೆವು, ಆದುದರಿಂದ ನಮಸ್ಕಾರವೂ ಇಲ್ಲ. ಅದಕ್ಕೆ ಪ್ರಯೋಜನವೂ ಇಲ್ಲ. ॥೨೦॥

ನಾನು ನಿನಗೆ ನಮಸ್ಕಾರಮಾಡಿದರೆ ಅಜ್ಞಾನಿಯೆಂದು ನನ್ನನ್ನು ಹೇಳಬಹುದು. ಅಲ್ಲದೇ ನಿನ್ನಿಂದ ನಾನು ಭಿನ್ನವಾಗಿ, ನಮಸ್ಕಾರಮಾಡತಕ್ಕ ಚಿಕ್ಕ ವ್ಯಕ್ತಿಯಾಗಿ, ಸ್ವಾನುಭವಕ್ಕೆ ವಿರುದ್ಧವಾಗಿ ಆಚರಿಸಿದಂತಾಗುವುದು. ॥೨೧॥

ಅದರಂತೆ ನನಗೂ ನೀನು ನಮಸ್ಕಾರ (ಆಶೀರ್ವಾದ) ಮಾಡುವಂತಿಲ್ಲ. ನಾವೀರ್ವರೂ ಒಂದೇ ಆದುದರಿಂದ ಭೇದವಿದ್ದರಾಗಬಹುದಾದ ನಮಸ್ಕಾರ (ಆಶೀರ್ವಾದ) ಮಾಡುವಂತಿಲ್ಲ. ನಾವೀರ್ವರೂ ಒಂದೇ ಆದುದರಿಂದ ಭೇದವಿದ್ದರಾಗ ಬಹುದಾದ ನಮಸ್ಕಾರ (ಆಶೀರ್ವಾದ)ವೂ ಸರಿಹೊಂದುವುದಿಲ್ಲ. ॥೨೨॥

ಚೈತನ್ಯ ಮಾತ್ರವಾದುದರಿಂದ ನಾನೂ ಇಲ್ಲ. ನೀನೂ ಇಲ್ಲ. ಬಂಧಮೋಕ್ಷಗಳೂ ಇಲ್ಲ. ದೇಹವೂ ಇಲ್ಲ. ಏನೇನೂ ಇಲ್ಲ. ॥೨೩॥

ಎರಡೆಂಬುದೂ ಇಲ್ಲ. ಒಂದೆಂಬುದೂ ಇಲ್ಲ. ಅದ್ವೈತವೆಂಬುದೂ ಇಲ್ಲ. ಮನಸ್ಸು ಇಲ್ಲ. ಆದು ಇಲ್ಲ. ಇದೂ ಇಲ್ಲ, ಬೀಜವು ಇಲ್ಲ, ಸುಖವಿಲ್ಲ. ನಾಶವಿಲ್ಲ. ನಿಷ್ಠೆಯಿಲ್ಲ. ॥೨೪॥

ನಾಸ್ತಿ ನಾಸ್ತಿ ನ ಸಂದೇಹಃ ಕೇವಲಾತ್ಪರಮಾತ್ಮನಿ ।
ನ ಜೀವೋ ನೇಶ್ವರೋ ನೈಕೋ ನ ಚಂದ್ರೋ ನಾಗ್ನಿಲಕ್ಷಣಃ ॥೨೫॥

ನ ವಾರ್ತಾ ನೇಂದ್ರಿಯೋ ನಾಹಂ ನ ಮಹತ್ತ್ವಂ ಗುಣಾಂತರಂ ।
ನ ಕಾಲೋ ನ ಜಗನ್ನಾನ್ಯೋ ನಾಂತಃಕರಣಕದ್ವಯಂ ॥೨೬॥

ನೋನ್ನತೋಹಂ ನ ಹೀನೋಹಂ ನ ಮುಕ್ತಸ್ತ್ವತ್ಪ್ರಸಾದತಃ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಸರ್ವಂ ಬ್ರಹ್ಮೈವ ಕೇವಲಂ ॥೨೭॥

ಅಹಂ ಬ್ರಹ್ಮ ಇದಂ ಬ್ರಹ್ಮ ಆತ್ಮಾ ಬ್ರಹ್ಮಾಹಮೇವ ಹಿ ।
ಸರ್ವಂ ಬ್ರಹ್ಮ ನ ಸಂದೇಹಸ್ತ್ವತ್ಪ್ರಸಾದಾನ್ಮಹೇಶ್ವರಃ ॥೨೮॥

ತ್ವಮೇವ ಬ್ರಹ್ಮ ನ ಹಿ ಸದ್ಗುರುರಾತ್ಮೈವ ನಾನ್ಯಥಾ ।
ಆತ್ಮೈವ ಸದ್ಗುರುರ್ಬ್ರಹ್ಮ ಶಿಷ್ಯೋಹ್ಯಾತ್ಮೈವ ಸದ್ಗುರುಃ ॥೨೯॥

ಗುರುಃ ಪ್ರಕಲ್ಪ್ಯತೇ ಶಿಷ್ಯಃ ಗುರುಹೀನೋ ನ ಶಿಷ್ಯಕಃ ।
ಶಿಷ್ಯೇ ಸತಿ ಗುರುಃ ಕಲ್ಪ್ಯಃ ಶಿಷ್ಯಾಭಾವೇ ಗುರುರ್ನಹಿ ॥೩೦॥

---

ಪರಮಾತ್ಮನ ಹೊರತು ಜೀವನಿಲ್ಲ. ಈಶ್ವರನಿಲ್ಲ, ಒಂದೆಂಬ ಸಂಖ್ಯೆಯೂ ಇಲ್ಲ. ಚಂದ್ರನಿಲ್ಲ. ಅಗ್ನಿಯಿಲ್ಲ. ॥೨೫॥

ವಾರ್ತೆಯಿಲ್ಲ, ಇಂದ್ರಿಯಗಳಿಲ್ಲ. ನಾನೆಂಬುದಿಲ್ಲ. ಮಹತ್ತ್ವವಿಲ್ಲ. ಕಾಲವಿಲ್ಲ ಜಗತ್ತಿಲ್ಲ, ಅಂತಃಕರಣವು ಇಲ್ಲ. ಬೇರೇನೂ ಇಲ್ಲ. ॥೨೬॥

ನಾನು ಎತ್ತರವೂ ಅಲ್ಲ. ಕುಳ್ಳನೂ ಅಲ್ಲ. ಉತ್ತಮನೂ ಅಲ್ಲ, ಅಧಮನೂ ಅಲ್ಲ. ನನ್ನಲ್ಲಿ ಗುಣಗಳೂ ಇಲ್ಲ, ಅವಸ್ಥೆಗಳೂ ಇಲ್ಲ. ॥೨೭॥

ನಾನೂ ಬ್ರಹ್ಮನು, ಇದು ಬ್ರಹ್ಮ, ಆತ್ಮನು ಬ್ರಹ್ಮ, ಎಲ್ಲವೂ ಬ್ರಹ್ಮ, ಓ ಋಭುಮುನಿಯೇ, ನಿನ್ನ ಅನುಗ್ರಹದಿಂದ ಇದೆಲ್ಲವನ್ನೂ ನಾನು ತಿಳಿದಿರುವೆನು. ॥೨೮॥

ನೀನೂ ಬ್ರಹ್ಮ, ಸದ್ಗುರುವೆಂಬ ಭೇದವು ನಿನಗಿಲ್ಲ, ಬ್ರಹ್ಮನೇ ಆತ್ಮನು, ಆತ್ಮನೇ ಶಿಷ್ಯನು, ಹೀಗೆ ಗುರು ಬ್ರಹ್ಮ ಶಿಷ್ಯ ಆತ್ಮರಿಗೆ ಭೇದವಿಲ್ಲ. ॥೨೯॥

ಗುರುವಿದ್ದರೆ ಶಿಷ್ಯ, ಶಿಷ್ಯನಿದ್ದರೆ ಗುರು, ಗುರುವಿಲ್ಲದಿದ್ದರೆ ಶಿಷ್ಯನಿಲ್ಲ.

ಗುರುಶಿಷ್ಯವಿಹೀನಾತ್ಮಾ ಸರ್ವತ್ರ ಸ್ವಯಮೇವ ಹಿ ।
ಚಿನ್ಮಾತ್ರಾತ್ಮನಿ ಕಲ್ಪಾರ್ಥಾಃ ಚಿನ್ಮಾತ್ರಾತ್ಮನಿ ಚಾಪರಃ ॥೩೧॥

ಚಿನ್ಮಾತ್ರಾಹಮೇವೈಕೋ ನಾನ್ಯತ್ಕಿಂಚಿನ್ನ ವಿದ್ಯತೇ ।
ಏವಂ ಸ್ಥಿತೋಽಹಂ ಸತತಂ ನಾನ್ಯತ್ಪಶ್ಯಾಮಿ ಸದ್ಗುರೋ ॥೩೨॥

ನಾನ್ಯತ್ಪಶ್ಯಾಮಿ ಚಿತ್ತೇನ ನಾನ್ಯತ್ಪಶ್ಯಾಮಿ ಕಿಂಚನ ।
ಸರ್ವಾಭಾವಾನ್ನ ಪಶ್ಯಾಮಿ ಸರ್ವಂ ಚೇದ್ದೃಶ್ಯತಾಂ ಪೃಥಕ್ ॥೩೩॥

ಏವಂ ಬ್ರಹ್ಮ ಪ್ರಪಶ್ಯಾಮಿ ನಾನ್ಯದಸ್ತೀತಿ ಸರ್ವದಾ ।
ಅಹೋ ಭೇದಂ ಪ್ರಕುಪಿತಮಹೋ ಮಾಯಾ ನ ವಿದ್ಯತೇ ॥೩೪॥

ಅಹೋ ಸದ್ಗುರುಮಾಹಾತ್ಮ್ಯಂ ಅಹೋ ಬ್ರಹ್ಮಸುಖಂ ಮಹತ್ ।
ಅಹೋ ವಿಜ್ಞಾನಮಾಹಾತ್ಮ್ಯಂ ಅಹೋ ಸಜ್ಜನವೈಭವಃ ॥೩೫॥

---

ಶಿಷ್ಯನಿಲ್ಲದಿದ್ದರೆ ಗುರುವಿಲ್ಲ. ಆದುದರಿಂದ ಅದ್ವೈತಭಾವದಲ್ಲಿ ಗುರುವೂ ಇಲ್ಲ. ಶಿಷ್ಯನೂ ಇಲ್ಲ. ಪರಮಾತ್ಮನೊಬ್ಬನೇ ಇರುವವನು. ॥೩೦॥

ಆದುದರಿಂದ ಗುರುಶಿಷ್ಯಭಾವಭೇದವಿಲ್ಲ. ಆತ್ಮನು ನಾನು, ಚೈತನ್ಯರೂಪನಾದ ನನ್ನಲ್ಲಿ ಎಲ್ಲ ಭಾವಭೇದಗಳೂ ಕಲ್ಪಿಸಲ್ಪಡುವುವು. ॥೩೧॥

ಚೈತನ್ಯಾತ್ಮನು ನಾನೊಬ್ಬನೇ, ನನ್ನ ಹೊರತು ಬೇರೇನೂ ಇಲ್ಲ. ಬೇರೆ ಏನೂ ನನಗೆ ಗೋಚರಿಸುವುದೂ ಇಲ್ಲ. ॥೩೨॥

ಚಿತ್ತದಿಂದಲೂ ಸಹ ಬೇರೇನನ್ನೂ ಕಾಣಲಾರೆನು. ಬೇರೆ ಯಾವುದೂ ಇಲ್ಲದುದರಿಂದ ಕಾಣುವುದಿಲ್ಲ. ಸತ್ಯವಾಗಿದ್ದರೆ ತಾನೆ ಕಾಣಿಸುವುದು ? ॥೩೩॥

ಬ್ರಹ್ಮನ ಹೊರತು ಬೇರೇನೂ ಇಲ್ಲವೆಂದು ಆತ್ಮಭಾವದಿಂದ ಬ್ರಹ್ಮವಸ್ತುವನ್ನು ನೋಡುವೆನು. ಆಹಾ! ಭೇದವೂ ನಷ್ಟವಾಯಿತು. ಆಹಾ! ಮಾಯೆಯೂ ಹೋಯಿತು. ॥೩೪॥

ಸದ್ಗುರುವಿನ ಮಹಿಮೆಯು ಆಶ್ಚರ್ಯಕರವಾದುದು. ಆತ್ಮಸುಖವು ಮಹತ್ತಾದುದು, ಜ್ಞಾನದ ಮಹಿಮೆಯು ಅಮೋಘವಾದುದು, ಸಜ್ಜನ ಸಹವಾಸವು ಆಶ್ಚರ್ಯವಾದುದು. ॥೩೫॥

ಅಹೋ ಮೋಹವಿನಾಶಂ ಚ ಅಹೋ ಪಶ್ಯಾಮಿ ಸತ್ಸುಖಂ ।
ಅಹೋ ಚಿತ್ತಂ ನ ಪಶ್ಯಾಮಿ ಅಹೋ ಸರ್ವಂ ನ ಕಿಂಚನ ॥೩೬॥

ಅಹಮೇವ ಹಿ ನಾನ್ಯತ್ರ ಅಹಮಾನಂದಮೇವ ಹಿ ।
ಮಮಾಂತಃಕರಣೇ ಯದ್ಯನ್ನಿಶ್ಚಿತಂ ಭವದೀರಿತಂ ॥೩೭॥

ಸರ್ವಂ ಬ್ರಹ್ಮ ಪರಂ ಬ್ರಹ್ಮ ನ ಕಿಂ ಚಿದನ್ಯದ್ದೈವತಂ ।
ಏವಂ ಪಶ್ಯಾಮಿ ಸತತಂ ನಾನ್ಯತ್ಪಶ್ಯಾಮಿ ಸದ್ಗುರೋ ॥೩೮॥

ಏವಂ ನಿಶ್ಚಿತ್ಯ ತಿಷ್ಠಾಮಿ ಸ್ವಸ್ವರೂಪೇ ಮಮಾತ್ಮನಿ ॥೩೯॥

ಅಗಾಧಬೋಧವೇದವಾಕ್ಯತೋ ನ ಚಾಧಿಭೇಷಜಂ ಭವೇತ್
ಉಮಾಧವಾಂಘ್ರಿಪಂಕಜಂ ಸ್ಮೃತಿಪ್ರಬೋಧಮೋಕ್ಷದಂ ।
ಪ್ರಬುದ್ಧಭೇದವಾಸನಾನಿರುದ್ಧಹೃತ್ತಮೋಭಿದೇ
ಮಹಾರುಜೌಘವೈದ್ಯಮಿಾಶ್ವರಂ ಹೃದಂಬುಜೇ ॥೪೦॥

ಭಯೋದ್ಧತಪ್ರಬುದ್ಧದಃ ಕಾಮದೇಹದುಗ್ಧಸನ್ನಿಭಂ ಪ್ರದುಗ್ಧಸಾಮಿ ।
ಸೋಮಧಾರಿಣಂ ಶ್ರುತೀಡ್ಯಗಂಧಸಂಸ್ತುತಂ ತ್ವಭೇದ್ಯಮೇಕಶಂಕರಂ। ೪೧॥

---

ಸದ್ಗುರುವಿನ ಅನುಗ್ರಹದಿಂದ ಈಗ ಮೋಹನಾಶವನ್ನೂ ಆತ್ಮಸುಖವನ್ನೂ ಚಿತ್ತಲಯವನ್ನೂ ಅಸತ್ಯನಿವೃತ್ತಿಯನ್ನೂ ನೋಡುತ್ತಲಿರುವೆನು. ॥೩೬॥

ನಾನೇ ಎಲ್ಲೆಲ್ಲಿಯೂ ಇರುವೆನು, ಆನಂದಮೂರ್ತಿಯು ನಾನು, ನಾನೇ ಪರಬ್ರಹ್ಮ, ಎಲ್ಲವೂ ಪರಬ್ರಹ್ಮ, ಬೇರೇನೂ ಇಲ್ಲ ಎಂದು ಈಗ ಆತ್ಮಾನುಭವವನ್ನು ಅನುಭವಿಸುತ್ತಲಿರುವೆನು. ॥೩೭-೩೮॥

ಹೀಗೆ ನಿಶ್ಚಯಿಸಿ ಸ್ವಸ್ವರೂಪವಾದ ಆತ್ಮನಲ್ಲಿ ಸ್ಥಿರನಾಗಿರುವೆನು. ಮಹಾ ಮಹಾ ವೇದವಾಕ್ಯಗಳಿಂದಲೂ ಸಂಸಾರರೋಗವು ನಾಶವಾಗಲಾರದು. ಭವರೋಗ ವೈದ್ಯನಿಂದಲೇ ಕೊನೆಯಾಗುವುದು. ಆದುದರಿಂದ ಆ ವೈದ್ಯನಾಥೇಶ್ವರನನ್ನೇ ಹೃದಯಕಮಲದಲ್ಲಿ ಭಜಿಸುವೆನು. ॥೩೯-೪೦॥

ಹಾಲಿನಂತೆ ಬಿಳಿಯ ದೇಹವುಳ್ಳ, ಸಂಸಾರಭಯದಿಂದ ಕೂಡಿದರಿಗೆ ಸುಜ್ಞಾನಪ್ರದನಾದ, ಚಂದ್ರಕಲೆಯನ್ನು ಧರಿಸಿರುವ, ವೇದವೇದ್ಯನಾದ, ಮದನ ವೈರಿಯಾದ ಶಂಕರನನ್ನು ಅಭೇದರೂಪದಿಂದ ಭಜಿಸುವೆನು. ॥೪೧॥

ವರಃ ಕಂಕಃ ಕಾಕೋ ಭವದುಭಯಜಾತೇಷು ನಿಯತಂ
ಮಹಾಶಂಕಾತಂಕೈರ್ವಿಧಿವಿಹಿತಶಾಂತೇನ ಮನಸಾ ।
ಯದಿ ಸ್ವೈರಂ ಧ್ಯಾಯೇದಪಗತಿಸುತಾನಾಯಕಪದಂ
ಸ ಏವಾಯಂ ಧುರ್ಯೋ ಭವತಿ ಮುನಿಜಾತೇಷು ನಿಯತಂ ॥೪೨॥

ತಂ ಕಾಲಾಂತಕಪಾದಪದ್ಮಭಜನಾದನ್ಯದ್ವ್ಯಥಾ ಕಷ್ಟದಾಂ
ಧರ್ಮಾಭಾಸಪರಂ ಪರಾಂ ಪ್ರಥಯತೇ ಮೂರ್ಖೋ ಖರೀ ತೌರಗೀ ।
ಕರ್ತುಂ ಯಜ್ಞಶತೈರಶಕ್ಯಕರಣೈರ್ವಿಂದೇತ ದುಃಖಾಧಿಕಂ
ತದ್ವತ್ಸಾಂಬಪದಾಂಬುಜಾರ್ಚನರತಿಂ ತ್ಯಕ್ತ್ವಾ ವೃಥಾ ದುಃಖಭಾಕ್ ॥೪೩॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ತ್ರಿಚತ್ವಾರಿಂಶೋಽಧ್ಯಾಯಃ

---

ಬಕಪಕ್ಷಿಯಾದರೂ ಕಾಗೆಯಾದರೂ ಜನ್ಮತಾಳಬಹುದು. ಯಾವ ಜನ್ಮದಲ್ಲಾದರೂ ಪರಶಿವನ ಅಡಿದಾವರೆಗಳನ್ನು ಭಕ್ತಿಯಿಂದ ಸೇವಿಸಿದರೆ ಸಾಕು, ಅಂತಹವನು ಮಹಾಮುನಿಯಾಗುವನು. ॥೪೨॥

ಪರಶಿವನ ಅಡಿದಾವರೆಯನ್ನು ಪೂಜಿಸದೆ ಮೂಢಮಾನವನು ಅಸಾಧ್ಯವಾದ ನೂರೆಂಟು ಸಾಧನಗಳಿಂದ ಮಹಾಮಹಾಯಾಗಗಳನ್ನು ವೃಥಾಮಾಡುವನು. ಅಸತ್ಯವಾದಾಧರ್ಮಾಚರಣೆಯಿಂದ ಏನೂ ಪ್ರಯೋಜನವಿಲ್ಲ. ॥೪೩॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಆರನೆಯ ಅಂಶದಲ್ಲಿ ನಲವತ್ತುಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ನಿದಾಘ ಉವಾಚ ॥

ಶೃಣುಷ್ವ ಸದ್ಗುರೋ ಬ್ರಹ್ಮನ್ ತ್ವತ್ಪ್ರಸಾದಾದ್ವಿನಿಶ್ಚಿತಂ ।
ಅಹಮೇವ ಹಿ ತದ್ಬ್ರಹ್ಮ ಅಹಮೇವ ಹಿ ಕೇವಲಃ ॥೧॥

ಅಹಮೇವ ಹಿ ನಿತ್ಯಾತ್ಮಾ ಅಹಮೇವ ಸದಾಜರಃ ।
ಅಹಮೇವ ಹಿ ಶಾಂತಾತ್ಮಾ ಅಹಮೇವ ಹಿ ನಿಷ್ಕಲಃ ॥೨॥

ಅಹಮೇವ ಹಿ ನಿಶ್ಚಿಂತೋ ಅಹಮೇವ ಸುಖಾತ್ಮಕಃ ।
ಅಹಮೇವ ಗುರುಸ್ತ್ವಂ ಹಿ ಅಹಂ ಶಿಷ್ಯೋಽಸ್ಮಿ ಕೇವಲಂ ॥೩॥

---

## ನಲವತ್ತನಾಲ್ಕನೆಯ ಅಧ್ಯಾಯವು

ಓ ಗುರುವೆ. ನಿನ್ನ ಅನುಗ್ರಹದಿಂದುಂಟಾದ ಆತ್ಮಾನುಭವವನ್ನು ಮತ್ತೂ ಹೇಳುವೆನು. ಕೇಳು, ನಾನೇ ಬ್ರಹ್ಮವಸ್ತುವು, ನನ್ನ ಹೊರತು ಏನೂ ಇಲ್ಲ. ಎಂದು ನಿದಾಘಮುನಿಯು ತನ್ನ ಜ್ಞಾನಸ್ವರೂಪವನ್ನು ಮುಂದುವರಿಸಿದನು. ॥೧॥

ನಿತ್ಯನು ನಾನು, ಜರಾಮರಣಾದಿಗಳು ನನಗಿಲ್ಲ. ಶಾಂತನು ನಾನು, ಅವಯವಗಳು ನನಗಿಲ್ಲ. ॥೨॥

ನನಗೆ ಯಾವ ಚಿಂತೆಯೂ ಇಲ್ಲ. ಸುಖಸ್ವರೂಪನು ನಾನು, ನಾನೇ ಗುರುವು, ನಾನೇ ಶಿಷ್ಯನು. ॥೩॥

ಅಹಮಾನಂದ ಏವಾತ್ಮಾ ಅಹಮೇವ ಹಿ ಶಂಕರಃ ।
ಅಹಂ ವೈ ಪರಿಪೂರ್ಣಾತ್ಮಾ ಅಹಮೇವೇಶ್ವರಃ ಪರಃ ॥೪॥

ಅಹಂ ವಿದೇಹ ಏವಾತ್ಮಾ ಅಹಮೇವ ನಿರಂಜನಃ ।
ಅಹಂ ತುರ್ಯಾತಿಗೋಽಹ್ಯಾತ್ಮಾ ಅಹಮೇವ ಗುಣೋಜ್ಝಿತಃ ॥೫॥

ಅಹಮೇವ ಹಿ ಲಕ್ಷ್ಯಾತ್ಮಾ ಅಹಮೇವ ಮನೋಮಯಃ ।
ಅಹಮೇವ ಹಿ ಸರ್ವಾತ್ಮಾ ಅಹಮೇವ ಸದಾಶಿವಃ ॥೬॥

ಅಹಂ ವಿಷ್ಣುರಹಂ ಬ್ರಹ್ಮಾ ಅಹಮಿಂದ್ರೋಽಹ್ಯಹಂ ಸುರಾಃ ।
ಅಹಂ ವೈ ಯಕ್ಷರಕ್ಷಾಂಸಿ ಪಿಶಾಚಾ ಗುಹ್ಯಕಾಸ್ತಥಾ ॥೭॥

ಅಹಂ ಸಮುದ್ರಾಸ್ಸರಿತಃ ಅಹಮೇವ ಹಿ ಪರ್ವತಾಃ ।
ಅಹಂ ವನಾನಿ ಭುವನಂ ಅಹಮೇವೇದಮೇವ ಹಿ ॥೮॥

ನಿತ್ಯತೃಪ್ತೋಽಹ್ಯಹಂ ಶುದ್ಧಃ ಬುದ್ಧೋಽಹಂ ಪ್ರಕೃತೇಃ ಪರಃ ।
ಅಹಮೇವ ಹಿ ಸರ್ವತ್ರ ಅಹಮೇವ ಹಿ ಸರ್ವಗಃ ॥೯॥

---

ನಾನೇ ಆನಂದಸ್ವರೂಪನು, ನಾನೇ ಶಂಕರನು, ಪರಿಪೂರ್ಣವಸ್ತುವು ನಾನೇ. ನಾನೇ ಪರಮೇಶ್ವರನು. ॥೪॥

ದೇಹವಿಲ್ಲದ ನಿತ್ಯಾತ್ಮನು ನಾನು, ನಿರ್ಮಲನು ನಾನು, ಜ್ಞಾನಮೂರ್ತಿಯು ನಾನು, ನನಗೆ ಯಾವ ಅವಸ್ಥೆಗಳೂ ಇಲ್ಲ. ಯಾವ ಗುಣಗಳೂ ಇಲ್ಲ. ॥೫॥

ಎಲ್ಲರ ಗುರಿಯೂ ನಾನೇ, ಎಲ್ಲರ ಮನಸ್ಸಿನಲ್ಲಿ ಪ್ರತಿಬಿಂಬಿಸಿರುವ ಜೀವಾತ್ಮನೂ ನಾನೇ. ನಾನೇ ಸದಾ ಶಿವನು, ಯಾವಾಗಲೂ ಮಂಗಳರೂಪನು. ॥೬॥

ನಾನೇ ವಿಷ್ಣುವು, ನಾನೇ ಬ್ರಹ್ಮನು, ಇಂದ್ರಾದಿದೇವತೆಗಳೂ ನಾನೇ, ಯಕ್ಷರಾಕ್ಷಸರೂ ನಾನೇ, ಪಿಶಾಚಗುಹ್ಯಕರೂ ನಾನೇ, ನದಿಸಮುದ್ರಗಳೂ ನಾನೇ, ಬೆಟ್ಟಗಳೂ ನಾನೇ, ಕಾಡುಮೇಡುಗಳೂ ನಾನೇ, ಲೋಕವೇದಗಳೂ ನಾನೇ. ॥೭-೮॥

ನಿತ್ಯತೃಪ್ತನು ನಾನು, ಶುದ್ಧನೂ ಜ್ಞಾನಮೂರ್ತಿಯೂ ಪ್ರಕೃತಿಯ ಸಂಬಂಧವಿಲ್ಲದವನೂ ನಾನೇ ಆಗಿರುವೆನು. ಎಲ್ಲೆಲ್ಲಿಯೂ ನಾನೇ ಹರಡಿರುವೆನು, ನಾನೇ

ಅಹಮೇವ ಮಹಾನಾತ್ಮಾ ಸರ್ವಮಂಗಳವಿಗ್ರಹಃ ।
ಅಹಮೇವ ಹಿ ಮುಕ್ತೋಽಸ್ಮಿ ಶುದ್ಧೋಽಸ್ಮಿ ಪರಮಃ ಶಿವಃ ॥೧೦॥

ಅಹಂ ಭೂಮಿರಹಂ ವಾಯುರಹಂ ತೇಜೋಽಹ್ಯಹಂ ನಭಃ ।
ಅಹಂ ಜಲಮಹಂ ಸೂರ್ಯಶ್ಚಂದ್ರಮಾಭಗಣಾ ಹ್ಯಹಂ ॥೧೧॥

ಅಹಂ ಲೋಕಾ ಅಲೋಕಾಶ್ಚ ಅಹಂ ಲೋಕ್ಯಾ ಅಹಂ ಸದಾ ।
ಅಹಮಾತ್ಮಾ ಪಾರದೃಶ್ಯಃ ಅಹಂ ಪ್ರಜ್ಞಾನವಿಗ್ರಹಃ ॥೧೨॥

ಅಹಂ ಶೂನ್ಯೋ ಅಶೂನ್ಯೋಽಹಂ ಸರ್ವಾನಂದಮಯೋಽಸ್ಮ್ಯಹಂ ।
ಶುಭಾಶುಭಫಲಾತೀತೋ ಹ್ಯಹಮೇವ ಹಿ ಕೇವಲಂ ॥೧೩॥

ಅಹಮೇವ ಋತಂ ಸತ್ಯಂ ಅಹಂ ಸಚ್ಚಿತ್ಸುಖಾತ್ಮಕಃ ।
ಅಹಮಾನಂದ ಏವಾತ್ಮಾ ಬಹುಧಾತ್ವೇಕಥಾ ಸ್ಥಿತಃ ॥೧೪॥

ಅಹಂ ಭೂತಂ ಭವಿಷ್ಯಚ್ಚ ವರ್ತಮಾನಮಹಂ ಸದಾ ।
ಅಹಮೇಕೋ ದ್ವಿಧಾಹಂ ಚ ಬಹುಧಾ ಚಾಹಮೇವ ಹಿ ॥೧೫॥

ಅಹಮೇವ ಪರಂ ಬ್ರಹ್ಮ ಅಹಮೇವ ಪ್ರಜಾಪತಿಃ ।
ಸ್ವರಾಟ್ಸಂರಾಟ್ ಜಗದ್ಯೋನಿರಹಮೇವ ಹಿ ಸರ್ವದಾ ॥೧೬॥

---

ಮಹಾತ್ಮನು, ಮಂಗಳರೂಪನೂ ಮುಕ್ತನೂ ಶುದ್ಧನೂ ಪರಶಿವನೂ ಆಗಿರುವೆನು. ॥೯-೧೦॥

ಭೂಮಿಯು ನಾನೇ, ವಾಯು, ತೇಜಸ್ಸು, ಆಕಾಶ, ಜಲಗಳೂ ನಾನೇ, ಸೂರ್ಯ ಚಂದ್ರ ನಕ್ಷತ್ರಗಳೂ ನಾನೇ, ಲೋಕಗಳೂ ಲೋಕವಾಸಿಗಳೂ ನಾನೇ, ಇಂದ್ರಿಯಗಳಿಗೆ ಅಗೋಚರನಾದ ಆತ್ಮನು ನಾನು, ಜ್ಞಾನಮೂರ್ತಿಯು ನಾನು. ॥೧೧-೧೨॥

ನಾನು ಶೂನ್ಯನೂ ಪೂರ್ಣನೂ ಆಗಿರುವೆನು. ಆನಂದಮಯನು ನಾನು, ಶುಭಾಶುಭಫಲಗಳು ನನಗಿಲ್ಲ, ಸತ್ಯವು ನಾನು, ಜ್ಞಾನಾನಂದಸ್ವರೂಪನು ನಾನೇ, ಆನಂದಾತ್ಮನೇ ನಾನು, ಏಕರೂಪವಾಗಿಯೂ ಅನೇಕರೂಪವಾಗಿಯೂ ಇರುವೆನು. ॥೧೩-೧೪॥

ಭೂತಭವಿಷ್ಯದ್ವರ್ತಮಾನಗಳು ನಾನೇ, ಒಂದು ಎರಡು ಮೊದಲಾಗಿ

ಅಹಂ ವಿಶ್ವಸ್ತೈಜಸಶ್ಚ ಪ್ರಾಜ್ಞೋಽಹಂ ಜೀವ ಏವ ಹಿ ।
ಅಹಂ ಪ್ರಾಣೋ ಮನಶ್ಚಾಹಂ ಅಹಮಿಂದ್ರಿಯವರ್ಗಕಂ ॥೧೭॥

ಅಹಂ ವಿಶ್ವಂ ಹಿ ಭುವನಂ ಗಗನಾತ್ಮಾಹಮೇವ ಚ ।
ಅನುಪಾಧಿ ಉಪಾಧ್ಯಂ ಯತ್ತತ್ಸರ್ವಂ ಚಾಹಮೇವ ಹಿ ॥೧೮॥

ಉಪಾಧಿರಹಿತಶ್ಚಾಹಂ ನಿತ್ಯಾನಂದೋಽಹಮೇವ ಹಿ ।
ಏವಂ ನಿಶ್ಚಯವಾನಂತಃ ಸರ್ವದಾ ಸುಖಮಶ್ನುತೇ ॥೧೯॥

ಏವಂ ಯಃ ಶೃಣುಯಾನ್ನಿತ್ಯಂ ಸರ್ವಬಂಧೈಃ ಪ್ರಮುಚ್ಯತೇ ॥೨೦॥

ನಿತ್ಯೋಽಹಂ ನಿರ್ವಿಕಲ್ಪೋ ಜನವನಭುವನೇ ಪಾವನೋಽಹಂ ಮನೀಷೀ,
ವಿಶ್ವೋ ವಿಶ್ವಾತಿಗೋಽಹಂ ಪ್ರಕೃತಿವಿನಿಕೃತೋ ಏಕಧಾ ಸಂಸ್ಥಿತೋಽಹಂ ।
ನಾನಾಕಾರವಿನಾಶಜನ್ಮರಹಿತ ಸ್ತ್ವಜ್ಞಾನಕಾರ್ಯೋಜ್ಝಿತೋ-
ಭೂಮಾನಂದಘನೋಽಸ್ಮ್ಯಹಂ ಪರಶಿವಃ ಸತ್ಯಸ್ವರೂಪೋಽಸ್ಮ್ಯಹಂ ॥೨೧॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ಚತುಶ್ಚತ್ವಾರಿಂಶೋಽಧ್ಯಾಯಃ

---

ಅನೇಕ ರೂಪವಾಗಿರುವೆನು, ನಾನೇ ಪರಬ್ರಹ್ಮನು, ನಾನೇ ಪ್ರಜಾಪತಿಯು, ಇಂದ್ರನೂ ಚಕ್ರವರ್ತಿಯೂ ಜಗತ್ಕಾರಣನೂ ನಾನೇ ಆಗಿರುವೆನು. ॥೧೫-೧೬॥

ವಿಶ್ವತೈಜಸಪ್ರಾಜ್ಞರೆಂಬ ಆತ್ಮಭೇದಗಳೂ ನಾನೇ. ಪ್ರಾಣ ಮನಸ್ಸು ಇಂದ್ರಿಯಗಳೂ ನಾನೇ. ಪ್ರಪಂಚ, ಲೋಕ, ಗಗನ ಇವೆಲ್ಲವೂ ನಾನೇ, ಉಪಾಧಿಯೂ ಅನುಪಾಧಿಯೂ ನಾನೇ. ॥೧೭-೧೮॥

ನನಗೆ ಯಾವ ಉಪಾಧಿ(ಸ್ಥಾನ)ಯೂ ಇಲ್ಲ. ನಿತ್ಯಾನಂದನು ನಾನು, ಹೀಗೆ ಯಾವನು ನಿಶ್ಚಯವುಳ್ಳವನೋ ಅವನು ಮುಕ್ತಿಸುಖವನ್ನು ಹೊಂದುವನು. ಇದನ್ನು ಕೇಳುವವನೂ ಸಹ ಸಂಸಾರಬಂಧನಗಳಿಂದ ಬಿಡಲ್ಪಡುವನು. ॥೧೯-೨೦॥

ನಿತ್ಯನು ನಾನು, ವಿಕಲ್ಪಗಳು ನನಗಿಲ್ಲ, ಅತಿ ಪವಿತ್ರನು ನಾನು, ಜ್ಞಾನ ಸ್ವರೂಪನು ನಾನು, ಪ್ರಪಂಚಸ್ವರೂಪನೂ ಪ್ರಪಂಚಸಂಬಂಧವಿಲ್ಲದವನೂ ನಾನೇ ಆಗಿರುವೆನು. ಪ್ರಕೃತಿಗೆ ನಾನು ಅಧೀನನಲ್ಲ, ಅದ್ವಿತೀಯನು ನಾನು, ನಾನಾರೂಪಗಳು

ನನಗಿಲ್ಲ, ಜನ್ಮವೂ ನನಗೆ ಇಲ್ಲ, ಅಜ್ಞಾನವು ಇಲ್ಲ, ಬ್ರಹ್ಮಾನಂದಪೂರ್ಣನು ನಾನು, ನಾನು ಸದಾ ಸತ್ಯಸ್ವರೂಪನಾಗಿರುವೆನಲ್ಲದೆ ಪರಶಿವಸ್ವರೂಪನೂ ಆಗಿರುವೆನು. ಅಲ್ಲದೆ ಮಹಾನಂದಸ್ವರೂಪನಾಗಿಯೂ ಇರುವೆನು. ಈ ವಿಧವಾದ ಭಾವನೆಯು ಲ್ಲಿಯೇ ನಾನು ಮುಳುಗಿರುವೆನು. ನಾನು ಇಂದಿಗೆ ಸರ್ವದುಃಖಮುಕ್ತನೆನಿಸಿರು ವೆನು. ಎಂದು ನಿದಾಘಮುನಿಯು ಬ್ರಹ್ಮಜ್ಞಾನಸ್ವರೂಪವನ್ನು ವಿವರವಾಗಿ ತಿಳಿಸಿ ದನು. ||೨೧||

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಪಂಚಚತ್ವಾರಿಂಶೋಽಧ್ಯಾಯಃ

॥ ನಿದಾಘ ಉವಾಚ ॥

ಪುಣ್ಯೇ ಶಿವರಹಸ್ಯೇಽಸ್ಮಿನ್ನಿತಿಹಾಸೇ ಶಿವೋದಿತೇ ।
ದೇವ್ಯೈ ಶಿವೇನ ಕಥಿತೇ ದೇವ್ಯಾ ಸ್ಕಂದಾಯ ಚೋದಿತಃ ॥೧॥

ಏತತ್ತಸ್ಮಿನ್ ಹಿ ಷಷ್ಠಾಂಶೇ ಷಡಾಸ್ಯಕೇನ ಲೋದಿತೇ ।
ಪಾರಮೇಶ್ವರವಿಜ್ಞಾನಂ ಶ್ರುತಮೇತನ್ಮಹಾಘಭಿತ್ ॥೨॥

ಮಹಾಮಾಯಾತಮಸ್ತೋಮನಿವಾರಣಭಾಸ್ಕರಂ ।
ಅಸ್ಯಾಧ್ಯಾಯೈಕಕಥನಾದ್ವಿಜ್ಞಾನಂ ಮಹದಶ್ನುತೇ ॥೩॥

---

## ನಲವತ್ತೈದನೆಯ ಅಧ್ಯಾಯ

ಓ ಗುರುವೇ, ಪವಿತ್ರತಮವಾದೀ ಶಿವರಹಸ್ಯಕಥೆಯನ್ನು ಸಾಕ್ಷಾತ್ ಶಿವನೇ ಪಾರ್ವತೀದೇವಿಗೆ ಹೇಳಿದನು. ಅದನ್ನು ಪಾರ್ವತಿಯು ಮಗನಾದ ಸ್ಕಂದ ಸ್ವಾಮಿಗೆ ಹೇಳಿದಳು. ಸ್ಕಂದನು ಜೈಗೀಷವ್ಯಾದಿಗಳಿಗೆ ತಿಳಿಸಿದನು. ಹೀಗೆ ಸ್ಕಂದನು ಹೇಳಿದ ಈ ಆರನೆಯಂಶದ ಪರಮೇಶ್ವರೀಯಜ್ಞಾನವನ್ನು ನಿನ್ನಿಂದ ಈಗ ನಾನು ಕೇಳಿ ಸಕಲ ಪಾಪಗಳಿಂದಲೂ ಬಿಡುಗಡೆಹೊಂದಿದೆನು. ॥೧-೨॥

ಮಹಾಮಾಯೆಯೆಂಬ ಕತ್ತಲೆಯನ್ನು ನಿವಾರಿಸುವ ಭಾಸ್ಕರನಂತಿರುವ ಈ ಶಿವರಹಸ್ಯದ ಆರನೆಯಂಶದ ಒಂದಧ್ಯಾಯವನ್ನು ಕೇಳಿದರೂ ಸಾಕು. ಮಹಾ ಜ್ಞಾನಿಯಾಗುವನು. ॥೩॥

ಶ್ಲೋಕಸ್ಯ ಶ್ರವಣೇನಾಪಿ ಜೀವನ್ಮುಕ್ತೋ ನ ಸಂಶಯಃ ।
ಏತದ್ಗ್ರಂಥಪ್ರವಕ್ತಾ ಹಿ ಷಣ್ಮುಖಃ ಶಿವ ಏವ ಹಿ ॥೪॥

ಜೈಗೀಷವ್ಯೋ ಮಹಾಯೋಗೀ ಸ ಏವ ಶ್ರಹಣೇರ್ಹತಿ ।
ಭಸ್ಮರುದ್ರಾಕ್ಷಧೃಕ್ ನಿತ್ಯಂ ಸದಾ ಹ್ಯತ್ಯಾಶ್ರಮೀ ಮುನಿಃ ॥೫॥

ಏತದ್ಗ್ರಂಥಪ್ರವಕ್ತಾ ಹಿ ಸ ಗುರುರ್ನಾತ್ರಸಂಶಯಃ ।
ಏತದ್ಗ್ರಂಥಪ್ರವಕ್ತಾ ಹಿ ಪರಂ ಬ್ರಹ್ಮ ನ ಸಂಶಯಃ ॥೬॥

ಏತದ್ಗ್ರಂಥಪ್ರವಕ್ತಾ ಹಿ ಶಿವ ಏವ ನ ಚಾಪರಃ ।
ಏತದ್ಗ್ರಂಥಪ್ರವಕ್ತಾ ಹಿ ಸಾಕ್ಷಾದ್ದೇವೀ ನ ಸಂಶಯಃ ॥೭॥

ಏತದ್ಗ್ರಂಥಪ್ರವಕ್ತಾ ಹಿ ಗಣೇಶೋ ನಾತ್ರ ಸಂಶಯಃ ।
ಏತದ್ಗ್ರಂಥಪ್ರವಕ್ತಾ ಹಿ ಸ್ಕಂದಃ ಸ್ಕಂದಿತತಾರಕಃ ॥೮॥

ಏತದ್ಗ್ರಂಥಪ್ರವಕ್ತಾ ಹಿ ನಂದಿಕೇಶೋ ನ ಸಂಶಯಃ ।
ಏತದ್ಗ್ರಂಥಪ್ರವಕ್ತಾ ಹಿ ದತ್ತಾತ್ರೇಯೋ ಮುನಿಃ ಸ್ವಯಂ ॥೯॥

---

ಈ ಶಂಕರಾಂಶದ ಒಂದು ಪದ್ಯವನ್ನಾದರೂ ಕೇಳಿದರೆ ಸಾಕು. ಅಂತಹವನು ಜೀವನ್ಮುಕ್ತನಾಗುವನು. ಈ ಗ್ರಂಥವನ್ನು ಹೇಳುವವನು ಸಾಕ್ಷಾತ್ ಷಣ್ಮುಖನೂ ಶಿವನೂ ಆಗುನನು. (ಅಥವಾ) ಈ ಗ್ರಂಥವನ್ನು ಹೇಳಿದ ಷಣ್ಮುಖನೂ ಶಿವಸ್ವರೂಪನೇ ಆಗಿಲ್ಲವೆ? ॥೪॥

ಸ್ಕಂದನಂತಹವನಿಂದ ಈ ಗ್ರಂಥವನ್ನು ಕೇಳಲು ಮಹಾಜ್ಞಾನಿಯೂ ಭಸ್ಮರುದ್ರಾಕ್ಷಧಾರಿಯೂ ಶಿವಜ್ಞಾನಸಂಪನ್ನನೂ ಆದ ಜೈಗೀಷವ್ಯನಂತಹ ಮಹಾ ಯೋಗಿಯೇ ತಕ್ಕವನು. ॥೫॥

ಈ ಗ್ರಂಥವನ್ನು ಹೇಳುವವನೇ ನಿಜವಾದ ಗುರುವು, ಅವನೇ ಪರಬ್ರಹ್ಮನು, ಅವನೇ ಶಿವನು. ಅವನು ಬೇರೆಯಲ್ಲ. ಸಾಕ್ಷಾತ್ ಗೌರೀಸ್ವರೂಪನೂ ಅವನೇ. ॥೬-೭॥

ಈ ಶಿವರಹಸ್ಯ ಗ್ರಂಥವನ್ನು ಹೇಳುವವನು ಸಾಕ್ಷಾತ್ ಗಣೇಶನು, ಅವನೇ ತಾರಕಾಸುರನನ್ನು ಸಂಹರಿಸಿದ ಕುಮಾರಸ್ವಾಮಿಯು, ಅವನೇ ನಂದಿಕೇಶ್ವರನು, ಅವನೇ ದತ್ತಾತ್ರೇಯಮುನಿಯು, ಅವನೇ ದಕ್ಷಿಣಾಮೂರ್ತಿಯು. ॥೮-೯॥

ಏತದ್ಗ್ರಂಥಪ್ರವಕ್ತಾ ಹಿ ದಕ್ಷಿಣಾಮೂರ್ತಿರೇವ ಹಿ ।
ಏತದ್ಗ್ರಂಥಾರ್ಥಕಥನೇ ಭಾವನೇ ಮುನಯಸ್ಸುರಾಃ ॥೧೦॥

ನ ಶಕ್ತಾ ಮುನಿಶಾರ್ದೂಲ ತ್ವದೃತೇಽಹಂ ಶಿವೇ ಶಪೇ ।
ಏತದ್ಗ್ರಂಥಾರ್ಥಕರ್ತಾರಂ ಗುರುಂ ಸರ್ವಾತ್ಮನಾ ಯಜೇತ್ ॥೧೧॥

ಏತದ್ಗ್ರಂಥಂ ಪ್ರವಕ್ತಾ ತು ಶಿವೋ ವಿಶ್ವೇಶ್ವರಃ ಸ್ವಯಂ ।
ಪಿತಾ ಹಿ ಜನ್ಮದೋ ಜಂತೋರ್ಗುರುರ್ಜನ್ಮವಿನಾಶಕಃ ॥೧೨॥

ಏತದ್ಗ್ರಂಥಂ ಸಮಭ್ಯಸ್ಯ ಗುರೋರ್ವಕ್ತ್ರಾದ್ವಿಶೇಷತಃ ।
ನದ್ರುಹ್ಯೇತ ಗುರುಂ ಶಿಷ್ಯಃ ಮನಸಾ ವಚಸಾ ಯತಃ ॥೧೩॥

ಗುರುರೇವ ಶಿವಃ ಸಾಕ್ಷಾಚ್ಛಿವ ಏವ ಗುರುಃ ಸ್ವಯಂ ।
ಶಿವೇ ರುಷ್ಟೇ ಗುರುಸ್ತ್ರಾತಾ ಗುರೌ ರುಷ್ಟೇ ನ ಕಶ್ಚನ ॥೧೪॥

---

ಈ ಗ್ರಂಥವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಮುನಿಗಳೂ ದೇವತೆಗಳೂ ಸಮರ್ಥರಲ್ಲ. ಓ ನಿದಾಘಮುನಿಯೇ ಶಿವನ ಆಣೆಯಾಗಿಯೂ ಹೇಳುವೆನು, ನಿನ್ನ ಹೊರತು ಇನ್ನಾರೂ ಈ ಗ್ರಂಥವನ್ನರ್ಥಮಾಡಲಾರರು. ॥೧೦-೧೧॥

ಈ ಗ್ರಂಥವನ್ನು ಹೇಳುವವನು ಸರ್ವೇಶ್ವರನಾದ ಸ್ವಯಂ ಶಿವನೆ, ತಂದೆಯು ಪ್ರಾಣಿಗೆ ಜನ್ಮವನ್ನಿತ್ತರೆ ಗುರುವು ಆತ್ಮೋಪದೇಶದಿಂದ ಜನ್ಮವನ್ನೇ ನಾಶಮಾಡುವನು. ಆದುದರಿಂದ ತಂದೆಗಿಂತ ಗುರುವೇ ಉತ್ತಮನು. ॥೧೧-೧೨॥

ಈ ಗ್ರಂಥವನ್ನು ಗುರುವಿನ ಮುಖದಿಂದ ಅಭ್ಯಾಸಮಾಡಿದವನು ಗುರುವಿಗೆ ಮನೋವಾಕ್ಕಾಯಗಳಿಂದಲೂ ದ್ರೋಹವೆಸಗಲಾರನು. ಎಂದೂ ಗುರುದ್ರೋಹಿಯಾಗುವುದಿಲ್ಲ. ॥೧೩॥

ಗುರುವೇ ಶಿವನು, ಶಿವನೇ ಗುರುವು, ಶಿವನು ಕೋಪಗೊಂಡರೆ ಗುರುವು ನಮ್ಮನ್ನು ರಕ್ಷಿಸಬಲ್ಲನು. ಆದರೆ ಗುರುವೇ ಕೋಪಗೊಂಡರೆ ಯಾರೂ ನಮ್ಮನ್ನು ರಕ್ಷಿಸಲಾರರು. ನಿಜವಾದ ಗುರುವಿನ ಮಹಿಮೆಯಂತಹುದು. ॥೧೪॥

ಏತದ್ಗ್ರಂಥಪದಾಭ್ಯಾಸೇ ಶ್ರದ್ಧಾ ವೈ ಕಾರಣಂ ಪರಂ ।
ಅಶ್ರದ್ದಧಾನಃ ಪುರುಷೋ ನೈತಲ್ಲೇಶಮಿಹಾರ್ಹತಿ ॥೧೫॥

ಶ್ರದ್ಧೈವ ಪರಮಂ ಶ್ರೇಯಃ ಜೀವಬ್ರಹ್ಮೈಕ್ಯಕಾರಣಂ ।
ಅಸ್ತಿಬ್ರಹ್ಮೇತಿ ಚೇಚ್ಛ್ರುತ್ಯಾ ಭಾವಯನ್ ಸಂತ ಏವ ಹಿ ॥೧೬॥

ಶಿವಪ್ರಸಾದಹೀನೋ ಯೋ ನೈತದ್ಗ್ರಂಥಾರ್ಥವಿದ್ಭವೇತ್ ।
ಭಾವಗ್ರಾಹ್ಯೋಽಯಮಾತ್ಮಾಯಂ ಪರ ಏಕಶ್ಶಿವೋ ಧ್ರುವಃ ॥೧೭॥

ಸರ್ವಮನ್ಯತ್ಪರಿತ್ಯಜ್ಯ ಧ್ಯಾಯೀತೇಶಾನಮವ್ಯಯಂ ।
ಶಿವಜ್ಞಾನಮಿದಂ ಶುದ್ಧಂ ದ್ವೈತಾದ್ವೈತವಿನಾಶಕಂ ॥೧೮॥

ಅನ್ಯೇಷು ಚ ಪುರಾಣೇಷು ಇತಿಹಾಸೇಷು ನ ಕ್ವಚಿತ್ ।
ಏತಾದೃಶಂ ಶಿವಜ್ಞಾನಂ ಶ್ರುತಿಸಾರಮಹೋದಯಂ ॥೧೯॥

ಉಕ್ತಂ ಸಾಕ್ಷಾಚ್ಛಿವೇನೈವ ಯೋಗಸಾಂಖ್ಯವಿವರ್ಜಿತಂ ।
ಭಾವನಾಮಾತ್ರಸುಲಭಂ ಭಕ್ತಿಗಮ್ಯಮನಾಮಯಂ ॥೨೦॥

---

ಈ ಗ್ರಂಥವನ್ನೋದಬೇಕಾದರೆ ಮುಖ್ಯವಾಗಿ ಶ್ರದ್ಧೆಯಿರಬೇಕು. ಶ್ರದ್ಧೆಯಿಲ್ಲದವನು ಇದರ ಫಲವನ್ನು ಸ್ವಲ್ಪವೂ ಪಡೆಯಲಾರನು. ॥೧೫॥

ಶ್ರದ್ಧೆಯೇ ಶ್ರೇಯಸ್ಸಿಗೆ ಮೂಲವು, ಜೀವಬ್ರಹ್ಮೈಕ್ಯಕ್ಕೆ ಕಾರಣವು, ಬ್ರಹ್ಮವಸ್ತುವು ಇದೆ ಎಂದು ನಂಬುವವನೇ ನಿಜವಾದ ಆಸ್ತಿಕನು—ಎಂದು ಹೇಳುವ ವೇದವೂ ಸಹ ಶ್ರದ್ಧೆಯೇ ಮುಖ್ಯವೆಂದು ಹೇಳುವುದು. ॥೧೬॥

ಶಿವನ ಅನುಗ್ರಹವಿಲ್ಲದವರಿಗೆ ಈ ಗ್ರಂಥವು ಅರ್ಥವಾಗಲಾರದು. ಇದರಲ್ಲಿ ಹೇಳುವಂತೆ ಪರಮಾತ್ಮನನ್ನು ಶಿವಭಾವನೆಯಿಂದಲೇ ಗ್ರಹಿಸಬೇಕು. ॥೧೭॥

ಆದುದರಿಂದ ಮಿಕ್ಕದ್ದೆಲ್ಲವನ್ನೂ ಬಿಟ್ಟು ಅನಂತನಾದ ಈಶ್ವರನನ್ನೇ ಧ್ಯಾನಿಸಬೇಕು. ಈ ಗ್ರಂಥದಲ್ಲಿ ಹೇಳುವ ಶಿವಜ್ಞಾನವು ಭೇದಾಭೇದವನ್ನು ತೊಲಗಿಸಿ ಕೇವಲಾಭೇದವನ್ನು ನಿರೂಪಿಸುವುದು. ವೇದಾಂತ ಸಾರವಾದೀ ತತ್ತ್ವಜ್ಞಾನವು ಇನ್ನಾವ ಪುರಾಣಗಳಲ್ಲೂ ಹೇಳಲ್ಪಟ್ಟಿಲ್ಲ. ॥೧೮-೧೯॥

ಸಾಕ್ಷಾತ್ ಶಿವನೇ ಹೇಳಿರುವ, ಯೋಗಸಾಂಖ್ಯಗಳ ತೊಡಕಿಲ್ಲದ, ಈ

ಮಹಾನಂದಪ್ರದಂ ಸಾಕ್ಷಾತ್ಪ್ರಸಾದೇನೈವ ಲಭ್ಯತೇ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥೨೧॥

ಏತದ್ಗ್ರಂಥಂ ಗುರೋಃ ಶ್ರುತ್ವಾ ನ ಪೂಜಾಂ ಕುರುತೇ ಯದಿ ।
ಶ್ವಾನಯೋನಿಶತಂ ಪ್ರಾಪ್ಯ ಚಂಡಾಲಃ ಕೋಟಿಜನ್ಮಸು ॥೨೨॥

ಏತದ್ಗ್ರಂಥಸ್ಯ ನಿಂದಾಂ ಯಃ ಕುರುತೇ ಕೋಟಿಜನ್ಮಸು ।
ಗಾರ್ದಭೀಂ ಯೋನಿಮಭ್ಯೇತ್ಯ ವಿಷ್ಠಾಕೂಪೇ ಭವೇದಧಃ ॥೨೩॥

ಏತದ್ಗ್ರಂಥಸ್ಯ ಮಾಹಾತ್ಮ್ಯಂ ನ ಯಜಂತೀಶ್ವರಂ ಹೃದಾ ।
ಸ ಸೂಕರೋ ಭವತ್ಯೇವ ಸಹಸ್ರಪರಿವತ್ಸರಾನ್ ॥೨೪॥

ಏತದ್ಗ್ರಂಥಾರ್ಥವಕ್ತಾರಂ ಅಭ್ಯಸೂಯೇತ ಯೋ ದ್ವಿಜಃ ।
ಅನೇಕಬ್ರಹ್ಮಕಲ್ಪಂ ಚ ವಿಷ್ಠಾಯಾಂ ಜಾಯತೇ ಕ್ರಿಮಿಃ ॥೨೫॥

---

ಗ್ರಂಥವು ಶಿವನ ಅನುಗ್ರಹದಿಂದ ಮಾತ್ರವೇ ಅರ್ಥವಾಗುವುದು. ಶಿವನ ಅನುಗ್ರಹವುಳ್ಳವನಿಗೆ ಗುರುವು ಹೇಳದಿದ್ದ ಭಾಗವೂ ಅರ್ಥವಾಗುವುದು. ||೨೦-೨೧||

ಈ ಗ್ರಂಥವನ್ನು ಗುರುವಿನಿಂದ ಕೇಳಿ ಪೂಜಿಸದಿದ್ದರೆ ನೂರು ನಾಯಿಯ ಜನ್ಮಗಳಲ್ಲಿ ಹುಟ್ಟಿ ಕೋಟಿಜನ್ಮಗನಲ್ಲಿ ಚಂಡಾಲನಾಗಿ ಕೊಳೆಯುವನು. ಈ ಗ್ರಂಥವನ್ನು ನಿಂದಿಸುವವನು ಕೋಟಿಜನ್ಮಗಳಲ್ಲಿ ಕತ್ತೆಯಾಗುವನಲ್ಲದೆ ಕ್ರಿಮಿಮಲಗಳ ಭೂಮಿಯಲ್ಲಿ ಕೊಳೆಯುವನು. ||೨೨-೨೩||

ಈ ಗ್ರಂಥದ ಮಾಹಾತ್ಮ್ಯವನ್ನು ಕೇಳಿಯೂ ಈಶ್ವರನನ್ನು ಯಾರು ಅರ್ಚಿಸುವುದಿಲ್ಲವೋ, ಅವರು ಸಾವಿರ ವರ್ಷಗಳವರೆಗೆ ಹಂದಿಗಳಾಗಿ ಕೊಳೆಯುವರು.||೨೪||

ಈ ಗ್ರಂಥದ ಅರ್ಥವನ್ನು ಹೇಳುವವನಮೇಲೆ ಅಸೂಯೆ ಪಡಬಾರದು. ಹಾಗೆ ಅಸೂಯಿಸುವವನು ಅನೇಕ ಕಲ್ಪಗಳವರೆಗೆ ಮಲದಲ್ಲಿ ಕ್ರಿಮಿಯಾಗುವನು. ||೨೫||

ಏತದ್ಗ್ರಂಥಾರ್ಥವಿದ್ಬ್ರಹ್ಮ ಸ ಬ್ರಹ್ಮಾ ಭವತಿ ಸ್ವಯಂ ।
ಕಿಂ ಪುನರ್ಬಹುನೋಕ್ತೇನ ಜ್ಞಾನಮೇತದ್ವಿಮುಕ್ತಿದಂ ॥೨೬॥

ಯಸ್ತ್ವೇತಚ್ಛೃಣುಯಾಚ್ಛಿವೋದಿತಮಹದ್ವೇದಾಂತಾಂಬುಧಿವೀಚಿ
ಜಾತಪುಣ್ಯಂ ನಾಪೇಕ್ಷ್ಯತ್ಯನಿಶಂ ನಚಾಬ್ದಕಲ್ಪೈಃ ಶಬ್ದಾನಾಂ ನಿಖಿಲೋ
ರಸೋಹಿರಾಶಿಃ ಕಿಂ ವಾ ತುಷಾದ್ರಿಪರಿಖಂಡನತೋ ಭವೇತ್
ಸ್ಯಾತ್ತಂಡುಲೋಽಪಿ ಸಮ್ಯಕ್ಷಾ ಭವತಾದ್ರಜಾಲಂ ॥೨೭॥

ತದ್ವತ್ಸರ್ವಮಶಾಸ್ತ್ರಮಿತ್ಯವೈಹಿ ಸತ್ಯಂ
ದ್ವೈತೋತ್ಥಂ ಪರಿಹಾಯ ವಾಕ್ಯಜಾಲಮೇವಂ ।
ತ್ವಂ ತ್ವನಿಶಂ ಭಜಸ್ವ ನಿತ್ಯಂ
ಶಾಂತಾಂಥೋಽಖಿಲವಾಕ್ಸಮೂಹಭಾನಃ ॥೨೮॥

---

ಈ ಗ್ರಂಥದ ಅರ್ಥವನ್ನು ಬಲ್ಲವನೇ ಸಾಕ್ಷಾತ್ ಬ್ರಹ್ಮವಸ್ತುವಾಗಿ ಶೋಭಿಸುವನು. ಹೆಚ್ಚು ಹೇಳುವುದರಿಂದ ಏನು ಪ್ರಯೋಜನ? ಈ ಈಶ್ವರೀಯಜ್ಞಾನದಿಂದ ಮುಕ್ತಿಯು ತಪ್ಪದೇ ಲಭಿಸುವುದು. ॥೨೬॥

ಯಾವನು ವೇದಾಂತಸಾಗರವೆನಿಸಿರುವ ಈ ಗ್ರಂಥವನ್ನು ಭಕ್ತಿಯಿಂದ ಶ್ರವಣಮಾಡುವನೋ ಅವನಿಗೆ ಘನತರವಾದ ಪುಣ್ಯವು ಲಭಿಸುವುದು. ಈ ಮಹಾಗ್ರಂಥವು ಸಮಸ್ತ ವೇದಾಂತಶಬ್ದರಾಶಿಯಂತಿರುವುದು. ಆದುದರಿಂದ ವೇದಾಂತಶಾಸ್ತ್ರವನ್ನು ಅಭ್ಯಾಸಮಾಡುವವನು ಈ ಗ್ರಂಥರತ್ನವನ್ನು ಓದಿಯೇ ತೀರಬೇಕು. ಈ ಗ್ರಂಥವನ್ನು ಕೇಳುವವನು ಬ್ರಹ್ಮಸ್ವರೂಪನಾಗುವನು, ಅಕ್ಕಿಗಾಗಿ ಹೊಟ್ಟಿನ ರಾಶಿಯನ್ನು ಕುಟ್ಟಿದಂತೆ ಮುಕ್ತಿಗಾಗಿ ಇದನ್ನು ಬಿಟ್ಟು ಬೇರೆ ಗ್ರಂಥಗಳನ್ನು ನೋಡುವುದು ಪ್ರಯೋಜನವಿಲ್ಲ. ನಿಜವಾದ ಬ್ರಹ್ಮಜ್ಞಾನವು ಲಭಿಸಬೇಕಾದರೆ ಈ ಗ್ರಂಥವನ್ನು ಓದಬೇಕು. ॥೨೭॥

ಅದುದರಿಂದ ಮಿಕ್ಕೆಲ್ಲವೂ ಅಶಾಸ್ತ್ರವೆಂದು ತಿಳಿದು ಈ ಗ್ರಂಥವನ್ನೇ ಓದಬೇಕು, ಹಾಗೆ ಓದಿದರೆ ಅಜ್ಞಾನನಾಶವಾಗಿ ಮುಕ್ತಿ ದೊರೆವುದು. ॥೨೮॥

ಸತ್ಯತ್ವಾಭವಭವಿತೋಽನುರೂಪಶೀಲಃ ।
ಸಂಪಶ್ಯನ್ ಜಗದಿದಮಾಸಮಂಜಸಂ ಸದಾ ಹಿ ॥೨೯॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಪಂಚಚತ್ವಾರಿಂಶೋಽಧ್ಯಾಯಃ

---

ಈ ಜಗತ್ತು ಅಸತ್ಯವೆಂದು ತಿಳಿದು ಈ ಗ್ರಂಥದಲ್ಲಿ ಹೇಳಿರುವಂತೆ ಆತ್ಮಾನುಸಂಧಾನಮಾಡಿ ಆತ್ಮಾನುಭವವನ್ನು ಪಡೆಯಬೇಕು. ಪ್ರಪಂಚದಲ್ಲಿ ಕಂಡುಬರುವ ಸಕಲ ವಸ್ತುಜಾಲವೂ ನಶ್ವರವಾದದ್ದೆಂದು ಭಾವಿಸಬೇಕು. ॥೨೯॥

ಹೀಗೆಂದು ನಿದಾಘಮಹರ್ಷಿಯು ಋಭುಮಹಾಮುನಿಯಿಂದ ಉಪಲಬ್ಧವಾದ
ಆತ್ಮಜ್ಞಾನಸ್ವರೂಪವನ್ನು ಅನುಸಂಧಾನ ಮಾಡುತ್ತಾ ಜನಸಾಮಾನ್ಯಕ್ಕೂ
ವಿವರಿಸಿ ಹೇಳಿದನು ಎಂಬಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ
ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಷಟ್ಚತ್ವಾರಿಂಶೋಽಧ್ಯಾಯಃ

॥ ನಿದಾಘ ಉವಾಚ ॥

ಏತದ್ಗ್ರಂಥಂ ಸದಾ ಶ್ರುತ್ವಾ ಚಿತ್ತಜಾಡ್ಯಮಕುರ್ವತಃ ।
ಯಾವದ್ದೇಹಂ ಸದಾ ವಿತ್ತೈಶ್ಶುಶ್ರೂಷೇತ್ಪೂಜಯೇದ್ಗುರುಂ ॥೧॥

ತತ್ಪೂಜಯೈವ ಸತತಮಹಂ ಬ್ರಹ್ಮೇತಿ ನಿಶ್ಚಿನು ।
ನಿತ್ಯಂ ಪೂರ್ಣೋಽಸ್ಮಿ ನಿತ್ಯೋಽಸ್ಮಿ ಸರ್ವದಾ ಶಾಂತವಿಗ್ರಹಃ ॥೨॥

ಏತದೇವಾತ್ಮವಿಜ್ಞಾನಮಹಂ ಬ್ರಹ್ಮೇತಿ ನಿರ್ಣಯಃ ।
ನಿರಂಕುಶಸ್ವರೂಪೋಽಸ್ಮಿ ಅತಿವರ್ಣಾಶ್ರಮೀ ಭವ ॥೩॥

---

## ನಲವತ್ತಾರನೆಯ ಅಧ್ಯಾಯವು

ಈ ಗ್ರಂಥವನ್ನುಪದೇಶಿಸುವ ಸದ್ಗುರುವನ್ನು ಶಿಷ್ಯನು ಜೀವಿಸಿರುವ ವರೆಗೆ ಧನಕನಕಾದಿಗಳಿಂದ ಸೇವಿಸಬೇಕು. ಮತ್ತು ಚಿತ್ತಶುದ್ಧಿಯಿಂದ ಈ ಗ್ರಂಥಸಾರವನ್ನು ಕೇಳಬೇಕು. ॥೧॥

ಅಂತಹ ಸದ್ಗುರುವಿನ ಪೂಜೆಯಿಂದಲೇ ಆತ್ಮಜ್ಞಾನವುದಯಿಸುವುದು. ಪೂರ್ಣಸ್ವರೂಪನು ನಾನು, ನಿತ್ಯನೂ ಶಾಂತನೂ ಆಗಿರುವೆನು. ಬ್ರಹ್ಮಸ್ವರೂಪನು ನಾನು, ಸರ್ವತಂತ್ರನಾದ ಈಶ್ವರನು ನಾನು, ನನಗೆ ಯಾವ ವರ್ಣಾಶ್ರಮಗಳೂ ಇಲ್ಲ—ಎಂದು ತಿಳಿಯುವುದೇ ಆತ್ಮಜ್ಞಾನವು. ॥೨-೩॥

ಅಗ್ನಿರಿತ್ಯಾದಿಭಿರ್ಮಂತ್ರೈಸ್ಸರ್ವದಾ ಭಸ್ಮಧಾರಣಂ ।
ಶಿವಪ್ರಸಾದಸಂಪತ್ತಿರ್ಭವಿಷ್ಯತಿ ನ ಸಂಶಯಃ ॥೪॥

ಶಿವಪ್ರಸಾದಾದೇತಸ್ಮೈ ಜ್ಞಾನಂ ಸಂಪ್ರಾಪ್ಯತೇ ಧ್ರುವಂ ।
ಶಿರೋವ್ರತಮಿದಂ ಪ್ರೋಕ್ತಂ ಕೇವಲಂ ಭಸ್ಮಧಾರಣಂ ॥೫॥

ಭಸ್ಮಧಾರಣಮಾತ್ರೇಣ ಜ್ಞಾನಮೇತದ್ಭವಿಷ್ಯತಿ ।
ಅಹಂ ವತ್ಸರಪರ್ಯಂತಂ ಕೃತ್ವಾ ವೈ ಭಸ್ಮಧಾರಣಂ ॥೬॥

ತ್ವತ್ಪಾದಾಬ್ಜಂ ಪ್ರಪನ್ನೋಽಸ್ಮಿ ತ್ವತ್ತೋ ಲಬ್ಧಾತ್ಮನಿರ್ವೃತಿಃ ।
ಸರ್ವಾಧಾರಸ್ವರೂಪೋಽಹಂ ಸಚ್ಚಿದಾನಂದಮಾತ್ರಕಃ ॥೭॥

ಬ್ರಹ್ಮಾತ್ಮಾಹಂ ಸುಲಕ್ಷಣ್ಯೋ ಬ್ರಹ್ಮಲಕ್ಷಣಪೂರ್ವಕಂ ।
ಆನಂದಾನುಭವಂ ಪ್ರಾಪ್ತಃ ಸಚ್ಚಿದಾನಂದವಿಗ್ರಹಃ ॥೮॥

ಗುಣರೂಪಾದ್ವಿಮುಕ್ತೋಽಸ್ಮಿ ಜೀವನ್ಮುಕ್ತೋ ನ ಸಂಶಯಃ ।
ಮೈತ್ರ್ಯಾದಿಗುಣಸಂಪನ್ನೋ ಬ್ರಹ್ಮೈವಾಹಂ ಪರೋಮಹಾನ್ ॥೯॥

---

"ಅಗ್ನಿರಿತಿ ಭಸ್ಮ" ಎಂದು ಮೊದಲಾದ ಮಂತ್ರಗಳಿಂದ ಯಾವಾಗಲೂ ಭಸ್ಮಧಾರಣಮಾಡಿದರೆ ಶಿವನ ಅನುಗ್ರಹವು ಲಭಿಸುವುದು. ॥೪॥

ಶಿವನ ಅನುಗ್ರಹದಿಂದ ಈ ಆತ್ಮಜ್ಞಾನವು ಲಭಿಸುವುದು. ಆದುದರಿಂದ ಈ ಭಸ್ಮಧಾರಣವು ಪ್ರಧಾನವಾದುದು, ಇದೇ ಶಿರೋವ್ರತವು. ಭಸ್ಮಧಾರಣಮಾತ್ರದಿಂದಲೇ ಆತ್ಮಜ್ಞಾನವು ಲಭಿಸುವುದು. ॥೫॥

ನಾನೂ ಸಹ ಈ ಭಸ್ಮಧಾರಣವನ್ನು ಒಂದು ವರ್ಷ ಪೂರ್ತಿಯಾಗಿ ಆಚರಿಸಿ ನಿನ್ನ ಸಾನ್ನಿಧ್ಯವನ್ನು ಪಡೆದು ಈಗ ಆತ್ಮಜ್ಞಾನವನ್ನು ಹೊಂದಿದೆನು.॥೬॥

ಜಗತ್ತಿಗೆ ಆಧಾರನು ನಾನು, ಸಚ್ಚಿದಾನಂದಮೂರ್ತಿಯು ನಾನು, ಬ್ರಹ್ಮನು ನಾನು, ಈಗ ಆತ್ಮಾನಂದವನ್ನನುಭವಿಸುತ್ತಿರುವೆನು. ॥೭-೮॥

ಗುಣರೂಪಗಳು ನನಗಿಲ್ಲ. ಜೀವನ್ಮುಕ್ತನು ನಾನು, ಮೈತ್ರೀದಯಾದಿಗಳು ನನ್ನ ಸ್ವರೂಪಗಳು, ಪರಬ್ರಹ್ಮನೇ ನಾನು. ॥೯॥

ಸಮಾಧಿಮಾನಹಂ ನಿತ್ಯಂ ಜೀವನ್ಮುಕ್ತೇಷು ಸತ್ತಮಃ ।
ಅಹಂ ಬ್ರಹ್ಮಾಸ್ಮಿ ನಿತ್ಯೋಽಸ್ಮಿ ಸಮಾಧಿರಿತಿ ಕಥ್ಯತೇ ॥೧೦॥

ಪ್ರಾರಬ್ಧಪ್ರತಿಬಂಧಶ್ಚ ಜೀವನ್ಮುಕ್ತೇಷು ವಿದ್ಯತೇ ।
ಪ್ರಾರಬ್ಧವಶತೋ ಯದ್ಯತ್ಪ್ರಾಪ್ಯಂ ಭುಂಜೇ ಸುಖಂ ವಶೇ ॥೧೧॥

ದೂಷಣಂ ಭೂಷಣಂ ಚೈವ ಸದಾ ಸರ್ವತ್ರ ಸಂಭವೇತ್ ।
ಸ್ವಸ್ವನಿಶ್ಚಯತೋ ಬುದ್ಧ್ಯಾ ಮುಕ್ತೋಽಹಮಿತಿ ಮನ್ಯತೇ ॥೧೨॥

ಅಹಮೇವ ಪರಂ ಬ್ರಹ್ಮ ಅಹಮೇವ ಪರಾ ಗತಿಃ ।
ಏವಂ ನಿಶ್ಚಯವಾನ್ನಿತ್ಯಂ ಜೀವನ್ಮುಕ್ತೇತಿ ಕಥ್ಯತೇ ॥೧೩॥

ಏತದ್ಭೇದಂ ಚ ಸಂತ್ಯಜ್ಯ ಸ್ವರೂಪೇ ತಿಷ್ಠತಿ ಪ್ರಭುಃ ।
ಇಂದ್ರಿಯಾರ್ಥವಿಹೀನೋಽಹಮಿಂದ್ರಿಯಾದಿವಿವರ್ಜಿತಃ ॥೧೪॥

ಸರ್ವೇಂದ್ರಿಯಗುಣಾತೀತಃ ಸರ್ವೇಂದ್ರಿಯವಿವರ್ಜಿತಃ ।
ಸರ್ವಸ್ಯ ಪ್ರಭುರೇವಾಹಂ ಸರ್ವಮಾಪ್ಯೇವ ತಿಷ್ಠತಿ ॥೧೫॥

---

ನಿತ್ಯವೂ ನಾನು ಸಮಾಧಿಯಲ್ಲಿರುವ ಜೀವನ್ಮುಕ್ತ ಶ್ರೇಷ್ಠನಾಗಿರುವೆನು. ನಾನೇ ನಿತ್ಯನಾದ ಬ್ರಹ್ಮನೆಂಬ—ಅನುಸಂಧಾನವೇ ಸಮಾಧಿಯು. ॥೧೦॥

ಜೀವನ್ಮುಕ್ತನಲ್ಲಿ ಪ್ರಾರಬ್ಧಕರ್ಮವನ್ನು ತಡೆಗಟ್ಟುವ ಶಕ್ತಿ ಇರುವುದು. ಆ ಕರ್ಮದ ವಶದಿಂದ ಯಾವಾವುದು ಬರುವುದೋ ಅದನ್ನೆಲ್ಲಾ ಸುಖರೂಪವಾಗಿ ಅನುಭವಿಸುವೆನು. ॥೧೧॥

ದೋಷವಾಗಲೀ ಅಲಂಕಾರವಾಗಲೀ ಎಲ್ಲೆಡೆಯಲ್ಲೂ ಎಲ್ಲಕ್ಕೂ ಸಂಭವಿಸುವುದು, ಆದರೆ ತನ್ನ ನಿಶ್ಚಯದಿಂದಲೇ ಆತ್ಮಜ್ಞಾನದಿಂದಲೇ ಮಾನವನು ಜೀವನ್ಮುಕ್ತನಾಗಬೇಕು. ॥೧೨॥

ನಾನೇ ಪರಬ್ರಹ್ಮನು ನಾನೇ ಪರಮಗತಿಯು-ಎಂದು ನಿಶ್ಚಯವುಳ್ಳವನೇ ಜೀವನ್ಮುಕ್ತನು. ಭೇದಜ್ಞಾನವುಳ್ಳವನು ಜೀವನ್ಮುಕ್ತನಾಗಲಾರನು. ॥೧೩॥

ಜೀವನ್ಮುಕ್ತನು ಭೇದವೆಲ್ಲವನ್ನೂ ತೊರೆದು-ನನಗೆ ಇಂದ್ರಿಯಗಳಿಲ್ಲ. ಇಂದ್ರಿಯ ವಿಷಯಗಳೂ ಇಲ್ಲ. ನಿರ್ಗುಣನು ನಾನು, ಎಲ್ಲಕ್ಕೂ ಪ್ರಭುವು ನಾನು, ಎಲ್ಲವೂ ನನಗೋಸ್ಕರವಾಗಿಯೇ ಇರುವುವು— ಎಂದು ತಿಳಿಯುವನು. ॥೧೪-೧೫॥

ಅಹಂ ಚಿನ್ಮಾತ್ರ ಏವಾಸ್ಮಿ ಸಚ್ಚಿದಾನಂದವಿಗ್ರಹಃ ।
ಸರ್ವಂ ಭೇದಂ ಸದಾ ತ್ಯಕ್ತ್ವಾ ಬ್ರಹ್ಮಭೇದಮಪಿ ತ್ಯಜೇತ್ ॥೧೬॥

ಅಜಸ್ರಂ ಭಾವಯನ್ನಿತ್ಯಂ ವಿದೇಹೋ ಮುಕ್ತ ಏವ ಸಃ ।
ಅಹಂ ಬ್ರಹ್ಮ ಪರಂ ಬ್ರಹ್ಮ ಅಹಮೇವ ಜಗತ್ಪ್ರಭುಃ ॥೧೭॥

ಅಹಮೇವ ಗುಣಾತೀತಃ ಅಹಮೇವ ಮನೋಮಯಃ ॥೧೮॥

ಅಹಂ ಮಯ್ಯೋ ಮನೋಮೋಯಃ ಪ್ರಾಣಮಯಃ
ಸದಾಮಯಸ್ಸದೃಙ್ಮಯೋಽಮೃತಮಯಸ್ಸಂಭೂತೋಽಮೃತ ಏವಹಿ ।
ಅಹಂ ಸದಾನಂದಘನೋಽವ್ಯಯಃ ಸದಾ
ಸವೇದಮಯ್ಯೋ ಪ್ರಣವೋಹವಿನಾಶಃ ॥೧೯॥

ಅಪಾಣಿಪಾದೋ ಜವನೋ ಗೃಹೀತಾ
ಅಪಶ್ಯಃ ಪಶ್ಯಾಮ್ಯಾತ್ಮವತ್ಸರ್ವಮೇವ ।
ಯತ್ತದ್ಭೂತಂ ಯಚ್ಚ ಭವ್ಯೋಽಹಮಾತ್ಮಾ
ಸರ್ವಾತೀತೋ ವರ್ತಮಾನೋಽಹಮೇವ ॥೨೦॥

---

ನಾನು ಸಚ್ಚಿದಾನಂದಸ್ವರೂಪನು, ಎಲ್ಲ ಭೇದವೂ ನನಗಿಲ್ಲ. ಬ್ರಹ್ಮಭೇದವೂ ಇಲ್ಲ. ಅಂದರೆ ನಾನೇ ಬ್ರಹ್ಮನು-ಎಂದು ಸದಾ ಭಾವಿಸುತ್ತಾ ಜೀವನ್ಮುಕ್ತನು, ವಿದೇಹಮುಕ್ತನಾಗುವನು. ॥೧೬॥

ಬ್ರಹ್ಮವನ್ನು ಯಾವಾಗಲೂ ಆನಂದರೂಪವಾಗಿ ಭಾವಿಸುವವನು ವಿದೇಹ ಮುಕ್ತನೆನಿಸುವನು. ನಾನು ಪರಬ್ರಹ್ಮಸ್ವರೂಪನಾಗಿರುವೆನು. ಸಮಸ್ತ ಜಗತ್ತುಗಳಿಗೂ ನಾನು ಸ್ವಾಮಿಯಾಗಿರುವೆನು. ಮತ್ತು ನಾನು ಗುಣಾತೀತನೂ, ಮನೋಮಯನೂ ಆಗಿರುವೆನು. ॥೧೭-೧೮॥

ನಾನು ಅನ್ನಸ್ವರೂಪನೂ, ಪ್ರಾಣಸ್ವರೂಪನೂ, ಮನಃಸ್ವರೂಪನೂ, ವಿಜ್ಞಾನಸ್ವರೂಪನೂ, ಆನಂದಸ್ವರೂಪನೂ, ಅಮೃತಸ್ವರೂಪನೂ, ಓಂಕಾರ ಸ್ವರೂಪನೂ, ಸಚ್ಚಿದಾನಂದಸ್ವರೂಪನೂ, ವೇದಸ್ವರೂಪನೂ, ಪ್ರಣವಸ್ವರೂಪನೂ, ಮಂತ್ರಸ್ವರೂಪನೂ, ಆಗಿರುವೆನು. "ಅಥಾನ್ನಮಯ ಪ್ರಾಣಮಯ ಮನೋ

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಷಟ್ಚತ್ವಾರಿಂಶೋಽಧ್ಯಾಯಃ

ಮಯ ವಿಜ್ಞಾನಮಯಾನಂದಮಯಾಃ ಪಂಚಕೋಶಾಃ । ಅನ್ನರಸೇನೈವ ಭೂತ್ವಾನ್ನರಸೇನಾಭಿವೃದ್ಧಿಂ ಪ್ರಾಪ್ಯಾನ್ನರಸಮಯಪೃಥಿವ್ಯಾಂ ಯದ್ವಿಲೀಯತೇ ಸೋಽನ್ನಮಯಕೋಶಃ " ಇತ್ಯಾದಿ ಶ್ರುತಿಪ್ರಮಾಣಾನುಸಾರವಾಗಿ ಪರಮೇಶ್ವರನು ಪಂಚಕೋಶಸ್ವರೂಪನಾಗಿರುವನು. ಈ ಶ್ರುತ್ಯಭಿಪ್ರಾಯವನ್ನೇ ಈ ಶ್ಲೋಕವು ಪ್ರತಿಪಾದಿಸುತ್ತಿರುವುದು. ||೧೯||

ನನಗೆ ಕಾಲುಗಳಿಲ್ಲ. ಆದರೂ ಎಲ್ಲೆಡೆಯೂ ವೇಗವಾಗಿ ಸಂಚರಿಸುವೆನು, ಕೈಗಳಿಲ್ಲ. ಆದರೂ ಎಲ್ಲವನ್ನೂ ಹಿಡಿದುಕೊಳ್ಳುವೆನು. ಕಣ್ಣುಗಳಿಲ್ಲ. ಎಲ್ಲವನ್ನೂ ನನ್ನಂತೆ ನೋಡುವೆನು. ಭೂತಭವಿಷ್ಯದ್ವರ್ತಮಾನಗಳು ನಾನೇ, ಆದರೆ ಈ ಭೇದಗಳಾವುವೂ ನನ್ನಲ್ಲಿಲ್ಲ. ಇದೇ ಆತ್ಮಭಾವನೆ. ||೨೦||

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ನಲವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಸಪ್ತಚತ್ವಾರಿಂಶೋಽಧ್ಯಾಯಃ

॥ ಋಭುರುವಾಚ ॥

ನಿದಾಘ ಶೃಣು ವಕ್ಷ್ಯಾಮಿ ದೃಢೀಕರಣಮುತ್ತಮಮ್ ।
ಶಿವಪ್ರಸಾದಪರ್ಯಂತಂ ಏವಂ ಭಾವಯ ನಿತ್ಯಶಃ ॥೧॥

ಅಹಮೇವ ಹಿ ಚೈತನ್ಯಮಹಮೇವ ಹಿ ನಿಷ್ಕಲಃ ।
ಅಹಮೇವ ಹಿ ಶೂನ್ಯಾತ್ಮಾ ಅಹಮೇವ ಹಿ ಶಾಶ್ವತಃ ॥೨॥

ಅಹಮೇವ ಹಿ ಮುಕ್ತಾತ್ಮಾ ಅಹಮೇವ ಹಿ ನಿರ್ಮಲಃ ।
ಅಹಮೇವಾಹಮೇವೋಕ್ತ ಅಹಮೇವ ಹಿ ಶಂಕರಃ ॥೩॥

ಅಹಮೇವ ಪರಂ ಬ್ರಹ್ಮ ಅಹಮೇವ ಸದಾಶಿವಃ ।
ಅಹಮೇವ ಹಿ ಚಿನ್ಮಾತ್ರ ಮಹಮೇವ ಹಿ ನಿರ್ಗುಣಃ ॥೪॥

---

## ನಲವತ್ತೇಳನೆಯ ಅಧ್ಯಾಯವು

ಎಲೈ ನಿದಾಘಮುನಿಯೇ, ದೃಢತೆಗೋಸ್ಕರ ನಿನಗೆ ಪುನಃ ಆತ್ಮಜ್ಞಾನ ಸ್ವರೂಪವನ್ನು ಹೇಳುತ್ತೇನೆ. ನಾನು ಹೇಳುವಂತೆ ಶಿವನ ಅನುಗ್ರಹವು ಲಭಿಸುವ ವರೆಗೂ ಭಾವಿಸು. ॥೧॥

ನಾನೇ ಚೈತನ್ಯವು, ನಾನು ಅವಯವಗಳಿಲ್ಲದವನು, ಶೂನ್ಯಾತ್ಮನು ನಾನು, ನಿತ್ಯನು ನಾನು, ನಾನು ಮುಕ್ತನು, ನಿರ್ಮಲನು. ನಾನು— ಎಂಬುವವನು ನಾನೇ, ನಾನೇ ಶಂಕರನು, ನನ್ನ ಹೊರತು ಬೇರೆ ಯಾರೂ ಇಲ್ಲ. ॥೨-೩॥

ನಾನೇ ಪರಬ್ರಹ್ಮನು, ನಾನೇ ಸದಾಶಿವನು, ನಾನೇ ವಿಷ್ಣುವು, ನಾನು

ಅಹಮೇವ ಮಹಾವಿಷ್ಣುರಹಮೇವ ಚತುರ್ಮುಖಃ ।
ಅಹಮೇವ ಹಿ ಶುದ್ಧಾತ್ಮಾ ಅಹಮೇವ ಹ್ಯಹಂ ಸದಾ ॥೫॥

ಅಹಮೇವ ಹಿ ನಿತ್ಯಾತ್ಮಾ ಅಹಮೇವ ಹಿ ತತ್ಪರಃ ।
ಅಹಮೇವ ಮನೋರೂಪಮಹಮೇವ ಹಿ ಶೀತಲಃ ॥೬॥

ಅಹಮೇವಾಂತರ್ಯಾಮೀ ಚ ಅಹಮೇವ ಪರೇಶ್ವರಃ ।
ಏವಮುಕ್ತಪ್ರಕಾರೇಣ ಭಾವಯಿತ್ವಾ ಸದಾ ಸ್ವಯಂ ॥೭॥

ದ್ರವ್ಯೋಽಸ್ತಿ ಚೇನ್ನ ಕುರ್ಯಾತ್ತು ವಂಚಕೇನ ಗುರುಂ ಪರಂ ।
ಕುಂಭೀಪಾಕೇ ತು ಘೋರೇ ತು ತಿಷ್ಠತ್ಯೇವ ಹಿ ಕಲ್ಪಕಾನ್ ॥೮॥

ಶ್ರುತ್ವಾ ನಿದಾಘಶ್ಚೋತ್ಥಾಯ ಪುತ್ರದಾರಾನ್ ಪ್ರದತ್ತವಾನ್ ।
ಸ್ವಶರೀರಂ ಚ ಪುತ್ರತ್ವೇ ದತ್ವಾ ಸಾದರಪೂರ್ವಕಂ ॥೯॥

ಧನಧಾನ್ಯಂ ಚ ವಸ್ತ್ರಾದೀನ್ ದತ್ವಾಽತಿಷ್ಠತ್ಸಮೀಪತಃ ।
ಗುರೋಸ್ತು ದಕ್ಷಿಣಾಂ ದತ್ವಾ ನಿದಾಘಸ್ತುಷ್ಟವಾನ್ ಋಭುಂ ॥೧೦॥

---

ಬ್ರಹ್ಮದೇವನು, ನಾನೇ ಚೈತನ್ಯವು, ನಿರ್ಗುಣಸ್ವರೂಪನು ನಾನು, ಶುದ್ಧಾತ್ಮನು ನಾನು, ನಾನು ನಾನೇ, ನನ್ನ ಹೊರತು ಬೇರೆ ಯಾರೂ ಇಲ್ಲ. ||೪-೫||

ನಾನೇ ನಿತ್ಯಾತ್ಮನು, ನಾನೇ ಪರಮಾತ್ಮನು, ಮನೋಮಯನು ನಾನು, ಶಾಂತನು ನಾನು, ಅಂತರ್ಯಾಮಿಯು ನಾನು, ಪರಮೇಶ್ವರನು ನಾನು. ||೬||

ಹೀಗೆ ಹೇಳಿದಂತೆ ನಿತ್ಯವೂ ಭಾವಿಸುತ್ತಾ ಈ ಉಪದೇಶವನ್ನು ಮಾಡಿದ ಸದ್ಗುರುವಿಗೆ ಯಥಾಶಕ್ತಿ ಗುರುದಕ್ಷಿಣೆಯನ್ನು ಕೊಡಬೇಕು, ಕೊಡಲು ಶಕ್ತಿಯಿದ್ದೂ ಕೊಡದ ಶಿಷ್ಯಾಧಮನು ಕುಂಭೀಪಾಕದಲ್ಲಿ ಕೊಳೆಯುವನು." ||೭-೮||

ಗುರುವಾದ ಶ್ರೀಋಭುವಿನ ಆ ಮಾತನ್ನು ಕೇಳಿ ನಿದಾಘನು ಮೇಲಕ್ಕೆದ್ದು ನಮಸ್ಕರಿಸಿ ಆ ಸದ್ಗುರುವಿಗೆ ತನ್ನನ್ನೇ ಪುತ್ರನನ್ನಾಗಿ ಸಮರ್ಪಿಸಿಕೊಟ್ಟು ಧನಧಾನ್ಯ ವಸ್ತ್ರಾದಿಗಳನ್ನು ಯಥೇಚ್ಛವಾಗಿ ಗುರುದಕ್ಷಿಣೆಯಾಗಿ ಕೊಟ್ಟನು. ||೯-೧೦||

ಸಂತುಷ್ಟೋಽಸ್ಮಿ ಮಹಾಭಾಗ ತವ ಶುಶ್ರೂಷಯಾ ಸದಾ ।
ಬ್ರಹ್ಮವಿಜ್ಞಾನಮಾಪ್ನೋಷಿ ಸುಕೃತಾರ್ಥೋಽ ನ ಸಂಶಯಃ ॥೧೧॥

ಬ್ರಹ್ಮರೂಪಮಹಂ ಚೇತಿ ನಿಶ್ಚಯಂ ಕುರು ಸರ್ವದಾ ।
ನಿಶ್ಚಯಾದಪರೋ ಮೋಕ್ಷಃ ನಾಸ್ತಿ ನಾಸ್ತೀತಿ ನಿಶ್ಚಿನು ॥೧೨॥

ನಿಶ್ಚಯಂ ಕಾರಣಂ ಮೋಕ್ಷೋ ನಾನ್ಯತ್ಕಾರಣಮಸ್ತಿವೈ ॥೧೩॥

ಸಕಲಭುವನಸಾರಂ ಸರ್ವವೇದಾಂತಸಾರಂ
ಸಮರಸಗುಣಸಾರಂ ಸರ್ವವೇದಾರ್ಥಸಾರಂ ।
ಸಕಲಭುವನಸಾರಂ ಸಚ್ಚಿದಾನಂದಸಾರಂ
ಸಮರಸಜಯಸಾರಂ ಸರ್ವದಾ ಮೋಕ್ಷಸಾರಂ ॥೧೪॥

ಸಕಲ ಜನನಮೋಕ್ಷಂ ಸರ್ವದಾ ತುರ್ಯಮೋಕ್ಷಂ
ಸಕಲಸುಲಭಮೋಕ್ಷಂ ಸರ್ವಸಾಮ್ರಾಜ್ಯಮೋಕ್ಷಂ ।
ವಿಷಯರಹಿತಮೋಕ್ಷಂ ವಿಶ್ವಸಂತೋಷಮೋಕ್ಷಂ
ಶ್ರವಣಮನನಮಾತ್ರಾದೇತದತ್ಯಂತಮೋಕ್ಷಂ ॥೧೫॥

---

(ಆಗ ಋಭುವು ಹೀಗೆ ಹೇಳಿದನು)—"ಎಲೈ ಭಾಗ್ಯಶಾಲಿಯಾದ ನಿದಾಘ ಮುನಿಯೇ ನಿನ್ನ ಶುಶ್ರೂಷೆಯಿಂದ ನಾನು ಸಂತುಷ್ಟನಾದೆನು, ನೀನು ಬ್ರಹ್ಮಜ್ಞಾನ ವನ್ನು ಹೊಂದಿ ಕೃತಾರ್ಥನಾಗುವೆ. "ನಾನೇ ಬ್ರಹ್ಮ"ನೆಂದು ಸದಾ ದೃಢವಾಗಿ ಅನುಸಂಧಾನಮಾಡು, ಈ ಭಾವನೆಯೇ ಮುಕ್ತಿಯು, ಬೇರೆಯಲ್ಲ. ॥೧೧-೧೨॥

ನಾನೇ ಬ್ರಹ್ಮನೆಂಬ ನಿಶ್ಚಯವೇ ಸ್ಥಿರಮುಕ್ತಿಗೆ ಕಾರಣವು, ಅದಕ್ಕೆ ಬೇರೆ ಕಾರಣವೇ ಇಲ್ಲ. ॥೧೩॥

ನಾನೇ ಬ್ರಹ್ಮನೆಂಬ ಅನುಭವವೇ ಎಲ್ಲ ಲೋಕಗಳ ಸಾರವು, ಎಲ್ಲವೇದಾಂತ ಗಳ ಸಾರವು, ಸಾಮರಸ್ಯದ ಸಾರವು, ವೇದಗಳ ಸಾರವೂ ಇದೇ, ಸತ್ಯಜ್ಞಾನ ಆನಂದಗಳ ಸಾರವೂ ಅದೇ, ಮುಕ್ತಿಯ ಸಾರವೂ ಇದೇ. ಅದೇ ಮುಕ್ತಿ ॥೧೪॥

ನಾನೇ ಬ್ರಹ್ಮನೆಂಬ ಅನುಭವವು ಜನನಮರಣಗಳ ಮೋಕ್ಷವಾಗಿದೆ, ಅದೇ ಕೊನೆಯ ಮುಕ್ತಿಯು, ಎಲ್ಲರೂ ಸುಲಭವಾಗಿ ಪಡೆಯಬಹುದಾದ ಮುಕ್ತಿಯು, ಎಲ್ಲರೂ ಪ್ರಯತ್ನದಿಂದ ಪಡೆಯಬೇಕಾದ ಮುಕ್ತಿಯು, ಆದರಾರೂ ಪ್ರಯತ್ನಿಸು

|| ಸೂತ ಉವಾಚ ||

ತಚ್ಛುಶ್ರೂಷಾಚ್ಚ ಭವತಃ ತಚ್ಛ್ರುತ್ವಾ ತತ್ಪ್ರಪೇದಿರೇ
ಏವಂ ಸರ್ವವಚಃ ಶ್ರುತ್ವಾ ನಿದಾಘೋಃ ಋಭುದರ್ಶಿತಂ
ಶುಕಾದಯೋಃ ಮಹಾಂತಸ್ತೇ ಪರಂಬ್ರಹ್ಮಮವಾಪ್ನುವನ್ ||೧೬||

ಶ್ರುತ್ವಾ ಶಿವಜ್ಞಾನಮಿದಂ ಋಭುಸ್ತದಾ
ನಿದಾಘಮಾಹೇತ್ಥಂಮುನೀಂದ್ರಮಧ್ಯೇ ।
ಮುದಾಹಿತೋಽಪಿ ಶ್ರುತಿಸಿದ್ಧಸಾರಂ
ಶ್ರುತ್ವಾ ಪ್ರಣಮ್ಯಾಹುರತೀವ ಹರ್ಷಾತ್ ||೧೭||

|| ಮುನಯ ಊಚುಃ ||

ಪಿತಾ ಮಾತಾ ಭ್ರಾತಾ ಗುರುರಸಿ ವಯಸ್ಯೋಽಥ ಹಿತಕೃತ್
ಅವಿದ್ಯಾಬ್ಧೇಃ ಪಾರಂ ಗಮಯಸಿ ಭವಾನೇವ ಶರಣಂ ।
ಪ್ಲವೇನಾಸ್ಮಾನ್ ತ್ವಂವೈ ಶಿವವಚನಬಲೇನೈವಸುಗಮಂ
ಪಥಂ ಪ್ರಾಪ್ತ್ಯೈಪಾಥೇಃ ಶಿವವಚನತೋಽಸ್ಮಾನ್ ಸುಖಯಸಿ ||೧೮||

---

ವುದಿಲ್ಲ, ಎಲ್ಲ ಸಾಮ್ರಾಜ್ಯಮುಕ್ತಿಯು ಇದು, ವಿಷಯಸುಖಗಳ ಮೋಕ್ಷವಿದು, ವಿಶ್ವಸಂತೋಷಮೋಕ್ಷವಿದು, ಬರಿಯ ಶ್ರವಣಮನನಗಳಿಂದಲೇ ಈ ಮುಕ್ತಿಯು ಲಭಿಸುವುದು.” ||೧೫||

ನಿದಾಘ ಮತ್ತು ಋಭುಗಳ ಈ ಸಂಭಾಷಣ ಸಾರವನ್ನು ಕೇಳಿ ಹಿಂದೆ ಶುಕ ಮೊದಲಾದ ಮಹಾಮುನಿಗಳೂ ಪರಬ್ರಹ್ಮಸ್ವರೂಪವನ್ನು ಪಡೆದರು. ||೧೬||

ಋಭುವು ನಿದಾಘನಿಗೆ ಹೇಳಿದ ಈ ಈಶ್ವರೀಯಜ್ಞಾನವನ್ನು ಕೇಳಿ ಅಲ್ಲಿ ನೆರೆದಿದ್ದ ಮುನಿಗಳು ಹರ್ಷಗೊಂಡು ಋಭುವಿಗೆ ನಮಸ್ಕರಿಸಿ ವಿನಯದಿಂದ ಹೀಗೆ ಹೇಳಿದರು. ||೧೭||

ಋಭುಮುನಿಯೇ, ನೀನೇ ನಮಗೆ ತಂದೆಯೂ, ತಾಯಿಯೂ, ಸಹೋದರನೂ, ಗುರುವೂ, ಸ್ನೇಹಿತನೂ, ಹಿತಕಾರಿಯೂ ಆಗಿರುವೆ. ಈಶ್ವರೀಯಜ್ಞಾನವನ್ನು

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ಸಪ್ತಚತ್ವಾರಿಂಶೋಽಧ್ಯಾಯಃ

---

ಉಪದೇಶಿಸಿ ನಮ್ಮನ್ನು ಜ್ಞಾನವೆಂಬ ತೆಪ್ಪದಿಂದ ಅಜ್ಞಾನವೆಂಬ ಈ ಭವಸಾಗರವನ್ನು ದಾಟಿಸಿರುವೆ. ಅಲ್ಲದೆ ನೀನು ಹೇಳಿದ ಶಿವವಚನಗಳೆಂಬ ಸೂಕ್ತಿಮಾಲೆಯು ನಮ್ಮ ಅಂತರಂಗಗತವಾದ ಸಕಲ ದುಃಖಮೂಲವನ್ನೇ ನಿರ್ಮೂಲಗೊಳಿಸಿದೆ. ಇಂದಿಗೆ ನಾವು ಧನ್ಯರಾದೆವು. ನಾವೇ ಕೃತಾರ್ಥರು. ಹೀಗೆ ಹೇಳುತ್ತಾ ಸಕಲ ಮುನಿಗಳೂ ಆನಂದಭರಿತರಾದರು. ಇದರಿಂದ ಶ್ರೀಪರಮೇಶ್ವರನು ಸಕಲ ಜಗತ್ತುಗಳಿಗೂ ಮಾತಾಪಿತೃಸ್ವರೂಪನಾಗಿರುವನೆಂದು ಸ್ಪಷ್ಟವಾಗುವುದು. ||೧೮||

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ನಲವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಅಷ್ಟಚತ್ವಾರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಜ್ಞಾನಾಂಗಸಾಧನಂ ವಕ್ಷ್ಯೇ ಶೃಣು ವಕ್ಷ್ಯಾಮಿ ತೇ ಹಿತಂ ।
ಯತ್ಕೃತ್ವಾ ಜ್ಞಾನಮಾಪ್ನೋತಿ ಪ್ರಸಾದಾತ್ಪರಮೇಷ್ಠಿನಃ ॥೧॥

ಜೈಗೀಷವ್ಯ ಶೃಣುಷ್ವೈತತ್ಸಾವಧಾನೇನ ಚೇತಸಾ ।
ಪ್ರಥಮಂ ವೇದಸಂಪ್ರೋಕ್ತಂ ಕರ್ಮಾಚರಣಮಿಷ್ಯತೇ ॥೨॥

ಉಪನೀತೋ ದ್ವಿಜೋ ವಾಪಿ ವೈಶ್ಯಃ ಕ್ಷತ್ರಿಯ ಏವ ಚ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮಧೃಕ್ಪೂಯತೇ ತ್ವಘೈಃ ॥೩॥

---

## ನಲವತ್ತೆಂಟನೆಯ ಅಧ್ಯಾಯವು

ಎಲೈ ಜೈಗೀಷವ್ಯನೇ ಕೇಳು, ಈಗ ಜ್ಞಾನಸಾಧನವನ್ನು ಹೇಳುವೆನು. ಇದನ್ನು ತಿಳಿದು ಆಚರಿಸಿದರೆ ಶಿವನ ಅನುಗ್ರಹವು ಲಭಿಸಿ ಈಶ್ವರೀಯಜ್ಞಾನವು ಉದಯಿಸುವುದು. ॥೧॥

ಮೊದಲು ವೇದದಲ್ಲಿ ಹೇಳಿರುವ ಕರ್ಮಗಳನ್ನೆಲ್ಲಾ ವರ್ಣಾಶ್ರಮಗಳಿಗೆ ತಕ್ಕಂತೆಯೇ ಆಚರಿಸಬೇಕು. ಆ ಕರ್ಮಗಳೂ ಚಿತ್ತಶುದ್ಧಿಯ ಮೂಲಕ ಜ್ಞಾನಕ್ಕೆ ಸಾಧನವಾಗುವುವು. ಅಲ್ಲದೇ "ಅಗ್ನಿರಿತಿಭಸ್ಮ" ಇತ್ಯಾದಿ ಮಂತ್ರಗಳಿಂದ ಭಸ್ಮ ಧಾರಣ ಮಾಡಬೇಕು. ಅದರಿಂದ ಎಲ್ಲ ಪಾಪಗಳೂ ನಾಶವಾಗುವುವು. ॥೨-೩॥

ತ್ರಿಯಾಯುಷೈಸ್ತ್ರ್ಯಂಬಕೈಶ್ಚ ತ್ರಿಪುಂಡ್ರಂ ಭಸ್ಮನಾಽಽಚರೇತ್ ।
ಲಿಂಗಾರ್ಚನಪರೋ ನಿತ್ಯಂ ರುದ್ರಾಕ್ಷಾನ್ ಧಾರಯನ್ ಕ್ರಮಾತ್ ॥೪॥

ಕಂಠೇ ಬಾಹ್ವೋರ್ವಕ್ಷಸಿ ಚ ಮಾಲಾಭಿಶ್ಶಿರಸಸ್ತಥಾ ।
ತ್ರಿಪುಂಡ್ರವದ್ಧಾರಯೇತ ರುದ್ರಾಕ್ಷಾನ್ ಕ್ರಮಶೋಮುನೇ ॥೫॥

ಏಕಾನನಂ ದ್ವಿವಕ್ತ್ರಂ ವಾ ತ್ರಿವಕ್ತ್ರಂ ಚತುರಾಸ್ಯಕಂ ।
ಪಂಚವಕ್ತ್ರಂ ಚ ಷಟ್ಸಪ್ತ ತಥಾಷ್ಟಾದಶಕಂ ನವ ॥೬॥

ಏಕಾದಶಂ ದ್ವಾದಶಂ ವಾ ತಥೋರ್ಧ್ವಂ ಧಾರಯೇತ್ಕ್ರಮಾತ್ ।
ಭಸ್ಮಧಾರಣಮಾತ್ರೇಣ ಪ್ರಸೀದತಿ ಮಹೇಶ್ವರಃ ॥೭॥

ರುದ್ರಾಕ್ಷಧಾರಣಾದೇವ ನರೋ ರುದ್ರತ್ವಮಾಪ್ನುಯಾತ್ ।
ಭಸ್ಮರುದ್ರಾಕ್ಷಧೃಕ್ ಮರ್ತ್ಯೋ ಜ್ಞಾನಾಂಗೀ ಭವತಿ ಪ್ರಿಯಃ ॥೮॥

ರುದ್ರಾಧ್ಯಾಯೀ ಭಸ್ಮನಿಷ್ಠಃ ಪಂಚಾಕ್ಷರಜಪಾದರಃ ।
ಭಸ್ಮೋದ್ಧೂಳಿತದೇಹೋಽಯಂ ಶ್ರೀರುದ್ರಂ ಪ್ರಜಪನ್ ದ್ವಿಜಃ ॥೯॥

---

ತ್ರಿಯಾಯುಷತ್ರ್ಯಂಬಕಮಂತ್ರಗಳಿಂದ ಭಸ್ಮತ್ರಿಪುಂಡ್ರವನ್ನು ಹಚ್ಚಿಕೊಳ್ಳಬೇಕು. ಭಸ್ಮರುದ್ರಾಕ್ಷಿಗಳೆರಡನ್ನೂ ಮೂರು ಪಟ್ಟಿ ಮತ್ತು ಮಾಲೆಗಳ ರೂಪದಿಂದ ಕೊರಳು ತೋಳು ಎದೆ ತಲೆಗಳಲ್ಲಿ ಕ್ರಮವಾಗಿ ಧರಿಸಬೇಕು. ॥೪-೫॥

ಒಂದು, ಎರಡು, ಮೂರು, ನಾಲ್ಕು, ಐದು—ಮುಖಗಳುಳ್ಳ ರುದ್ರಾಕ್ಷಿಗಳನ್ನು ಆರು ಸಂಖ್ಯೆಯಿಂದ ಹಿಡಿದು ಎಷ್ಟು ಬೇಕಾದರೂ ಧರಿಸಬಹುದು. ॥೬॥

ಭಸ್ಮಧಾರಣಮಾತ್ರದಿಂದಲೇ ಮಹೇಶ್ವರನು ಪ್ರಸನ್ನನಾಗುವನು. ರುದ್ರಾಕ್ಷಧಾರಣಮಾಡಿದವನು ರುದ್ರನೇ ಆಗುವನು. ಭಸ್ಮರುದ್ರಾಕ್ಷಗಳೆರಡನ್ನೂ ಧರಿಸಿದವನು ಜ್ಞಾನಕ್ಕೆ ಯೋಗ್ಯನಾಗುವನು. ॥೭-೮॥

ರುದ್ರಸೂಕ್ತವನ್ನು ಪಠಿಸುವ, ಭಸ್ಮರುದ್ರಾಕ್ಷಧಾರಿಯಾದ, ಶಿವಪಂಚಾಕ್ಷರ ಮಂತ್ರವನ್ನು ಜಪಿಸುವ, ಮಾನವನು ಸಕಲ ಪಾಪಗಳಿಂದ ಬಿಡಲ್ಪಟ್ಟು ಆತ್ಮಜ್ಞಾನಕ್ಕೆ ಪಾತ್ರನಾಗುವನು. ॥೯॥

ಸರ್ವಪಾಪೈರ್ವಿನಿರ್ಮುಕ್ತಶ್ಚ ಜ್ಞಾನನಿಷ್ಠೋ ಭವೇನ್ಮುನೇ ।
ಭಸ್ಮಸಂಛನ್ನಸರ್ವಾಂಗಃ ಭಸ್ಮಫಾಲತ್ರಿಪುಂಡ್ರಕಃ ॥೧೦॥

ವೇದಮೌಳಿಜವಾಕ್ಯೇಷು ವಿಚಾರಾಧಿಕೃತೋ ಭವೇತ್ ।
ನಾನ್ಯಪುಂಡ್ರಧರೋ ವಿಪ್ರೋ ಯತಿರ್ವಾ ವಿಪ್ರಸತ್ತಮ ॥೧೧॥

ಶಮಾದಿನಿಯಮೋಪೇತೋಽಕ್ಷಮಾಯುಕ್ತೋಽಪ್ಯಸಂಸ್ಕೃತಃ ।
ಶಿರೋವ್ರತಮಿದಂ ಪ್ರೋಕ್ತಂ ಭಸ್ಮಧಾರಣಮೇವ ಹಿ ॥೧೨॥

ಶಿರೋವ್ರತಂ ಚ ವಿಧಿವದ್ಯೈಶ್ಚೀರ್ಣಂ ಮುನಿಸತ್ತಮ
ತೇಷಾಮೇವ ಬ್ರಹ್ಮವಿದ್ಯಾಂ ವದೇತ ಗುರುರಾಸ್ತಿಕಃ ॥೧೩॥

ಶಾಂಭವಾ ಏವ ವೇದೇಷು ನಿಷ್ಠಾ ನಷ್ಟಾಶುಭಾಃ ಪರಂ ।
ಶಿವಪ್ರಸಾದಸಂಪನ್ನೋ ಭಸ್ಮರುದ್ರಾಕ್ಷಧಾರಕಃ ॥೧೪॥

ರುದ್ರಾಧ್ಯಾಯಜಪಾಸಕ್ತೋ ಪಂಚಾಕ್ಷರಜಪಾದರಃ ।
ಸಏವ ವೇದವೇದಾಂತಶ್ರವಣಾಧಿಕೃತೋ ಭವೇತ್ ॥೧೫॥

---

ಭಸ್ಮತ್ರಿಪುಂಡ್ರಧಾರಿಯಾದ ಮಾನವನೇ ವೇದಾಂತವಾಕ್ಯಗಳ ವಿಚಾರಕ್ಕೆ ಅಧಿಕಾರಿಯು. ॥೧೦॥

ಬೇರೆ ಯಾವ ನಾಮವನ್ನಾಗಲೀ ಮುದ್ರೆ ಮೊದಲಾದುದನ್ನಾಗಲೀ ಧರಿಸಿದವನು ಶಮದಮಕ್ಷಮಾದಿಗಳಿಂದ ಕೂಡಿದ್ದರೂ ಪರಿಶುದ್ಧನಾಗಲಾರನು. ಅವನು ಜ್ಞಾನಕ್ಕೆ ಅಧಿಕಾರಿಯಾಗಲಾರನು, ಅವನು ಅಸಂಸ್ಕೃತನು, ಈ ಭಸ್ಮಧಾರಣವೇ ಶಿರೋವ್ರತವು. ॥೧೧-೧೨॥

ಈ ಶಿರೋವ್ರತವನ್ನು ವಿಧಿವತ್ತಾಗಿ ಆಚರಿಸುವ ಶಿವಭಕ್ತರಿಗೇ ಅಸ್ತಿಕನಾದ ಗುರುವು ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು. ॥೧೩॥

ಭಸ್ಮರುದ್ರಾಕ್ಷಧಾರಿಯಾಗಿ ರುದ್ರಸೂಕ್ತಶಿವಪಂಚಾಕ್ಷರಮಂತ್ರಗಳನ್ನು ಜಪಿಸಿ ಶಿವನ ಅನುಗ್ರಹಕ್ಕೆ ಪಾತ್ರನಾದವನೇ ವೇದವೇದಾಂತಶ್ರವಣಕ್ಕೆ ಅಧಿಕಾರಿಯು. ಮಿಕ್ಕವರಿಗೆ ಶ್ರವಣಕ್ಕೂ ಅಧಿಕಾರವಿಲ್ಲ. ॥೧೪-೧೫॥

ನಾನ್ಯಪುಂಡ್ರಧರೋ ವಾಪಿ ಕೃತ್ವಾಪಿ ಶ್ರವಣಂ ಬಹು ।
ನೈವ ಲಭ್ಯೇತ ತಜ್ಜ್ಞಾನಂ ಪ್ರಸಾದೇನ ವಿನೇಶಿತುಃ ॥೧೬॥

ಪ್ರಸಾದಜನಕಂ ಶಂಭೋಃ ಭಸ್ಮಧಾರಣಮೇವ ಹಿ ।
ಶಿವಪ್ರಸಾದಹೀನಾನಾಂ ಜ್ಞಾನಂ ನೈವೋಪಲಭ್ಯತೇ ॥೧೭॥

ಪ್ರಸಾದೇ ಸತಿ ದೇವಸ್ಯ ವಿಜ್ಞಾನಂ ಸ್ಫುರಣಂ ಭವೇತ್ ।
ರುದ್ರಾಕ್ಷಧಾರಿಣಾಮೇವ ಪ್ರಸಾದಃ ಶಾಂಭವೋ ಭವೇತ್ ॥೧೮॥

ಪ್ರಸಾದೇ ಸತಿ ದೇವಸ್ಯ ವಿಜ್ಞಾನಸ್ಫುರಣಂ ಭವೇತ್ ।
ರುದ್ರಾಧ್ಯಾಯಜಪಾನಾಂ ಚ ಭಸ್ಮಧಾರಣಪೂರ್ವಕಂ ॥೧೯॥

ಪ್ರಸಾದೋ ಜಾಯತೇ ಶಂಭೋಃ ಪುನರಾವೃತ್ತಿವರ್ಜಿತಃ ।
ಪ್ರಸಾದೇ ಸತಿ ದೇವಸ್ಯ ವೇದಾಂತಸ್ಫುರಣಂ ಭವೇತ್ ॥೨೦॥

ತಸ್ಯೈವ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ।
ಪಂಚಾಕ್ಷರಜಪಾದೇವ ಪಂಚಾಸ್ಯಧ್ಯಾನಪೂರ್ವಕಂ ॥೨೧॥

ತಸ್ಯೈವ ಭವತಿ ಜ್ಞಾನಂ ಶಿವಪ್ರೋಕ್ತಮಿದಂಧ್ರುವಂ ।
ಸರ್ವಂ ಶಿವಾತ್ಮಕಂ ಭಾತಿ ಜಗದೇತಚ್ಚರಾಚರಂ ॥೨೨॥

---

ಬೇರೆಯ ಮುದ್ರೆನಾಮಾದಿಗಳನ್ನು ಧರಿಸಿ ಅನೇಕಬಾರಿ ಶ್ರವಣವನ್ನು ಮಾಡಿದರೂ ಶಿವನ ಅನುಗ್ರಹವಿಲ್ಲದೇ ಈ ಜ್ಞಾನವು ಉಂಟಾಗಲಾರದು. ॥೧೬॥

ಶಿವನ ಅನುಗ್ರಹವನ್ನು ಸಂಪಾದಿಸಲು ಭಸ್ಮಧಾರಣವೇ ಮುಖ್ಯ ಉಪಾಯವು, ಶಿವನ ಅನುಗ್ರಹವಿಲ್ಲದವರಿಗೆ ಜ್ಞಾನವು ಲಭಿಸುವುದೇ ಇಲ್ಲ. ॥೧೭॥

ರುದ್ರಾಕ್ಷಿಧಾರಿಗಳಿಗೇ ಶಿವನ ಅನುಗ್ರಹವು ಲಭಿಸುವುದು. ಶಿವಾನುಗ್ರಹವು ಉಂಟಾದರೆ ಈಶ್ವರೀಯಜ್ಞಾನವು ಸ್ಫುರಿಸುವುದು. ॥೧೮॥

ರುದ್ರಸೂಕ್ತವನ್ನು ಜಪಿಸುವ ಭಸ್ಮಧಾರಿಗಳಾದ ಸಜ್ಜನರಿಗೆ ಮಾತ್ರವೇ ಶಿವನ ಅನುಗ್ರಹವು ಲಭಿಸುವುದು. ಶಿವನ ಅನುಗ್ರಹವಾದರೆ ವೇದಾಂತವು ಸ್ಫುರಿಸುವುದು, ಕೇಳಿದ ಅರ್ಥಗಳೆಲ್ಲವೂ ತಿಳಿಯುವುವು. ॥೧೯-೨೦॥

ಪಂಚಾಕ್ಷರಮಂತ್ರಜಪಪೂರ್ವಕವಾಗಿ ಶಿವನನ್ನು ಧ್ಯಾನಿಸುವವನಿಗೇ ಈ

ಸ ಪ್ರಸಾದೋ ಮಹೇಶಸ್ಯ ವಿಜ್ಞೇಯಶ್ಶಾಂಭವೋತ್ತಮೈಃ ।
ಶಿವಲಿಂಗಾರ್ಚನಾದೇವ ಪ್ರಸಾದಃ ಶಾಂಭವೋತ್ತಮೈಃ ॥೨೩॥

ನಿಯಮಾದ್ಬಿಲ್ವಪತ್ರೈಶ್ಚ ಭಸ್ಮಧಾರಣಪೂರ್ವಕಂ ।
ಪ್ರಸಾದೋ ಜಾಯತೇ ಶಂಭೋಃ ಸಾಕ್ಷಾತ್ ಜ್ಞಾನಪ್ರಕಾಶಕಃ ॥೨೪॥

ಶಿವಕ್ಷೇತ್ರನಿವಾಸೇನ ಜ್ಞಾನಂ ಸಮ್ಯಗ್ದೃಢಂ ಭವೇತ್ ।
ಶಿವಕ್ಷೇತ್ರನಿವಾಸೀ ಚ ಭಸ್ಮಧಾರ್ಯಧಿಕಾರವಾನ್ ॥೨೫॥

ನಕ್ತಾಶನಾರ್ಚನಾದೇವ ಪ್ರೀಯತೇ ಭಗವಾನ್ ಭವಃ ।
ಪ್ರದೋಷಪೂಜನಂ ಶಂಭೋಃ ಪ್ರಸಾದಜನಕಂ ಪರಂ ॥೨೬॥

ಅಷ್ಟಮ್ಯಾಂ ಪೂಜನಂ ಶಂಭೋಃ ಪ್ರಸಾದಜನಕಂ ಪರಂ ।
ಸೋಮವಾರೇ ನಿಶೀಥೇಷು ಪೂಜನಂ ಪ್ರಿಯಮೀಶಿತುಃ ॥೨೭॥

ಭೂತಾಯಾಂ ಭೂತನಾಥಸ್ಯ ಪೂಜನಂ ಪರಮಪ್ರಿಯಂ ।
ಶಿವಶಬ್ದೋಚ್ಚಾರಣಂ ಚ ಪ್ರಸಾದಜನಕಂ ಮಹತ್ ॥೨೮॥

---

ಜ್ಞಾನವು ಲಭಿಸುವುದು, "ಜಗತ್ತೆಲ್ಲವೂ ಶಿವಸ್ವರೂಪವಾದುದು" ಎಂದು ತಿಳಿಯುವುದು. ಇದು ಶಿವನ ಮಾತು, ಇದು ಸತ್ಯವು. ॥೨೧-೨೨॥

ಶಿವಲಿಂಗವನ್ನು ಭಕ್ತಿಯಿಂದ ಅರ್ಚಿಸಿದ ಶಿವಭಕ್ತರಿಗೆ ಶಿವನ ಅನುಗ್ರಹವು ಸಂಪೂರ್ಣವಾಗಿ ಲಭಿಸುವುದು. ॥೨೩॥

ವಿಧಿವತ್ತಾಗಿ ಭಸ್ಮಧಾರಣಮಾಡಿ ಬಿಲ್ವಪತ್ರಗಳಿಂದ ಶಿವನನ್ನರ್ಚಿಸಿದರೆ ಶಿವನ ಅನುಗ್ರಹವು ಲಭಿಸುವುದು. ॥೨೪॥

ಭಸ್ಮಧಾರಣಮಾಡುತ್ತಾ ಶಿವಕ್ಷೇತ್ರದಲ್ಲಿ ವಾಸಮಾಡುವವನು ಆತ್ಮಜ್ಞಾನಕ್ಕೆ ಅಧಿಕಾರಿಯಾಗುವನು. ॥೨೫॥

ದಿನ ಪೂರ್ತಿ ಉಪವಾಸವಿದ್ದು ಪ್ರದೋಷಕಾಲದಲ್ಲಿ ಶಿವನನ್ನು ಅರ್ಚಿಸಿ ರಾತ್ರಿಯಲ್ಲೊಂದು ಹೊತ್ತು ಮಾತ್ರ ಭುಜಿಸಿ ಸೇವಿಸುವುದರಿಂದ ಭಗವಾನ್ ಶಂಕರನು ಪೂರ್ಣಾನುಗ್ರಹವನ್ನು ಮಾಡುವನು. ॥೨೬॥

ಅಷ್ಟಮಿಯಲ್ಲೂ ಸೋಮವಾರ ರಾತ್ರಿಯಲ್ಲೂ ಅಷ್ಟಮೀ ಚತುರ್ದಶಿಯಲ್ಲೂ ಪಂಚಮಿಯಲ್ಲೂ ಶಿವನಾಮಸಂಕೀರ್ತನಮಾಡುತ್ತಾ ಶಿವನನ್ನು ಭಕ್ತಿಯಿಂದ ಪೂಜಿಸಿದರೆ ಆ ಪರಶಿವನ ಅನುಗ್ರಹವು ಲಭಿಸುವುದು. ॥೨೭-೨೮॥

ಜ್ಞಾನಾಂಗಸಾಧನೇಷ್ವೇವಂ ಶಿವಭಕ್ತಾರ್ಚನಂ ಮಹತ್ ।
ಭಕ್ತಾನಾಮರ್ಚನಾದೇವ ಶಿವಃ ಪ್ರೀತೋ ಭವಿಷ್ಯತಿ ॥೨೯॥

ಇತ್ಯೇತತ್ತ್ರೇ ಸಮಾಸೇನ ಜ್ಞಾನಾಂಗಂ ಕಥಿತಂ ಮಯಾ ।
ಅಕೈತವೇನ ಭಾವೇನ ಶ್ರವಣೀಯೋ ಮಹೇಶ್ವರಃ ॥೩೦॥

॥ ಸೂತ ಉವಾಚ ॥

ಯಃ ಕೋಽಪಿ ಪ್ರಸಭಂ ಪ್ರದೋಷಸಮಯೇ ಬಿಲ್ವೀದಳಾಲಂಕೃತಂ
ಲಿಂಗಂ ತುಂಗಮಪಾರಪುಷ್ಪವಿಭವೈಃ ಪಶ್ಯೇದಥಾರ್ಚ್ಯೇತವಾ ।
ಪ್ರಾಜ್ಯಂ ರಾಜ್ಯಮವಾಪ್ಯ ಕಾಮಹೃದಯಃ ತುಷ್ಯೇದಕಾಮೋ ಯದಿ
ಮುಕ್ತಿದ್ವಾರಮಪಾವೃತಂ ಸತು ಲಭೇಚ್ಛಂಭೋಃ ಕಟಾಕ್ಷಾಂ ಕುರ್ನೈಃ॥೩೧॥

ಮಲಾವಿಲಜಲಾಕುಲೇ ಭವತಿ ಸೂಕರೀಗರ್ಭಭಾಕ್
ಶ್ವಯೋನಿವರಗರ್ದಭೀಜಠರಪೀಠಭಾರಾಂತರೇ ।
ಭವಿಷ್ಯತಿ ಭವೋದ್ಭವಪ್ರಮಥನಾಥಲಿಂಗಾರ್ಚನಾ
ವಿವರ್ಜಿತತನುಃ ಪರಂ ಭಸಿತಫಾಲಪುಂಡ್ರೋಜ್ಝಿತಃ ॥೩೨॥

---

ಶಿವಭಕ್ತರನ್ನು ಅರ್ಚಿಸುವುದು ಜ್ಞಾನಕ್ಕೆ ಸಾಧನವು. ಆದರಿಂದ ಶಿವನು ಸಂತುಷ್ಟನಾಗುವನು. ಒಟ್ಟಿನಲ್ಲಿ ನಿಷ್ಕಪಟವಾದ ನಿರ್ಮಲಭಾವದಿಂದ ಶಿವಮಹಿಮೆ ಯನ್ನು ಶ್ರವಣಮಾಡಬೇಕು. ಎಲೈ ಜೈಗೀಷವ್ಯನೇ, ಹೀಗೆ ಜ್ಞಾನಾಂಗಗಳನ್ನು ನಿನಗೆ ವಿಸ್ತರಿಸಿರುವೆನು. ॥೨೯-೩೦॥

ಪ್ರದೋಷಕಾಲದಲ್ಲಿ ಬಿಲ್ವದಳಪುಷ್ಪಗಳಿಂದಲಂಕೃತವಾದ ಶಿವಲಿಂಗವನ್ನು ಅರ್ಚಿಸಿದರೂ ದರ್ಶನಮಾಡಿದರೂ ಸಾಕು. ಅಂತಹವನು ಫಲಾಪೇಕ್ಷಿಯಾಗಿದ್ದರೆ ರಾಜ್ಯಪದವಿಯನ್ನು ಹೊಂದುವನು. ನಿಷ್ಕಾಮಿಯು ಶಿವನ ಅನುಗ್ರಹದಿಂದ ಮುಕ್ತಿಯನ್ನು ಹೊಂದುವನು. ॥೩೧॥

ಭಸ್ಮರುದ್ರಾಕ್ಷಗಳನ್ನು ಧರಿಸದೇ ಶಿವಲಿಂಗವನ್ನರ್ಚಿಸದೇ ಇರುವ ನರಾಧ ಮನು, ಕತ್ತೆನಾಯಿಗಳ ಜನ್ಮವನ್ನು ಹೊಂದುವುದಲ್ಲದೇ ಕುಂಭೀಪಾಕನರಕದಲ್ಲಿ ಬಹುಕಾಲ ಕೊಳೆಯುವನು. ॥೩೨॥

ಅಚಲಾತುಲರಾಜಕನ್ಯಕಾ
ಕುಚಲೀಲಾಮಲಬಾಹುಜಾಲವಿಶಾಶಂ ।
ಭಜತಾಮನಲಾಕ್ಷಪಾದಪದ್ಮಂ
ಭವಲೀಲಂ ನ ಭವೇತ ಚಿತ್ತಬಾಲಂ ॥೩೩॥

ಭಸ್ಮತ್ರಿಪುಂಡ್ರರಚಿತಾಂಗಕಬಾಹುಫಾಲಾಃ
ರುದ್ರಾಕ್ಷಜಾಲಕವಚಾಃ ಶ್ರುತಿಸೂಕ್ತಿಮಾಲಾಃ ।
ವೇದೋರುರತ್ನಪದಕಾಂಕಿತಶಂಭುನಾಮ
ಲೋಲಾ ಹಿ ಶಾಂಭವವರಾಃ ಪರಿಶೀಲಯಂತಿ ॥೩೪॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಅಷ್ಟಚತ್ವಾರಿಂಶೋಽಧ್ಯಾಯಃ

---

ಅಗ್ನಿಲೋಚನನಾದ ಮತ್ತು ಗಿರಿಜಾವರನಾದ ಪರಶಿವನನ್ನು ಭಜಿಸುವ ಮಹಾತ್ಮರಿಗೆ ಈ ಸಂಸಾರದ ತಾಪತ್ರಯಗಳು ತಾವಾಗಿಯೇ ದೂರವಾಗುವುವು. ಮನಸ್ಸು ಪರಿಪಕ್ವವಾಗುವುದು. ಆನಂದವು ಲಭಿಸುವುದು. ॥೩೩॥

ಬಾಹು ಫಾಲಗಳಲ್ಲಿ ಭಸ್ಮರುದ್ರಾಕ್ಷಧಾರಿಗಳಾಗಿ ರುದ್ರಾಕ್ಷಕವಚವನ್ನು ಧರಿಸಿ ಶಿವನನ್ನರ್ಚಿಸುವ ಶಂಭುಭಕ್ತರೇ ಈ ಮುಕ್ತಿಮಾರ್ಗವಾದ ಗ್ರಂಥವನ್ನು ಪರಿಶೀಲಿಸುವರು. ಅವರೇ ವೇದಪ್ರತಿಪಾದ್ಯಮಾನವಾದ ಶಿವನಾಮಗಳ ಮಹಿಮೆಯನ್ನು ಅರಿಯುವರು. ಇತರರಿಗೆ ಅದು ಹೇಗೆ ಲಭಿಸಬಲ್ಲುದು? ಈ ಮಹಾಗ್ರಂಥದ ರಹಸ್ಯವು ಶಿವಭಕ್ತರಿಗಲ್ಲದೆ, ಅನ್ಯರಿಗೆ ತಿಳಿಯಲು ಸಾಧ್ಯವೇ ಇಲ್ಲವೆಂಬುದು ಈ ಶ್ಲೋಕಾಭಿಪ್ರಾಯವಾಗಿರುವುದು. ॥೩೪॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯಂಶದಲ್ಲಿ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಏಕೋನಪಂಚಾಶತ್ತಮೋಽಧ್ಯಾಯಃ

॥ ಸ್ಕಂದ ಉವಾಚ ॥

ಪುರಾ ಮಾಗಧದೇಶೀಯೋ ಬ್ರಾಹ್ಮಣೋ ವೇದಪಾರಗಃ ।
ಉಚಥ್ಯತನಯೋ ವಾಗ್ಮೀ ವೇದಾರ್ಥಪ್ರವಣವ್ರತಃ ॥೧॥

ನಾಮ್ನಾ ಸುದರ್ಶನೋ ವಿಪ್ರಃ ಪಾಠಯನ್ ಶಾಸ್ತ್ರಮುತ್ತಮಂ ।
ವೇದಾಂತಪರಯಾ ಭಕ್ತ್ಯಾ ವರ್ಣಾಶ್ರಮರತಃ ಸದಾ ॥೨॥

ಮೋಕ್ಷಮಿಚ್ಛೇದಿತಿ ಸದಾ ವಿಪ್ರೋಽಪಿ ಚ ಜನಾರ್ದನಾತ್ ।
ವಿಷ್ಣುಪೂಜಾಪರೋ ನಿತ್ಯಂ ವಿಷ್ಣುಕ್ಷೇತ್ರೇಷು ಸಂವಸತ್ ॥೩॥

ಗೋಪೀಚಂದನಫಾಲೋಽಸೌ ತುಲಸ್ಯೈವಾರ್ಚಯನ್ ಹರಿಂ ।
ಉವಾಸ ನಿಯತಂ ವಿಪ್ರೋ ವಿಷ್ಣುಧ್ಯಾನಪರಾಯಣಃ ॥೪॥

---

## ನಲವತ್ತೊಂಬತ್ತನೆಯ ಅಧ್ಯಾಯವು

ಎಲೈ ಜೈಗೀಷವ್ಯನೇ ಕೇಳು, ಹಿಂದೆ ಮಗಧದೇಶದಲ್ಲಿ ಉಚಥ್ಯಮುನಿಯ ಮಗನಾದ ಸುದರ್ಶನನೆಂಬ ವಿಪ್ರನಿದ್ದನು. ಆತನು ವೇದಪಾರಗನೂ, ವಾಗ್ಮಿಯೂ, ವೇದಾಂತಿಯೂ ಆಗಿ ತನ್ನ ವರ್ಣಾಶ್ರಮಾಚಾರಗಳನ್ನು ತಪ್ಪದೇ ಆಚರಿಸುತ್ತಾ ಶಿಷ್ಯರಿಗೆ ಶಾಸ್ತ್ರಗಳನ್ನು ಕಲಿಸುತ್ತಿದ್ದನು. ॥೧॥

ಆ ಸುದರ್ಶನನು ವಿಷ್ಣುಭಕ್ತನಾಗಿದ್ದು ಗೋಪೀಚಂದನಧಾರಿಯಾಗಿ ವಿಷ್ಣುಕ್ಷೇತ್ರದಲ್ಲಿ ವಾಸಮಾಡುತ್ತಾ ತುಳಸಿಯಿಂದ ಹರಿಯನ್ನರ್ಚಿಸುತ್ತಾ ವಿಷ್ಣುವನ್ನೇ ಸದಾ ಧ್ಯಾನಿಸುತ್ತಾ ಮೋಕ್ಷಾಪೇಕ್ಷಿಯಾಗಿದ್ದನು. ॥೩-೪॥

ದಶವರ್ಷಮಿದಂ ತಸ್ಯ ಕೃತ್ಯಂ ದೃಷ್ಟ್ವಾ ಜನಾರ್ದನಃ ।
ಮೋಕ್ಷೇಚ್ಛೋರ್ಯಾಜುಹಾವೈಸಂ ಪುರತೋಽಭ್ಯೇತ್ಯ ತಂ ದ್ವಿಜಂ ॥೫॥

॥ ವಿಷ್ಣುರುವಾಚ ॥

ಔಚಥ್ಯ ಮುನಿಶಾರ್ದೂಲ ತಪಸ್ಯಭಿರತಃ ಸದಾ ।
ವೃಣು ಕಾಮಂ ದದಾಮ್ಯೇವ ವಿನಾ ಜ್ಞಾನಂ ದ್ವಿಜೋತ್ತಮ ॥೬॥

॥ ಸೂತ ಉವಾಚ ॥

ಇತಿ ವಿಷ್ಣೋ ಗಿರಂ ಶ್ರುತ್ವಾ ವಿಷ್ಣೋಃ ಕಿಂಚಿದ್ಧ್ರಿಯಾನ್ವಿತಃ ।
ಪ್ರಣಿಪತ್ಯಾಹ ತಂ ವಿಷ್ಣುಂ ಸ್ತುವನ್ನಾರಾಯಣೇತಿ ತಂ ॥೭॥

॥ ಸುದರ್ಶನ ಉವಾಚ ॥

ವಿಷ್ಣೋ ಜಿಷ್ಣೋ ನಮಸ್ತೇಽಸ್ತು ಶಂಖಚಕ್ರಗದಾಧರ ।
ತ್ವತ್ಪಾದನಲಿನಂ ಪ್ರಾಪ್ತೋ ಜ್ಞಾನಾದನ್ಯದ್ವೃಣೇ ಕಿಮು ॥೮॥

ಕಿಮನ್ಯೈರ್ಧರ್ಮಕಾಮಾರ್ಥೈರ್ನಶ್ವರೈರಿಹ ಶಂಖಭೃತ್ ।
ಇತ್ಯುಕ್ತಂ ತದ್ವಚಃ ಶ್ರುತ್ವಾ ವಿಷ್ಣುಃ ಪ್ರಾಹ ಸುದರ್ಶನಂ ॥೯॥

---

ಹತ್ತು ವರ್ಷಗಳ ವರೆಗೂ ಸುದರ್ಶನನು ಹೀಗೆಯೇ ವೈಷ್ಣವಧರ್ಮವನ್ನು ಆಚರಿಸುತ್ತಿದ್ದನು. ಆಗ ಹರಿಯು ಪ್ರತ್ಯಕ್ಷನಾಗಿ ಮೋಕ್ಷಾಪೇಕ್ಷಿಯಾದ ಅವನನ್ನು ಕುರಿತು ಹೀಗೆ ಹೇಳಿದನು. ॥೫॥

ಎಲೈ ಸುದರ್ಶನಮುನಿಯೇ, ಏತಕ್ಕಾಗಿ ಇಷ್ಟು ತಪಸ್ಸುಮಾಡುತ್ತಲಿರುವೆ ? ನಿನಗೆ ಬೇಕಾದುದೇನು ? ಜ್ಞಾನವೊಂದನ್ನು ಬಿಟ್ಟು ಬೇಕಾದುದನ್ನು ಕೇಳು. ॥೬॥

ಹರಿಯು ಈ ಮಾತನ್ನು ಕೇಳಿ ಸುದರ್ಶನನು ಸಂಕೋಚಗೊಂಡು ನಮಸ್ಕರಿಸಿ, ಓ ನಾರಾಯಣ ಎಂದು ಸ್ತುತಿಸಿ ಹೀಗೆ ಹೇಳಿದನು. ॥೭॥

“ ಶಂಖ-ಚಕ್ರ-ಗದಾಧಾರಿಯಾದ ಜಯಶಾಲಿಯಾದ ಓ ವಿಷ್ಣುವೇ, ನಿನಗೆ ನಮಸ್ಕಾರವು. ನಿನ್ನ ಅಡಿದಾವರೆಯನ್ನು ಕಷ್ಟದಿಂದ ಪಡೆದು ನಾನು ಜ್ಞಾನವನ್ನು ಬಿಟ್ಟು ಇನ್ನೇನನ್ನು ಕೇಳಲಿ ? ॥೮॥

ಸ್ಥಿರವಾದ ಧರ್ಮಕಾಮಾರ್ಥಗಳಿಂದ ಪ್ರಯೋಜನವೇನು ? ” ಎಂದನು. ಸುದರ್ಶನನ ಆ ಮಾತನ್ನು ಕೇಳಿ ಹರಿಯು ಹೀಗೆ ನುಡಿದನು. ॥೯॥

॥ ವಿಷ್ಣುರುವಾಚ ॥

ಸುದರ್ಶನ ಶೃಣುಷ್ವೈತನ್ಮತ್ತೋ ನಾನ್ಯಮನಾ ದ್ವಿಜ ।
ವದಾಮಿ ತೇ ಹಿತಂ ಸತ್ಯಂ ಮಯಾಪ್ರಾಪ್ತಂ ಯಥಾ ತವ ॥೧೦॥

ಮದ್ದರ್ಶನೇನ ಧ್ಯಾನೇನ ಮೋಕ್ಷೇಚ್ಛಾ ಜಾಯತೇ ನೃಣಾಂ ।
ಮೋಕ್ಷದಾತಾ ಮಹಾದೇವೋ ಜ್ಞಾನವಿಜ್ಞಾನದಾಯಕಃ ॥೧೧॥

ಯದರ್ಚನೇನ ಸಂಪ್ರಾಪ್ತಂ ಮಯಾ ಪೂರ್ವಂ ಸುದರ್ಶನಂ ।
ಸಹಸ್ರಾರಂ ದೈತ್ಯಹಂತೃ ಸಾಕ್ಷಾದಕ್ಷಿಪ್ರಪೂಜಯಾ ॥೧೨॥

ತಮಾರಾಧಯ ಯತ್ನೇನ ಭಸ್ಮಧಾರಣಪೂರ್ವಕಂ ।
ಅಗ್ನಿರಿತ್ಯಾದಿಭಿರ್ಮಂತ್ರೈಃ ತ್ರಿಯಾಯುಷತ್ರಿಪುಂಡ್ರಕೈಃ ॥೧೩॥

ರುದ್ರಾಕ್ಷಧಾರಕೋ ನಿತ್ಯಂ ರುದ್ರಪಂಚಾಕ್ಷರಾದರಃ ।
ಶಿವಲಿಂಗಂ ಬಿಲ್ವಪತ್ರೈಃ ಪೂಜಯನ್ ಜ್ಞಾನವಾನ್ ಭವ ॥೧೪॥

---

ಎಲೈ ಸುದರ್ಶನನೇ ಈ ನನ್ನ ಮಾತನ್ನು ಶ್ರದ್ಧೆಯಿಂದ ಕೇಳು. ಹಿತವಾದ ಮತ್ತು ಸತ್ಯವಾದ ಮಾತನ್ನು ಹೇಳುವೆನು. ॥೧೦॥

ನನ್ನ ದರ್ಶನದಿಂದ ಧ್ಯಾನದಿಂದ ಮಾನವರಿಗೆ ಮೋಕ್ಷಾಪೇಕ್ಷೆಯುಂಟಾಗುವುದು. ಆದರೆ ಜ್ಞಾನೋಪದೇಶದ ಮೂಲಕ ಮೋಕ್ಷವನ್ನು ಕೊಡುವವನು ಮಹಾದೇವನೇ ಹೊರತು ನಾನಲ್ಲ. ॥೧೧॥

ನಾನೂ ಸಹ ಹಿಂದೆ ನನ್ನ ಕಣ್ಣುಗಳನ್ನೇ ಕಮಲಗಳನ್ನಾಗಿ ಅರ್ಪಿಸಿ ಶಿವನನ್ನು ಪೂಜಿಸಿ ಆ ದೇವನ ಅನುಗ್ರಹದಿಂದ ಸಾವಿರ ಅಲಗುಗಳುಳ್ಳ ದೈತ್ಯನಾಶಕವಾದೀ ಸುದರ್ಶನಚಕ್ರವನ್ನು ಪಡೆದೆನು. ॥೧೨॥

ಆದುದರಿಂದ ನೀನೂ ಸಹ ಅಗ್ನಿ,ತ್ರಿಯಾಯುಷ ಮಂತ್ರಗಳಿಂದ ಭಸ್ಮಧಾರಿಯಾಗಿ ಆ ಶಿವನನ್ನು ಭಕ್ತಿಯಿಂದ ಆರಾಧಿಸು. ॥೧೩॥

ರುದ್ರಾಕ್ಷಧಾರಿಯಾಗಿ ರುದ್ರಸೂಕ್ತ ಶಿವಪಂಚಾಕ್ಷರಮಂತ್ರಗಳನ್ನು ಜಪಿಸುತ್ತಾ, ಬಿಲ್ವಪತ್ರಗಳಿಂದ ಶಿವಲಿಂಗವನ್ನು ನಿತ್ಯವೂ ಪೂಜಿಸುತ್ತಾ, ಆತ್ಮಜ್ಞಾನವನ್ನು ಪಡೆ. ॥೧೪॥

ವಸನ್ ಕ್ಷೇತ್ರೇ ಮಹೇಶಸ್ಯ ಸ್ನಾಹಿ ತೀರ್ಥೇ ಚ ಶಾಂಕರೇ ।
ಅಹಂ ಬ್ರಹ್ಮಾದಯೋ ದೇವಾ ಪೂಜಯೈವ ಪಿನಾಕಿನಃ ॥೧೫॥

ಬಲಿನಃ ಶಿವಲಿಂಗಸ್ಯ ಪೂಜಯಾ ವಿಪ್ರಸತ್ತಮ ।
ಪಶ್ಯ ಫಾಲತಲಂ ಮೇಧ್ಯ ತ್ರಿಪುಂಡ್ರಪರಿಚಿಹ್ನಿತಂ ॥೧೬॥

ಬ್ರಹ್ಮೇಂದ್ರದೇವೈರ್ಮುನಿಭಿಸ್ತ್ರಿಪುಂಡ್ರಂ ಭಸ್ಮನಾ ಧೃತಂ ।
ಪಶ್ಯವಕ್ಷಸಿ ಬಾಹ್ವೋರ್ಮೇ ರುದ್ರಾಕ್ಷಾಣಾಂ ಸ್ರಜಂ ಶುಭಾಂ ॥೧೭॥

ಪಂಚಾಕ್ಷರಜಪಾಸಕ್ತಃ ರುದ್ರಾಧ್ಯಾಯಪರಾಯಣಃ ।
ತ್ರಿಕಾಲಮರ್ಚಯಾಮೀಶಂ ಬಿಲ್ವಪತ್ರೈರಹಂ ಶಿವಂ ॥೧೮॥

ಕಮಲಾ ವಿಮಲಾ ನಿತ್ಯಂ ಕಮಲೈರ್ಬಿಲ್ವಪಲ್ಲವೈಃ ।
ಪೂಜಯತ್ಯನಿಶಂ ಲಿಂಗೇ ತಥಾ ಬ್ರಹ್ಮಾದಯಸ್ಸುರಾಃ ॥೧೯॥

---

ಶಿವಕ್ಷೇತ್ರದಲ್ಲೇ ವಾಸಮಾಡುತ್ತಾ ಶಿವತೀರ್ಥದಲ್ಲೇ ಸ್ನಾನಮಾಡುತ್ತಾ ಜ್ಞಾನವನ್ನು ಪಡೆ. ನಾನೂ ಬ್ರಹ್ಮಾದಿ ದೇವತೆಗಳೂ ಸಹ ಶಿವನನ್ನು ಪೂಜಿಸಿಯೇ ಉನ್ನತಿಗೆ ಬಂದಿರುವೆವು. ॥೧೫॥

ಎಲೈ ವಿಪ್ರೋತ್ತಮನೇ ನೋಡು, ನಾನೂ ನನ್ನ ಹಣೆಯಲ್ಲಿ ಶುದ್ಧ ಭಸ್ಮತ್ರಿಪುಂಡ್ರವನ್ನು ಧರಿಸಿರುವೆನು. ॥೧೬॥

ಬ್ರಹ್ಮೇಂದ್ರಾದಿದೇವತೆಗಳೂ ಸಹ ಭಸ್ಮತ್ರಿಪುಂಡ್ರವನ್ನು ಹಚ್ಚುವರು. ನೋಡು. ನನ್ನ ಎದೆಯಲ್ಲಿಯೂ ತೋಳುಗಳಲ್ಲೂ ರುದ್ರಾಕ್ಷಮಾಲೆಗಳು ವಿಧಿವತ್ತಾಗಿ ಇವೆ. ॥೧೭॥

ಶಿವಪಂಚಾಕ್ಷರಮಂತ್ರವನ್ನು ಜಪಿಸುತ್ತಾ ರುದ್ರಸೂಕ್ತವನ್ನು ಪಠಿಸುತ್ತಾ ತ್ರಿಕಾಲಗಳಲ್ಲೂ ಬಿಲ್ವಪತ್ರಗಳಿಂದ ಶಿವನನ್ನು ನಾನು ಅರ್ಚಿಸುವೆನು. ॥೧೮॥

ನನ್ನ ಪತ್ನಿ ಲಕ್ಷ್ಮಿಯು ನಿತ್ಯವೂ ಕಮಲಗಳಿಂದಲೂ ಬಿಲ್ವಪತ್ರಗಳಿಂದಲೂ ಶಿವನನ್ನರ್ಚಿಸುವಳು, ಇದರಂತೆಯೇ ಬ್ರಹ್ಮಾದಿಗಳೂ ಶಿವಲಿಂಗವನ್ನು ಪೂಜಿಸುವರು. ॥೧೯॥

ಮುನಯೋ ಮನವೋಽಪ್ಯೇವಂ ತಥಾಽನ್ಯೇ ದ್ವಿಜಸತ್ತಮ ।
ನೃಪಾಸುರಾಸ್ತಥಾದೈತ್ಯಾ ಬಲಿನಃ ಶಿವಪೂಜಯಾ ॥೨೦॥

ಜ್ಞಾನಂ ಮೋಕ್ಷಂ ತಥಾ ಭಾಗ್ಯಂ ಲಭ್ಯತೇ ಶಂಕರಾರ್ಚನಾತ್ ।
ತಸ್ಮಾತ್ತ್ವಮಪಿ ಭಕ್ತ್ಯೈವಂ ಸಮಾರಾಧಯ ಶಂಕರಂ ॥೨೧॥

ಪಶವೋ ವಿಷ್ಣುವಿಧಯಸ್ತಥಾನ್ಯೇ ಮುನಯಸ್ಸುರಾಃ ।
ಸರ್ವೇಷಾಂ ಪತಿರೀಶಾನಃ ತತ್ಪ್ರಸಾದಾದ್ವಿಮುಕ್ತಿಭಾಕ್ ॥೨೨॥

ಪ್ರಸಾದಜನಕಂ ತಸ್ಯ ಭಸ್ಮಧಾರಣಮೇವ ಹಿ ।
ಪ್ರಸಾದಜನಕಂ ತಸ್ಯ ಮುನೇ ರುದ್ರಾಕ್ಷಧಾರಣಂ ॥೨೩॥

ಪ್ರಸಾದಜನಕಸ್ತಸ್ಯ ರುದ್ರಾಧ್ಯಾಯಜಪಃ ಸದಾ ।
ಪ್ರಸಾದಜನಕಂ ತಸ್ಯ ಪಂಚಾಕ್ಷರಜಪಃ ದ್ವಿಜ ॥೨೪॥

ಪ್ರಸಾದಜನಕಂ ತಸ್ಯ ಶಿವಲಿಂಗೈಕಪೂಜನಂ ।
ಪ್ರಸಾದೇ ಶಾಂಭವೇ ಜಾತೇ ಭುಕ್ತಿಮುಕ್ತೀ ಕರಸ್ಥಿತೇ ॥೨೫॥

---

ಮುನಿಗಳು, ಮನುಗಳು, ರಾಜರು, ಅಸುರರು, ರಾಕ್ಷಸರು ಇವರೆಲ್ಲರೂ ಶಿವನನ್ನು ಅರ್ಚಿಸಿಯೇ ಅಭ್ಯುದಯವನ್ನೈದಿರುವರು. ॥೨೦॥

ಜ್ಞಾನ ಮುಕ್ತಿ ಐಶ್ವರ್ಯಗಳು ಶಿವನ ಅರ್ಚನೆಯಿಂದ ಲಭಿಸುವುವು. ಆದುದರಿಂದ ಎಲೈ ಸುದರ್ಶನಮುನಿಯೇ, ನೀನೂ ಭಕ್ತಿಯಿಂದ ಶಂಕರನನ್ನು ಆರಾಧಿಸು. ॥೨೧॥

ಹರಿಯೇ (ನಾನೇ) ಮೊದಲುಗೊಂಡ ಎಲ್ಲ ಪ್ರಾಣಿಗಳೂ ಪಶುಗಳೇ. ಅವುಗಳಿಗೆ ಒಡೆಯನಾದುದರಿಂದ ಪರಮೇಶ್ವರನಿಗೆ ಪಶುಪತಿಯೆಂದು ಹೆಸರು. ಆ ಪಶುಪತಿಯ ಅನುಗ್ರಹದಿಂದ ಮುಕ್ತಿಯು ಲಭಿಸುವುದು. ॥೨೨॥

ಭಸ್ಮರುದ್ರಾಕ್ಷಧಾರಣೆಯೂ ರುದ್ರಸೂಕ್ತಪಠನೆಯೂ ಶಿವಪಂಚಾಕ್ಷರಮಂತ್ರ ಜಪವೂ ಶಿವನ ಅನುಗ್ರಹವನ್ನು ಸಂಪಾದಿಸಿಕೊಡುವುವು. ॥೨೩-೨೪॥

ಶಿವಲಿಂಗಪೂಜೆಯಿಂದ ಶಿವನು ಪ್ರಸನ್ನನಾಗುವನು, ಶಿವನು ಪ್ರಸನ್ನನಾದರೆ ಭೋಗ ಮೋಕ್ಷಗಳೆರಡೂ ಭಕ್ತನ ಕೈಯಲ್ಲಿದ್ದಂತೆಯೇ. ॥೨೫॥

ತಸ್ಯ ಭಕ್ತ್ಯೈವ ಸರ್ವೇಷಾಂ ಸೋಮೇಸಾಯಂತನಾರ್ಚನಂ ।
ತಸ್ಯ ಭಕ್ತ್ಯೈವ ಸರ್ವೇಷಾಮುಷ್ಟಮ್ಯಾಷ್ಟರ್ಜನಂ ನಿಶಿ ॥೨೬॥

ತಸ್ಯ ಭಕ್ತ್ಯೈವ ಸರ್ವೇಷಾಂ ಮೋಚನಂ ಭವಪಾಶತಃ ।
ತಸ್ಯ ಪ್ರೀತಿಕರಂ ಸಾಕ್ಷಾದ್ಬಿಲ್ವೈರ್ಲಿಂಗಸ್ಯ ಪೂಜನಂ ॥೨೭॥

ತಸ್ಯ ಭಕ್ತ್ಯೈವ ಸರ್ವೇಷಾಂ ಚತುರ್ದಶ್ಯರ್ಜನಂ ನಿಶಿ ।
ತಸ್ಯ ಭಕ್ತ್ಯೈವ ಸರ್ವೇಷಾಂ ತನ್ನಿರ್ಮಾಲ್ಯೈಕಭೋಜನಂ ॥೨೮॥

ತಸ್ಯ ಭಕ್ತ್ಯೈವ ಸರ್ವೇಷಾಂ ತಸ್ಯ ಸಂಸ್ನಾಪನಂ ಜಲಂ ।
ತಸ್ಯ ಭಕ್ತ್ಯೈವ ಸರ್ವೇಷಾಂ ತನ್ನಾಮ್ನಾಂ ಸ್ಮೃತಿರೇವ ಹಿ ॥೨೯॥

ತಸ್ಯ ಭಕ್ತ್ಯೈವ ಸರ್ವೇಷಾಂ ತಸ್ಯ ಸಾಷ್ಟಾಂಗವಂದನಂ ।
ತಸ್ಯ ಭಕ್ತ್ಯೈವ ಸರ್ವೇಷಾಂ ತಸ್ಯ ಭಕ್ತಸ್ಯ ಪೂಜನಂ ॥೩೦॥

ಏತಾವಚ್ಛೈವಧರ್ಮಂ ಹಿ ಶಂಭೋಃ ಪ್ರಿಯಕರಂ ಮಹತ್ ।
ಅನ್ಯದಭ್ಯುದಯಂ ವಿಪ್ರ ಶ್ರುತಿಸ್ಮೃತಿಷು ಕೀರ್ತಿತಃ ॥೩೧॥

---

ಶಿವನಲ್ಲಿ ಇಡುವ ಭಕ್ತಿಯಿಂದಲೇ ಸಂಸಾರಪಾಶವು ಹರಿಯುವುದು. ಬಿಲ್ವ ಪತ್ರಗಳಿಂದ ಶಿವಲಿಂಗವನ್ನರ್ಚಿಸಿದರೆ ಶಿವನು ಪ್ರಸನ್ನನಾಗುವನು. ಶಿವಭಕ್ತಿಯಿಂದ ಸೋಮವಾರ ಪ್ರದೋಷಕಾಲದಲ್ಲೂ ಅಷ್ಟಮಿ ರಾತ್ರಿಯಲ್ಲೂ ಪೂಜಿಸಿದರೆ ಸಂಸಾರ ಪಾಶವು ಹರಿದುಹೋಗುವುದು. ॥೨೬-೨೭॥

ಭಕ್ತಿಯಿಂದ ಚತುರ್ದಶಿ ರಾತ್ರಿಯಲ್ಲಿ ಶಿವನರ್ಚಿಸುವುದು, ಶಿವನಿರ್ಮಾಲ್ಯ ವನ್ನು ಭುಜಿಸುವುದು, ರುದ್ರಾಭಿಷೇಕ ನಾಮಸಂಕೀರ್ತನಗಳನ್ನು ಮಾಡುವುದು ಇವುಗಳಿಂದ ಶಿವನು ಪ್ರಸನ್ನನಾಗುವನು. ॥೨೮-೨೯॥

ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರಮಾಡುವುದು, ಶಿವಭಕ್ತರನ್ನು ಪೂಜಿ ಸುವುದು-ಇವುಗಳಿಂದಲೂ ಶಿವನು ಪ್ರಸನ್ನನಾಗುವನು. ॥೩೦॥

ಹಿಂದೆ ಹೇಳಿದುದೆಲ್ಲವೂ ಶಿವನಿಗೆ ಇಷ್ಟವಾದಂತಹ ಶೈವಧರ್ಮವಾಗಿದೆ. ಇದೇ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. ॥೩೧॥

ಧರ್ಮೋ ವರ್ಣಾಶ್ರಮಪ್ರೋಕ್ತೋ ಮುನಿಭಿಃ ಕಥಿತೋ ಮುನೇ ।
ಅವಿಮುಕ್ತೇ ವಿಶೇಷೇಣ ಶಿವೋ ನಿತ್ಯಂ ಪ್ರಕಾಶತೇ ॥೩೨॥

ತಸ್ಮಾತ್ಕಾಶೀತಿ ತತ್ಪ್ರೋಕ್ತಂ ಯತೋಹೀಶಃ ಪ್ರಕಾಶತೇ ।
ತತ್ರೈವಾಮರಣಂ ತಿಷ್ಠೇದಿತಿ ಜಾಬಾಲಿಕೀ ಶ್ರುತಿಃ ॥೩೩॥

ತತ್ರ ವೈಶ್ವೇಶ್ವರೇ ಲಿಂಗೇ ನಿತ್ಯಂ ಬ್ರಹ್ಮ ಪ್ರಕಾಶತೇ ।
ತತ್ರಾನ್ನಪೂರ್ಣಾ ಸರ್ವೇಷಾಂ ಮುಕ್ತ್ಯೈಯೇನ್ನಂ ಪ್ರಯಚ್ಛತಿ ॥೩೪॥

ತತ್ರಾಸ್ತಿ ಮಣಿಕರ್ಣಾಖ್ಯಂ ಮಾಯಾಕುಂಡಂ ವಿನಿರ್ಮಿತಂ ।
ಜ್ಞಾನೋದಯಮಪಿ ತತ್ರಾಸ್ತಿ ಸರ್ವೇಷಾಂ ಜ್ಞಾನದಾಯಕಃ ॥೩೫॥

ತತ್ರ ಯಾಹಿ ಮಯಾ ಸಾರ್ಧಂ ತತ್ರೈವ ವಸ ಹೇ ಮುನೇ ।
ತತ್ರಾಂತೇ ಮೋಕ್ಷದಂ ಜ್ಞಾನಂ ದದಾತೀಶ್ವರ ಏವ ಹಿ ॥೩೬॥

---

ಮುನಿಗಳು ಹೇಳಿದ ವರ್ಣಾಶ್ರಮಧರ್ಮಗಳೂ ಈ ಶಿವಧರ್ಮವೇ. ಅವಿಮುಕ್ತತೀರ್ಥದಲ್ಲಿ ಪರಮೇಶ್ವರನು ನಿತ್ಯವೂ ಸನ್ನಿಹಿತನಾಗಿರುವನು. ॥೩೨॥

ಪರಶಿವನು ಅಲ್ಲಿ ಪ್ರಕಾಶಿಸುವುದರಿಂದಲೇ ಕಾಶಿಗೆ ಕಾಶಿಯೆಂದು ಹೆಸರು ಬಂದಿರುವುದು. ಆದುದರಿಂದ ಕಾಶಿಯಲ್ಲಿ ಮರಣಪರ್ಯಂತವೂ ವಾಸಿಸಬೇಕು. ಎಂದು ಜಾಬಾಲ ಶ್ರುತಿಯು ಹೇಳುವುದು. ॥೩೩॥

ಆ ಕಾಶಿಯಲ್ಲಿಯೇ ವಿಶ್ವೇಶ್ವರಲಿಂಗದಲ್ಲಿ ಬ್ರಹ್ಮವಸ್ತುವು ಪ್ರಕಾಶಿಸುವುದು. ಅಜ್ಞಾನವನ್ನು ಕಳೆದು ಅಲ್ಲಿಯೇ ಅನ್ನಪೂರ್ಣೆಯು ಮುಕ್ತಿಗೆ ಅನ್ನವನ್ನು ನೀಡುವಳು. ॥೩೪॥

ಆ ಕಾಶಿಯಲ್ಲಿ ಮಣಿಕರ್ಣಿಕೆಯೆಂಬ ಮಾಯಾಕುಂಡವಿರುವುದು. ಅದರಲ್ಲಿ ಜ್ಞಾನವನ್ನುಂಟುಮಾಡುವಂತಹ ಜ್ಞಾನಕುಂಡವು ಇರುವುದು. ॥೩೫॥

ಎಲೈ ಮುನಿಯೇ, ಆ ಮಣಿಕರ್ಣಿಕೆಗೆ ನನ್ನೊಡನೆ ನೀನೂ ಬಂದು ಅಲ್ಲಿಯೇ ವಾಸಮಾಡು. ಅಲ್ಲಿ ಕೊನೆಯಲ್ಲಿ ಈಶ್ವರನು ಮುಕ್ತಿಜ್ಞಾನವನ್ನು ಕೊಡುವನು. ॥೩೬॥

ಇತ್ಯುಕ್ತ್ವಾ ತೇನ ವಿಪ್ರೇಣ ಯಯೌ ಕಾಶೀಂ ಹರಿಃ ಸ್ವಯಂ ।
ಸ್ನಾತ್ವಾ ತೀರ್ಥೇ ಚಕ್ರಸಂಜ್ಞೇ ಜ್ಞಾನವಾಪ್ಯಾಂ ಹರಿರ್ದ್ವಿಜಃ ॥೩೭॥

ತಂ ದ್ವಿಜಂ ಸ್ನಪಯಾಮಾಸ ಭಸ್ಮನಾಪಾದಮಸ್ತಕಂ ।
ಧೃತತ್ರಿಪುಂಡ್ರರುದ್ರಾಕ್ಷಂ ಕೃತ್ವಾ ತಂ ಚ ಸುದರ್ಶನಂ ॥೩೮॥

ಪೂಜಯಿತ್ವಾಥ ವಿಶ್ವೇಶಂ ಪೂಜಯಾಮಾಸ ಚ ದ್ವಿಜಾತ್ ।
ಬಿಲ್ವೈರ್ಗಂಧಾಕ್ಷತೈರ್ದೀಪೈರ್ನೈವೇದ್ಯೈಶ್ಚ ಮನೋಹರೈಃ ॥೩೯॥

ತುಷ್ಟಾವ ಪ್ರಣಿಪತ್ಯೇವಂ ಸದ್ವಿಜೋ ಮಧುಸೂದನಃ ॥೪೦॥

॥ ಸುದರ್ಶನವಿಷ್ಣೂ ಊಚತುಃ ॥

ಭಜ ಭಜ ಭಸಿತಾನಲೋಜ್ಜ್ವಲಾಕ್ಷಂ
ಭುಜಗಾಭೋಗಭುಜಂಗಸಂಗಹಸ್ತಂ ।
ಭವಭೀಮಮಹೋಗ್ರರುದ್ರಮೀಡ್ಯಂ
ಭವಭರ್ಜಕತರ್ಜಕಂ ಮಹೈನಸಾಂ ॥೪೧॥

---

ಹೀಗೆ ಹೇಳಿ ಹರಿಯು ಆ ಸುದರ್ಶನಮುನಿಯೊಡನೆ ಕಾಶಿಕ್ಷೇತ್ರಕ್ಕೆ ಹೋದನು. ಅಲ್ಲಿ ಚಕ್ರತೀರ್ಥದ ಜ್ಞಾನವಾಪಿಯಲ್ಲಿ ಸುದರ್ಶನನಿಗೂ ಸ್ನಾನ ಮಾಡಿಸಿ ತಾನೂ ಸ್ನಾನಮಾಡಿ ಆ ಮೇಲೆ ಆ ಮುನಿಗೆ ಶಿರಸ್ಸಿನಿಂದ ಕಾಲಿನವರೆಗೆ ಪೂರ್ತಿಯಾಗಿ ಭಸ್ಮಸ್ನಾನವನ್ನು ಮಾಡಿಸಿದನು. ॥೩೭॥

ಮತ್ತು ಆ ಸುದರ್ಶನನಿಗೆ ರುದ್ರಾಕ್ಷಿಗಳನ್ನು ಅನುಗ್ರಹಿಸಿ ಹರಿಯು ಅವನೊಡನೆ ತಾನೂ ವಿಶ್ವನಾಥನನ್ನು ಬಿಲ್ವಪತ್ರಗಂಧಾಕ್ಷತೆದೀಪನೈವೇದ್ಯಗಳಿಂದ ಪೂಜಿಸಿ ನಮಸ್ಕರಿಸಿ ಭಕ್ತಿಯಿಂದ ಸುದರ್ಶನನೊಡನೆ ಈ ರೀತಿಯಾಗಿ ಸ್ತುತಿಸಿದನು. ॥೩೮-೩೯-೪೦॥

" ಮೂರನೆಯ ಉರಿಗಣ್ಣುಳ್ಳವನಾದ, ಸರ್ಪಭೂಷಣನಾದ, ಜಗನ್ಮಯನೂ, ಜಗತ್ಸಂಹಾರಕನೂ ಪಾಪನಾಶಕನೂ, ದುಷ್ಟರಿಗೆ ಭಯಂಕರನೂ, ದೇವಾದಿ ವಂದ್ಯನೂ ಆದ ಪರಶಿವನನ್ನು ಓ ಮನಸ್ಸೇ ಭಜಿಸು, ಭಜಿಸು. ॥೪೧॥

ವೇದಘೋಟಕ ಭಟಖೇಟಿಕಾಟಿಧೃಕ್
ದೇಹದಾಹದಹನಾಮಲಫಾಲ ।
ಜೂಟಕೋಟಿಸುಜಟಾತಟಿದುದ್ಯ
ದ್ರಾಗರಂಜಿತತಟಿನೀ ಶಶಿಮೌಳೀ ॥೪೨॥

ಶಂಬರಾಂಕವರಭೂಷಣ ಪಾಹಿ ಮಾಂ
ಅಂಬರಾಂತರಚರಸ್ಫುಟವಾಹ ।
ವಾರಿದಾಭಘನಘೋಷ ಶಂಕರ
ತ್ರಾಹಿ ವಾರಿಜಭವೇಡ್ಯ ಮಹೇಶ ॥೪೩॥

ಮದಗಜವರಕೃತ್ತಿವಾಸ ಶಂಭೋ
ಮಧುದಮನಾಕ್ಷಿ ಸರೋರುಹಾರ್ಚ್ಯಪಾದ ।
ಯಮಮದದಮನಾಂಧಕದಕ್ಷಶಿಕ್ಷ
ಪುರಹರ ಪಾಹಿ ದಯಾಕಟಾಕ್ಷಸಾರೈಃ ॥೪೪॥

ಅಪಾಂ ಪುಷ್ಪೈರ್ಮೌಳೌ ಹಿಮಭಯಹರಃ ಫಾಲನಯನೋ
ಜಟಾಜೂಟೇ ಗಂಗಾಂಬುಜವಿಕಸನಃ ಸವ್ಯನಯನಃ ।
ಗರಂ ಕಂಠೇ ಯಸ್ಯ ತ್ರಿಭುವನಗುರೋಶ್ಯಂಬರಕರ
ಮತಂಗೋದ್ಯತ್ಕೃತ್ತೇರ್ಭವಹರಣಪಾದಾಬ್ಜಭವನಂ ॥೪೫॥

---

ನಾಲ್ಕು ವೇದಗಳೇ ಕುದುರೆಗಳಾಗುಳ್ಳ, ಚಂದ್ರಸೂರ್ಯರೇ ರಥದ ಗಾಲಿಗಳಾಗುಳ್ಳ, ಉರಿಗಣ್ಣಿನಿಂದ ಕಾಮನನ್ನು ದಹಿಸಿದ, ಜಟೆಯಲ್ಲಿ ಚಂದ್ರಕಲಾಗಂಗೆಯರನ್ನು ಧರಿಸಿರುವ ಓ ದೇವದೇವನೇ ನಮ್ಮನ್ನು ರಕ್ಷಿಸು. ॥೪೨॥

ನಾಗಭೂಷಣನಾದ, ನಂದಿವಾಹನನಾದ, ಮೇಘಗಂಭೀರಧ್ವನಿಯುಳ್ಳ, ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುವ ಓ ಶಂಕರನೇ, ನಮ್ಮನ್ನು ಪಾಲಿಸು. ॥೪೩॥

ಮದ್ದಾನೆಯ ಚರ್ಮವನ್ನು ಧರಿಸುವ, ಹರಿಯ ನೇತ್ರಕಮಲದಿಂದ ಅರ್ಚಿಸಲ್ಪಟ್ಟ, ಯಮ-ಮನ್ಮಥ-ಅಂಧಕ-ದಕ್ಷರನ್ನು ಶಿಕ್ಷಿಸಿದ ತ್ರಿಪುರವೈರಿಯಾದ ಓ ಶಂಕರನೇ, ಕರುಣೆಯಿಂದ ನಮ್ಮನ್ನು ಸಲಹು. ॥೪೪॥

ಶಿರಸ್ಸಿನಲ್ಲಿ ಚಂದ್ರನನ್ನೂ ಜಟೆಯಲ್ಲಿ ಗಂಗೆಯನ್ನೂ, ಹಣೆಯಲ್ಲಿ ಉರಿಗ

ಶ್ರೀಬಿಲ್ವಮೂಲಶಿತಿಕಂಠಮಹೋರುಲಿಂಗಂ
ಬಿಲ್ವಾಂಬುಜೋತ್ತಮವರೈಃ ಪರಿಪೂಜ್ಯ ಭಕ್ತ್ಯಾ ।
ಸ್ತಂಬೇರಮಾಂಗವದನೋಕ್ತಮನಂಗಭಂಗ
ರಾಜದ್ವೃಷಾಂಗಪರಿಸಂಗಮಹೋರುಶಾಂಗಂ ॥೪೬॥

ಯೋ ಗೌರೀರಮಣಾರ್ಚನೋದ್ಯತಮತಿರ್ಭೂಯೋ ಭವೇಚ್ಛಾಂಭವಃ
ಭಕ್ತ್ಯೋ ಜನ್ಮಪರಂಪರಾಸು ನ ಭವೇನ್ಮುಕ್ತ್ಯೋಥ ಮುಕ್ತ್ಯಂಗನಾ ।
ಕಾಂತಃ ಸ್ವಾಂತನಿತಾಂತಶಾಂತಹೃದಯಃ ಕಾರ್ತಾಂತವಾರ್ತೋಜ್ಝಿತಃ
ವಿಷ್ಣುಬ್ರಹ್ಮಸುರೇಂದ್ರರಂಜಿತಮುಮಾಕಾಂತಾಂಘ್ರಿಪಂಕೇರುಹಂ ॥೪೭॥

ಧ್ಯಾನಾನಂದನಿಮಗ್ನಸರ್ವಹೃದಯಃ ಕಿಂಚಿನ್ನಜಾನಾತ್ಯಪಿ ॥೪೮॥

---

ಣ್ಣನ್ನೂ, ಕೊರಳಲ್ಲಿ ವಿಷವನ್ನೂ, ಶರೀರದಲ್ಲಿ ಗಜಚರ್ಮವನ್ನೂ, ಧರಿಸಿರುವ ಸೂರ್ಯನು ಬಲಗಣ್ಣಾಗಿರುವ ಶಂಕರನನ್ನು ಅನನ್ಯಸಾಧಾರಣವಾದ ಭಕ್ತಿಯಿಂದ ಸೇವಿಸುವೆನು. ॥೪೫॥

ಬಿಲ್ವವೃಕ್ಷದ ಮೂಲದಲ್ಲಿರುವ ಶಿವಲಿಂಗರೂಪಿಯಾದ, ನೀಲಕಂಠನಾದ, ಗಣೇಶಜನಕನಾದ, ಮನ್ಮಥನಾಶಕನಾದ, ವೃಷಭವಾಹನನಾದ, ವಿಶ್ವನಾಥನಾದ ಶ್ರೀಶಂಕರನನ್ನು ಬಿಲ್ವಕಮಲಗಳಿಂದ ಪೂಜಿಸುವೆವು. ॥೪೬॥

ಯಾವನು ವಿಷ್ಣುಬ್ರಹ್ಮಾದಿಗಳಿಂದ ಪೂಜಿತವಾದ ಗೌರೀರಮಣನ ಅಡಿದಾವರೆಯನ್ನು ಅಸಾಧಾರಣವಾದ ಭಕ್ತಿಯಿಂದ ಅರ್ಚಿಸುತ್ತಾ ಅವನ ದಿವ್ಯಮಹಿಮೆಗಳನ್ನು ಧ್ಯಾನಿಸುತ್ತಾ ಇರುವನೋ ಅವನಿಗೆ ಜನನಮರಣಗಳ ಭಯವಿರುವುದಿಲ್ಲ. ಮುಕ್ತಿಕಾಂತೆಗೆ ಆತನು ಪ್ರಿಯರಮಣನಾಗುವನು. ಅವನು ಯಾವಾಗಲೂ ಶಾಂತಹೃದಯದಿಂದ ಕೂಡಿದವನಾಗಿರುವನು. ಅವನಿಗೆ ಯಮನ ಭಯವು ತಿಲಮಾತ್ರವಾದರೂ ಇರುವುದಿಲ್ಲ. ಶಿವಧ್ಯಾನವೆಂಬ ಆನಂದಸಮುದ್ರದಲ್ಲಿ ಮನಸ್ಸನ್ನು ಮುಳುಗಿಸಿರುವ ಶಿವಭಕ್ತನು ಬಾಹ್ಯಪ್ರಪಂಚವ್ಯವಹಾರವಾವುದನ್ನೂ ತಿಳಿಯುವದಿಲ್ಲ. ಅವನು ತಾನೇ ತಾನಾಗಿ ಪರಮಾತ್ಮಪ್ರಕಾಶದಂತೆ ಪ್ರಕಾಶಿಸುತ್ತಿರುವನೆಂದು ಭಾವವು. ॥೪೭-೪೮॥

ಕಾಮಾರಾತಿಪದಾರ್ಚನೇಷು ನಿರತಃ ಪಾಪಾನುತಾಪಾಧಿಕ
ವ್ಯಾಪಾರಪ್ರವಣಪ್ರಕೀರ್ಣಮನಸಾ ಪುಣ್ಯೈರಗಣ್ಯೈರಪಿ ।
ಜೋಹೂಯೇತ ವಿಶೇಷಸಂಸ್ಕೃತಿಮಹಾಸಾರಾನುಕಾರಾದರಾ
ದಾರಾಗ್ರಾಹಕುಮಾರಮಾರಸುಶರಾದ್ಯಾಘಾತಭೀತೇರಪಿ ॥೪೯॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಏಕೋನಪಂಚಾಶತ್ತಮೋಽಧ್ಯಾಯಃ

---

ಮದನವೈರಿಯಾದ ಪರಶಿವನ ಅಡಿದಾವರೆಯನ್ನಾವನು ಪಾಪಿಯಾದರೂ ಅನುತಾಪಬುದ್ಧಿಯಿಂದ ಅರ್ಚಿಸುವನೋ ಅವನಿಗೆ ಈ ಸಂಸಾರಸಾಗರದ ಭಯವಿಲ್ಲ. ಮನ್ಮಥನ ಭಯವಿಲ್ಲ, ಜನನಮರಣಗಳ ಭಯವಿಲ್ಲ. ದಾರಾಪುತ್ರಾದಿಗಳ ಪೀಡೆ ಯಿರುವುದಿಲ್ಲ. ಅರಿಷಡ್ವರ್ಗಗಳ ಹಿಂಸೆ ತೋರುವುದಿಲ್ಲ. ಅವನು ಮಹಾಪುಣ್ಯಶಾಲಿ ಯೆನಿಸುವನು. ಇಂತಹ ಪುಣ್ಯಶಾಲಿಗಳು ಈ ಪ್ರಪಂಚದಲ್ಲಿ ದೊರೆಯುವುದೇ ದುರ್ಲಭವು. ॥೪೯॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ನಲವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಪಂಚಾಶತ್ತಮೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ವಿಷ್ಣುಸ್ತವಾಂತೇ ವಿಪ್ರೋಽಸೌ ಸುದರ್ಶನಸಮಾಹ್ವಯಃ ।
ಸ್ನಾತ್ವಾಥ ಮಣಿಕರ್ಣ್ಯಾಂ ಸ ಭಸ್ಮರುದ್ರಾಕ್ಷಭೂಷಣಃ ||೧||

ಸ ಜಪನ್ ಶತರುದ್ರೀಯಂ ಪಂಚಾಕ್ಷರಪರಾಯಣಃ ।
ಸಂಪಾದ್ಯ ಬಿಲ್ವಪತ್ರಾಣಿ ಕಮಲಾನ್ಯಮಲಾನ್ಯಪಿ ||೨||

ಗಂಧಾಕ್ಷತೈರ್ಧೂಪದೀಪೈರ್ನೈವೇದ್ಯೈರ್ವಿವಿಧೈರಪಿ ।
ವಿಷ್ಣೂಪದಿಷ್ಟಮಾರ್ಗೇಣ ನಿತ್ಯಮಂತರ್ಗೃಹಸ್ಯ ಹಿ ||೩||

ಪ್ರದಕ್ಷಿಣಂ ಚಕಾರಾಸೌ ಲಿಂಗಾನ್ಯಭ್ಯರ್ಚಯಂಸ್ತಥಾ ।
ವಿಶ್ವೇಶ್ವರಾವಿಮುಕ್ತೇಶೌ ವೀರೇಶಂ ಚ ತ್ರಿಲೋಚನಂ ||೪||

---

## ಐವತ್ತನೆಯ ಅಧ್ಯಾಯ

ಎಲೈ ಜೈಗೀಷವ್ಯನೇ, ವಿಷ್ಣುವು ಶಿವನನ್ನು ಸ್ತುತಿಸಿದಮೇಲೆ ಆ ಸುದರ್ಶನನು ಮಣಿಕರ್ಣಿಕೆಯಲ್ಲಿ ಸ್ನಾನಮಾಡಿದನು. ಭಸ್ಮರುದ್ರಾಕ್ಷಮಾಲೆಗಳನ್ನು ಧರಿಸಿದನು. ರುದ್ರಸೂಕ್ತವನ್ನು ಪಠಿಸಿದನು, ಶಿವಪಂಚಾಕ್ಷರಮಂತ್ರವನ್ನು ಜಪಿಸಿದನು, ಆಮೇಲೆ ಬಿಲ್ವಪತ್ರಗಳನ್ನೂ ಕಮಲಗಳನ್ನೂ ಸಂಪಾದಿಸಿ ಹರಿಯ ಉಪದೇಶದಂತೆ ಒಳಮನೆಯಲ್ಲಿ ಗಂಧಾಕ್ಷತಪುಷ್ಪಧೂಪದೀಪನೈವೇದ್ಯಾದಿಗಳಿಂದ ಶಿವಲಿಂಗಗಳನ್ನು ಅರ್ಚಿಸಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದನು. ||೧-೨-೩||

ವಿಶ್ವನಾಥ, ಅವಿಮುಕ್ತೇಶ್ವರ, ವೀರೇಶಲಿಂಗ, ತ್ರಿಲೋಚನೇಶ್ವರ, ಕೃತ್ತಿವಾ

ಕೃತ್ತಿವಾಸಂ ವೃದ್ಧಕಾಲಂ ಕೇದಾರಂ ಶೂಲಟಂಕಕಂ ।
ರತ್ನೇಶಂ ಭಾರಭೂತೇಶಂ ಚಂದ್ರೇಶಂ ಸಿದ್ಧಕೇಶ್ವರಂ ॥೫॥

ಘಂಟಾಕರ್ಣೇಶ್ವರಂ ಚೈವ ನಾರದೇಶಂ ಯಮೇಶ್ವರಂ ।
ಪುಲಸ್ತಿಪುಲಹೇಶಂ ಚ ವಿಕರ್ಣೇಶಂ ಫಲೀಶ್ವರಂ ॥೬॥

ಕದ್ರುದ್ರೇಶಂ ಅಖಂಡೇಶಂ ಕೇತುಮಾಲಂ ಗಭಸ್ತಿಕಂ ।
ಯಮುನೇಶಂ ವರ್ಣಕೇಶಂ ಭದ್ರೇಶಂ ಜ್ಯೇಷ್ಠಶಂಕರಂ ॥೭॥

ನಂದಿಕೇಶಂ ಚ ರಾಮೇಶಂ ಕರಮರ್ದೇಶ್ವರಂ ತಥಾ ।
ಆವರ್ದೇಶಂ ಮತಂಗೇಶಂ ನಾಸಿಕೇಶಂ ದ್ರುತೀಶ್ವರಂ ॥೮॥

ಸೂರ್ಯೇಶಮರ್ಯಮೇಶಂ ಚ ಸೃಣೀಶಂ ಗಾಲವೇಶ್ವರಂ ।
ಕಣ್ವಕಾತ್ಯಾಯನೇಶಂ ಚ ಚಂದ್ರಚೂಡೇಶ್ವರಂ ತಥಾ ॥೯॥

ಉದಾವರ್ತೇಶ್ವರಂ ಚೈವ ತೃಣಜ್ಯೋತೀಶ್ವರಂ ತಥಾ ।
ಕೊಂಕಣೇಶಂ ಮಂಕಣೇಶಂ ಸ್ಕಂದೇಶಂ ತಾರಕೇಶ್ವರಂ ॥೧೦॥

---

ಸೇಶ್ವರ, ವೃದ್ಧಕಾಲೇಶ್ವರ, ಕೇದಾರೇಶ್ವರ, ಶೂಲಟಂಕೇಶ್ವರ, ರತ್ನೇಶ್ವರ, ಭಾರಭೂತೇಶ್ವರ, ಚಂದ್ರೇಶ್ವರ, ಸಿದ್ಧೇಶ್ವರ–ಈ ಶಿವಲಿಂಗಗಳನ್ನು ಅರ್ಚಿಸಿದನು. ॥೪-೫॥

ಮತ್ತು ಘಂಟಾಕರ್ಣೇಶ್ವರ, ನಾರದೇಶ್ವರ, ಯಮೇಶ್ವರ, ಪುಲಸ್ತ್ಯೇಶ್ವರ, ವಿಕರ್ಣೇಶ್ವರ, ಫಲೀಶ್ವರ, ಕದ್ರುದ್ರೇಶ್ವರ, ಅಖಂಡೇಶ್ವರ, ಕೇತುಮಾಲೇಶ್ವರ, ಗಭಸ್ತಿಕೇಶ್ವರ, ನಂದಿಕೇಶ್ವರ, ರಾಮೇಶಲಿಂಗ, ಕರಮರ್ದೇಶ್ವರ, ಆವರ್ದಕೇಶ್ವರ ಮತಂಗೇಶ್ವರ, ನಾಸಿಕೇಶ್ವರ, ದ್ರುತೀಶ್ವರ–ಮೊದಲಾದ ಶಿವಲಿಂಗಗಳನ್ನು ಭಕ್ತಿಯಿಂದ ಆ ಸುದರ್ಶನನು ಹರಿಯ ಉಪದೇಶದಂತರ್ಚಿಸಿದನು. ॥೬-೭-೮॥

ಸೂರ್ಯೇಶ, ಅರ್ಯಮೇಶ್ವರ, ಸೃಣೀಶ, ಗಾಲವೇಶ್ವರ, ಕಣ್ವೇಶ್ವರ, ಕಾತ್ಯಾಯನೇಶ್ವರ, ಚಂದ್ರಚೂಡೇಶ್ವರ, ಉದಾವರ್ತೇಶ್ವತ, ತೃಣಜ್ಯೋತೀಶ್ವರ, ಕೊಂಕಣೇಶ್ವರ, ಜ್ಞಾನೇಶ್ವರ, ಮಂಕಣೇಶ್ವರ, ಸ್ಕಂದೇಶ್ವರ, ಗಣಪೇಶ್ವರ, ತಾರಕೇಶ್ವರ, ಜಂಬುಕೇಶ್ವರ, ನಂದೀಶ್ವರ.-ಮೊದಲಾದ ಶಿವಲಿಂಗಗಳನ್ನು ಆ

ಜಂಬುಕೇಶಂ ಚ ಜ್ಞಾನೇಶಂ ನಂದೀಶಂ ಗಣಪೇಶ್ವರಂ ।
ಏತಾನ್ಯಂತರ್ಗೃಹೇ ವಿಪ್ರೋಽಪೂಜಯತ್ಪರಯಾ ಮುದಾ ॥೧೧॥

ಧುಂಢ್ಯಾಧಿಗಣಪಾಂಶ್ಚೈವ ಭೈರವಂ ಚಾಪಿ ನಿತ್ಯಶಃ ।
ಅನ್ನಪೂರ್ಣಾಮನ್ನದಾತ್ರೀಂ ಸಾಕ್ಷಾಲ್ಲೋಕೈಕಮಾತರಂ ॥೧೨॥

ದಂಡಪಾಣಿಂ ಕ್ಷೇತ್ರಪಾಲಂ ಸಮ್ಯಗಭ್ಯರ್ಚ್ಯ ತಸ್ಥಿವಾನ್ ।
ತೀರ್ಥಾನ್ಯನ್ಯಾನ್ಯಪಿ ಮುನಿರ್ಮಣಿಕರ್ಣ್ಯಾದಿಸತ್ತಮಃ ॥೧೩॥

ಜ್ಞಾನೋದಂ ಸಿದ್ಧಕೂಪಂ ಚ ವೃದ್ಧಕೂಪಂ ಪಿಶಾಚಕಂ ।
ಋಣಮೋಚನಸಂಜ್ಞಂ ಚ ಗರ್ಗತೀರ್ಥಂ ಮಹತ್ತರಂ ॥೧೪॥

ಸ್ನಾತ್ವಾ ಚ ನಿಯತಂ ವಿಪ್ರೋ ನಿತ್ಯಂ ಪಾಂಚನದೇ ಹ್ರದೇ ।
ಕಿರಣಾಧೂತಪಾಪಾಂ ಚ ಪಂಚಗಂಗಾಮಪಿ ದ್ವಿಜಃ ॥೧೫॥

ಗಂಗಾಂ ಮನೋರಮಾಂ ತುಂಗಾಂ ಸರ್ವಪಾಪಪ್ರಣಾಶಿನೀಂ ।
ಮುಕ್ತಿಮಂಡಪಮಾಸ್ಥಾಯ ಸಂಜಪನ್ ಶತರುದ್ರಿಯಂ ॥೧೬॥

---

ಸುದರ್ಶನನು ಅಂತರ್ಗೃಹದಲ್ಲಿ ಹರಿಯ ಉಪದೇಶದಂತೆ ಬಿಲ್ವಪತ್ರಾದಿಗಳಿಂದ ಪೂಜಿಸಿದನು. ॥೯-೧೦-೧೧॥

ಮತ್ತು ಧುಂಢಿರಾಜಾದಿ ಗಣನಾಯಕರನ್ನೂ ಭೈರವನನ್ನೂ ಅನ್ನದಾತ್ರಿಯಾದ ಅನ್ನಪೂರ್ಣೆಯನ್ನೂ ದಂಡಪಾಣಿಯಾದ ಕ್ಷೇತ್ರಪಾಲನನ್ನೂ ಚನ್ನಾಗಿ ಭಕ್ತಿಯಿಂದ ಪೂಜಿಸಿದನು. ॥೧೨॥

ಅಲ್ಲದೆ ಆ ಸುದರ್ಶನ ಮುನಿಯು ಜ್ಞಾನೋದತೀರ್ಥ, ಸಿದ್ಧಕೂಪ, ವೃದ್ಧಕೂಪ, ಪಿಶಾಚತೀರ್ಥ, ಋಣಮೋಚನತೀರ್ಥ, ಗಗನತೀರ್ಥ, ಪಂಚನದತೀರ್ಥ, ಕಿರಣಾನದಿ, ಧೂತಪಾಪಾನದಿ, ಪಂಚಗಂಗಾತೀರ್ಥ-ಮೊದಲಾದ ತೀರ್ಥಗಳಲ್ಲೂ ಸ್ನಾನಮಾಡಿ ಶಿವನನ್ನರ್ಚಿಸಿದನು. ॥೧೩-೧೪-೧೫॥

ಗಂಗಾನದಿ, ಮನೋಹರವಾದ ತುಂಗಾನದಿ, ಪಾಪನಾಶಿನೀನದಿ-ಇವುಗಳಲ್ಲೂ ಸ್ನಾನಮಾಡಿದನು. ಮುಕ್ತಿಮಂಟಪಕ್ಕೆ ಬಂದು ಶತರುದ್ರೀಯವನ್ನೂ ಸಾವಿರದೆಂಟು

ಅಷ್ಟೋತ್ತರಸಹಸ್ರಂ ವೈ ಜಪನ್ ಪಂಚಾಕ್ಷರಂ ದ್ವಿಜಃ ।
ಪಕ್ಷೇ ಪಕ್ಷೇ ತಥಾ ಕುರ್ವನ್ ಪಂಚಕ್ರೋಶಪ್ರದಕ್ಷಿಣಾಂ ॥೧೭॥

ಅಂತರ್ಗೃಹಾದ್ಬಹಿರ್ದೇಶೇ ಚಕಾರಾವಸಥಂ ತದಾ ।
ಏವಂ ಸಂವಸತಸ್ತಸ್ಯ ಕಾಲೋ ಭೂಯಾನವರ್ತತ ॥೧೮॥

ತತ್ರ ದೃಷ್ಟ್ವಾ ತಪೋನಿಷ್ಠಂ ಸುದರ್ಶನ ಸಮಾಹ್ವಯಂ ।
ವಿಷ್ಣುಸ್ತದೈವ ತಂ ವಿಪ್ರಮಾಹೂಯಾಥ ಶಿವಾರ್ಚಕಂ ॥೧೯॥

ಪುನಃ ಪ್ರಾಹ ಪ್ರಸನ್ನೇನ ಚೇತಸಾ ಮುನಿಸತ್ತಮಂ ॥೨೦॥

॥ ವಿಷ್ಣುರುವಾಚ ॥

ಭೋ ಸುದರ್ಶನ ವಿಪ್ರೇಂದ್ರ ಶಿವಾರ್ಚನಪರಾಯಣ ।
ಜ್ಞಾನಪಾತ್ರಂ ಭವಾನೇವ ವಿಶ್ವೇಶಕೃಪಯಾಽಧುನಾ ॥೨೧॥

ತ್ವಯಾ ತಪಾಂಸಿ ತಪ್ತಾನಿ ಇಷ್ಟಾಯಜ್ಞಾಃ ತ್ವಯೈವ ಹಿ ।
ಅಧೀತಾಶ್ಚ ತ್ವಯಾವೇದಾಃ ಕಾಶ್ಯಾಂ ವಾಸೋ ಯತಸ್ತವ ॥೨೨॥

---

ಶಿವಪಂಚಾಕ್ಷರ ಜಪವನ್ನೂ, ಪ್ರತಿಪಕ್ಷದಲ್ಲೂ ಐದು ಹರಿದಾರಿ ಪ್ರದಕ್ಷಿಣೆಯನ್ನೂ ಮಾಡಿದನು ಅಂತರ್ಗೃಹದಿಂದ ಹೊರಗೆ ವಾಸಮಾಡತೊಡಗಿದನು, ಹೀಗೆ ಆ ಸುದರ್ಶನನು ಆಚರಿಸುತ್ತಿರಲು ಬಹು ಕಾಲವು ಕಳೆಯಿತು. ॥೧೬-೧೭-೧೮॥

ಹೀಗೆ ತಪೋನಿಷ್ಠನಾದ ಆ ಸುದರ್ಶನನ್ನು ನೋಡಿ ವಿಷ್ಣುವು ಸಂತಸಗೊಂಡು ಹತ್ತಿರಕ್ಕೆ ಕರೆದು ಹೀಗೆ ಹೇಳಿದನು. ॥೧೯-೨೦॥

ವಿಪ್ರೋತ್ತಮನಾದ ಮತ್ತು ಶಿವಪೂಜಾಪರಾಯಣನಾದ ಎಲೈ ಸುದರ್ಶನನೇ ಶಿವನ ಕೃಪೆಗೆ ಪಾತ್ರನಾದ ನೀನು ಜ್ಞಾನಕ್ಕೆ ಈಗ ಯೋಗ್ಯನಾಗಿರುವೆ. ॥೨೧॥

ಕಾಶಿಯಲ್ಲಿ ಶಿವನನ್ನಾರಾಧಿಸುತ್ತಾ ವಾಸಮಾಡುತ್ತಿರುವುದರಿಂದ ನೀನು ಎಲ್ಲ ಬಗೆಯ ತಪಸ್ಸುಗಳನ್ನೂ ಮಾಡಿದಂತಾಯಿತು. ಎಲ್ಲ ಯಾಗಗಳೂ ಮಾಡಿದಂತಾದುವು, ವೇದಗಳೆಲ್ಲ ಅಧ್ಯಯನ ಮಾಡಲ್ಪಟ್ಟುವು ಎಂದು ಭಾವಿಸು. ॥೨೨॥

ಬಹುಭಿರ್ಜನ್ಮಭಿರ್ಯೇನ ಕೃತಂ ಕ್ಷೇತ್ರೇ ಮಹತ್ತಪಃ ।
ತಸ್ಯೈವ ಸಿದ್ಧ್ಯತ್ಯಮಲಾ ಕಾಶೀಯಂ ಮುಕ್ತಿರಾಶಿಕಾ ॥೨೩॥

ತವ ಭಾಗ್ಯಸ್ಯ ನಾಂತೋಽಸ್ತಿ ಭಾಗ್ಯವಾನಸಿ ಹೇ ಮುನೇ ।
ಕಿಂ ಚೈಕಂ ತವ ವಕ್ಷ್ಯಾಮಿ ಹಿತಮಾತ್ಯಂತಿಕಂ ಶೃಣು ॥೨೪॥

ವಿಶ್ವೇಶಕೃಪಯಾ ತೇಽದ್ಯ ಮುಕ್ತಿರಂತೇ ಭವಿಷ್ಯತಿ ।
ರುದ್ರಾರ್ಥನಾಮಪುಣ್ಯಂ ಯನ್ನಾಮ್ನಾಂ ಸಾಹಸ್ರಮುತ್ತಮಂ ॥೨೫॥

ಉಪದೇಕ್ಷ್ಯಾಮಿ ತೇ ವಿಪ್ರ ನಾಮಸಾಹಸ್ರಮೀಶಿತುಃ ।
ತೇನಾರ್ಚಯೇಶಂ ವಿಶ್ವೇಶಂ ಬಿಲ್ವಪತ್ರೈರ್ಮನೋಹರೈಃ ॥೨೬॥

ವರ್ಷಮೇಕಂ ನಿರಾಹಾರೋ ವಿಶ್ವೇಶಂ ಪೂಜಯನ್ ಸದಾ ।
ಸಂವತ್ಸರಾಂತೇ ಮುಕ್ತಸ್ತ್ವಂ ಭವಿಷ್ಯಸಿ ನ ಸಂಶಯಃ ॥೨೭॥

---

ಬೇರೆ ಕ್ಷೇತ್ರಗಳಲ್ಲಿ ಸಾವಿರಾರು ಜನ್ಮಗಳಿಂದ ತಪಸ್ಸುಮಾಡಿ ಪಡೆಯು ವಂತಹ ಫಲವು ಈ ಪವಿತ್ರವಾದ ಕಾಶಿಯಲ್ಲಿ ಕೆಲವು ಕಾಲ ವಾಸಮಾಡುವುದ ರಿಂದಲೇ ಲಭಿಸುವುದು, ಆದರಿಂದ ಮುಕ್ತಿಯುಂಟಾಗುವುದು. ॥೨೩॥

ಎಲೈ ಸುದರ್ಶನನೇ, ನಿನ್ನ ಭಾಗ್ಯಕ್ಕೆ ಕೊನೆಯೇ ಇಲ್ಲ. ಒಳ್ಳೆಯ ಭಾಗ್ಯ ಶಾಲಿಯು ನೀನಾಗಿರುವೆ, ಅಲ್ಲದೆ ಹಿತಕರವಾದಂತಹ ಮತ್ತೊಂದು ವಿಷಯವನ್ನು ಹೇಳುವೆನು, ಗಮನವಿಟ್ಟು ಕೇಳು. ॥೨೪॥

ವಿಶ್ವನಾಥನ ಕೃಪೆಯಿಂದ ನಿನಗೆ ಕೊನೆಯಲ್ಲಿ ಮುಕ್ತಿಯು ಲಭಿಸುವುದು, ಅಲ್ಲಿಯವರೆಗೆ ಶತರುದ್ರೀಯವನ್ನೂ ಪಂಚಾಕ್ಷರ ಮಂತ್ರವನ್ನೂ ಜಪಿಸುವುದಲ್ಲದೇ ಶಿವಸಹಸ್ರನಾಮಗಳಿಂದ ಬಿಲ್ವಪತ್ರಾರ್ಚನೆಯನ್ನು ಮಾಡಬೇಕು, ಆ ಸಹಸ್ರನಾಮ ಗಳನ್ನು ನಿನಗೆ ಉಪದೇಶಿಸುವೆನು. ॥೨೫-೨೬॥

ಒಂದು ವರ್ಷ ಪೂರ್ತಿಯಾಗಿ ನೀನು ಆಹಾರವನ್ನು ಸೇವಿಸದೆ ಉಪವಾಸ ವಿದ್ದು ಶಿವನನ್ನರ್ಚಿಸಬೇಕು, ವರ್ಷದ ಕೊನೆಯಲ್ಲಿ ನೀನು ಮುಕ್ತನಾಗುವೆ, ಈ ವಿಷಯದಲ್ಲಿ ಸಂಶಯವಿಲ್ಲ. ॥೨೭॥

ತ್ವದ್ದೇಹಾಪಗಮೇ ಮಂತ್ರಂ ಪಂಚಾಕ್ಷರಮನುತ್ತಮಂ ।
ದದಾತಿ ದೇವೋ ವಿಶ್ವೇಶಸ್ತೇನ ಮುಕ್ತೋ ಭವಿಷ್ಯಸಿ ॥೨೮॥

ಶೈವೇಭ್ಯಸ್ಸತು ಜೀವೇಭ್ಯೋ ದದಾತೀಮಂ ಮಹಾಮನುಂ ॥೨೯॥

॥ ಸೂತ ಉವಾಚ ॥

ಇತಿ ವಿಷ್ಣುವಚಃ ಶ್ರುತ್ವಾ ಪ್ರಣಮ್ಯಾಹ ಹರಿಂತದಾ ।
ಸುದರ್ಶನೋ ಯಯಾಚೇತ್ಥಂ ನಾಮ್ನಾಂ ಸಾಹಸ್ರಮುತ್ತಮಂ॥೩೦॥

॥ ಸುದರ್ಶನ ಉವಾಚ ॥

ಭಗವನ್ ದೈತ್ಯಬೃಂದಘ್ನ ವಿಷ್ಣೋ ಜಿಷ್ಣೋ ನಮೋಸ್ತುತೇ ।
ಸಹಸ್ರನಾಮ್ನಾಂ ಯದ್ದಿವ್ಯಂ ವಿಶ್ವೇಶಸ್ಯಾಶು ತದ್ವದ ॥೩೧॥

ಯೇನ ಜಪ್ಯೇನ ದೇವೇಶಃ ಪೂಜಿತೋ ಬಿಲ್ವಪತ್ರಕೈಃ ।
ದದಾತಿ ಮೋಕ್ಷಸಾಮ್ರಾಜ್ಯಂ ದೇಹಾಂತೇ ತದ್ವದಾಶು ಮೇ ॥೩೨॥

---

ನಿನ್ನ ಮರಣ ಸಮಯದಲ್ಲಿ (ನಿನಗೆ ಜನ್ಮವಿಲ್ಲದಂತೆ ಆಗಿಸಲು) ವಿಶ್ವೇಶ್ವರನೇ ಪಂಚಾಕ್ಷರಮಂತ್ರವನ್ನುಪದೇಶಿಸುವನು. ಆದರಿಂದಲೇ ನೀನು ಮುಕ್ತನಾಗುವೆ. ॥೨೮॥

ಶಾಂಭವರಾದ ಜೀವರಿಗೆ ಶಂಕರನು ಈ ಶಿವಪಂಚಾಕ್ಷರ ಮಂತ್ರವನ್ನುಪದೇಶಿಸುವನು. ॥೨೯॥

ಹರಿಯ ಈ ಮಾತನ್ನು ಕೇಳಿ ಸುದರ್ಶನನು ನಮಸ್ಕರಿಸಿ ಹೀಗೆ ಶಿವಸಹಸ್ರನಾಮವನ್ನು ಹೇಳುವಂತೆ ಯಾಚಿಸಿದನು. ॥೩೦॥

ದೈತ್ಯಾರಿಯಾದ ಜಯಶಾಲಿಯಾದ ಓ ವಿಷ್ಣುವೇ ನಿನಗೆ ನಮಸ್ಕಾರವು. ವಿಶ್ವೇಶ್ವರ ದಿವ್ಯ ಸಹಸ್ರನಾಮಗಳನ್ನು ನನಗೆ ಹೇಳು. ॥೩೧॥

ಯಾವ ದಿವ್ಯನಾಮಗಳನ್ನು ಸಂಕೀರ್ತನಮಾಡಿ ಬಿಲ್ವಪತ್ರಗಳಿಂದರ್ಚಿಸಿದರೆ ಮಹಾದೇವನು ಮೋಕ್ಷಸಾಮ್ರಾಜ್ಯವನ್ನು ಕೊಡುವನೋ ಆ ನಾಮಗಳನ್ನು ದಯೆಯಿಂದ ಹೇಳು. ॥೩೨॥

ತದಾ ವಿಪ್ರವಚಃ ಶ್ರುತ್ವಾ ತಸ್ಮೈ ಚೋಪಾದಿಶತ್ಸ್ವಯಂ ।
ಸಹಸ್ರನಾಮ್ನಾಂ ದೇವಸ್ಯ ಹಿರಣ್ಯೇತ್ಯಾದಿ ಸತ್ತಮ ॥೩೩॥

ತೇನ ಸಂಪೂಜ್ಯ ವಿಶ್ವೇಶಂ ವರ್ಷಮೇಕಮತಂದ್ರಿತಃ ।
ಕೋಮಲಾರಕ್ತಬಿಲ್ವೈಶ್ಚ ಸ್ತೋತ್ರೇಣಾನೇನ ತುಷ್ಟುವೇ ॥೩೪॥

ಸುದರ್ಶನ ಉವಾಚ ॥

ಆಶೀವಿಷಾಂಗಪರಿಮಂಡಲಕಂಠಭಾಗ
ರಾಜತ್ಸುಸಾಗರಭವೋಗ್ರವಿಷೋರುಶೋಭ ।
ಫಾಲಸ್ಫುರಜ್ಜ್ವಲನದೀಪ್ತಿವಿದೀಪಿತಾಶಾ
ಶೋಕಾವಕಾಶ ತಪನಾಕ್ಷ ಮೃಗಾಂಕಮೌಳೇ ॥೩೫॥

ಕುಧ್ರೇಡ್‌ಜಾಯಾಪತಿಧೃತಾರ್ಧಶರೀರಶೋಭ
ಪಾಹ್ಯಾಶು ಶಾಸಿತಮಖಾಂಧಕ ದಕ್ಷಶತ್ರೋ ।
ಸುತ್ರಾಮವಜ್ರಕರದಂಡವಿಖಂಡಿತೋರು
ಪಕ್ಷಾದ್ಯಘಕ್ಷಿತಿಧರೋಧ್ವ್ರಶಯಾವ ಶಂಭೋ ॥೩೬॥

---

ಸುದರ್ಶನನ ಈ ಮಾತನ್ನು ಕೇಳಿ ಹರಿಯು ಅವನಿಗೆ ಮಹಾದೇವನ ಹಿರಣ್ಯಬಾಹವೇ ನಮಃ ಮೊದಲಾದ ದಿವ್ಯಸಹಸ್ರನಾಮಗಳನ್ನುಪದೇಶಿಸಿದನು.॥೩೩॥

ಆ ಸಹಸ್ರನಾಮಗಳಿಂದ ಶಿವನಿಗೆ ಕೋಮಲವಾದ ಬಿಲ್ವಪತ್ರೆಗಳನ್ನರ್ಪಿಸಿ ವಿಶ್ವೇಶನನ್ನು ಅರ್ಚಿಸಿ ಸುದರ್ಶನನನ್ನು ಈ ಸ್ತೋತ್ರದಿಂದ ಪ್ರಾರ್ಥನೆಮಾಡಿದನು. ॥೩೪॥

ಓ ಮಹಾದೇವನೇ, ನೀನು ಕ್ಷೀರಸಾಗರದಲ್ಲಿ ಜನಿಸಿದ ಹಾಲಾಹಲವಿಷವನ್ನು ಧರಿಸಿದ ನೀಲಕಂಠನು, ನಿನ್ನ ಹಣೆಯ ಉರಿಗಣ್ಣಿನ ಜ್ವಾಲೆಯಿಂದ ದಿಕ್ಕುಗಳು ಬೆಳಗುತ್ತಿವೆ. ಆದರೂ ಶಾಂತಮೂರ್ತಿಯು ನೀನು, ಸೂರ್ಯನೇ ನಿನ್ನ ಕಣ್ಣು, ಚಂದ್ರನು ನಿನ್ನ ಶಿರಸ್ಸಿನಲ್ಲಿರುವನು. ಇಂತಹ ಮಹಾಮಹಿಮನಾದ ನಿನಗೆ ನಮಸ್ಕಾರವು. ॥೩೫॥

ಗಿರಿಜೆಯಿಂದ ಅಪಹರಿಸಲ್ಪಟ್ಟ ಅರ್ಧಶರೀರವುಳ್ಳ, ಹಿಮಗಿರಿಯಿಂದ ಪೂಜಿತನಾದ ಅಂಧಕಾಸುರ ದಕ್ಷಬ್ರಹ್ಮರನ್ನು ಶಿಕ್ಷಿಸಿದ ಇಂದ್ರನ ಕೈಯನ್ನು ವಜ್ರದೊಡನೆ ಬಂಧಿಸಿದ, ಓ ಮಹಾದೇವನೇ ನಮ್ಮನ್ನು ರಕ್ಷಿಸು. ॥೩೬॥

ಉತ್ಫುಲ್ಲಹಲ್ಲಕಲಸತ್ಕರವೀರಮಾಲಾ
ಭ್ರಾಜತ್ಸುಕಂಧರಶರೀರ ಪಿನಾಕಪಾಣೇ ।
ಚಂಚತ್ಸುಚಂದ್ರಕಲಿಕೋತ್ತಮಚಾರುಮೌಳಿಂ
ಲಿಂಗೇ ಕುಲುಂಚಪತಿಮಂಬಿಕಯಾ ಸಮೇತಂ ॥೩೭॥

ಛಾಯಾಧವಾನುವಿಲಸಚ್ಛದನೈಃ ಪರಿಪೂಜ್ಯ ಭಕ್ತ್ಯಾ
ಮುಕ್ತೇನ ಸ್ವಸ್ಯ ಚ ವಿರಾಜಿತವಂಶಕೋಟ್ಯಾ ।
ಸಾಯಂ ಸಂಗವಪುಂಗವೋರುವಹನ ಶ್ರೀತುಂಗಲಿಂಗಾರ್ಚಕಃ
ಶಾಂಗಃ ಪಾತಕಸಂಗಭಂಗಚತುರಶ್ಚಾಸಂಗನಿತ್ಯಾಂತರಃ ॥೩೮॥

ಫಾಲಾಕ್ಷಸ್ಫುರದಕ್ಷಿಜಸ್ಫುರದುರುಸ್ಫುಲಿಂಗದಗ್ಧಾಂಗಕಾ ।
ನಂಗೋತ್ತುಂಗಮತಂಗಕೃತ್ತಿವಸನಂ ಲಿಂಗಂ ಭಜೇ ಶಾಂಕರಂ ॥೩೯॥

ಅಚ್ಛಚ್ಛಾಗವಪಾಂ ವಿಹಾಯ ಸುರತಾಮಿಕ್ಷಾಶಿನಾಂತೇ ವಿಭೋ
ವೃಕ್ಯಂ ಶಾಂಕರವಾಹನಾಸನಿರತಾಃ ಸೋಮಂ ತಥಾ ವಾಜಿನಾಂ ।
ತ್ಯಕ್ತ್ವಾ ಜನ್ಮವಿನಾಶದಂ ತ್ರಿತಿಮುಹುಸ್ತೇ ಜಿಹ್ವಯಾ ಸತ್ತಮಾಃ
ಯೇ ಶಂಭೋಸ್ಸಕೃದೇವ ನಾಮನಿರತಾಃ ಶಾಂಗಾಃ ಸ್ವತಃ ಪಾವನಾಃ ॥೪೦॥

---

ನೀಲಕಂಠದಲ್ಲಿ ಅರಳಿದ ಕಲ್ಹಾರ ಮತ್ತು ಕರವೀರಮಾಲೆಯನ್ನು ಧರಿಸಿರುವ, ಚಂದ್ರಶೇಖರನಾದ, ಗಿರಿಜಾಸಮೇತನಾದ, ಪಿನಾಕಪಾಣಿಯಾದ, ಕಳ್ಳರಿಗೂ ಒಡೆಯನಾದ, ಶಂಕರನಿಗೆ ನಮಸ್ಕರಿಸುವೆನು. ॥೩೭॥

ವೃಷಭವಾಹನನಾದ ಪರಶಿವನ ಮಹಾಲಿಂಗವನ್ನು ಭಕ್ತಿಯಿಂದ ಅರ್ಚಿಸುವ ಭಕ್ತನ ವಂಶಕೋಟಿಯು ಪುನೀತವಾಗುವುದಲ್ಲದೇ ಆತನ ಪಾಪಗಳೆಲ್ಲವೂ ನಾಶವಾಗುವುವು. ಸೂರ್ಯನಿಂದ ಅರಳುವ ಕಮಲಗಳ ಪೂಜೆಯಿಂದ ಪರಶಿವನು ಮುಕ್ತಿಪ್ರದನಾಗುವನಲ್ಲವೆ? ॥೩೮॥

ಹಣೆಯ ಉರಿಗಣ್ಣಿನ ಮಹಾಜ್ವಾಲೆಯಿಂದ ಮನ್ಮಥನನ್ನು ದಹಿಸಿರುವ ಗಜಚರ್ಮಧಾರಿಯಾದ ಶಿವನ ದಿವ್ಯಲಿಂಗವನ್ನು ಸದಾ ಸೇವಿಸುವೆನು. ॥೩೯॥

ಯಾಗದಲ್ಲಿ ಅರ್ಪಿಸುವ ಆಡಿನ ವಪೆಯನ್ನೂ ಅದರಿಂದ ಲಭಿಸುವ ದೇವತ್ವವನ್ನೂ ಬಿಟ್ಟು ಯಾರು ಮಹಾದೇವನ ದಿವ್ಯನಾಮಗಳನ್ನು ಭಜಿಸುವರೋ ಅಂತಹ ಶಿವಭಕ್ತರೇ ಪವಿತ್ರರು, ಧನ್ಯರು, ಪೂಜ್ಯರು. ಇದರ ಮುಂದೆ ಸೋಮಯಾಗ, ಅಶ್ವಮೇಧಯಾಗ ಇವು ವ್ಯರ್ಥ. ॥೪೦॥

ಮೃಗಾಂಕಮೌಳಿಮೀಶ್ವರಂ ಮೃಗೇಂದ್ರಶತ್ರುಜತ್ವಚಂ ವಸಾನಮಿಂದು।
ಸಪ್ರಭಂ ಮೃಗಾಢ್ಯಬಾಲಸತ್ಕರಂ ಭಜೇ ಮೃಗೇಂದ್ರಸಪ್ರಭಂ ॥೪೧॥

॥ ಸೂತ ಉವಾಚ ॥

ಏವಂ ಸ್ತುವಂತಂ ವಿಶ್ವೇಶಂ ಸುದರ್ಶನಮುತಂದ್ರಿತಂ।
ಪ್ರಾಹೇತ್ಥಂ ಶೌರಿರಾಭಾಷ್ಯ ಶಂಭೋರ್ಭಕ್ತಿವಿವರ್ಧನಃ ॥೪೨॥

॥ ವಿಷ್ಣುರುವಾಚ ॥

ಅತ್ರೈವಾಮರಣಂ ವಿಪ್ರ ವಸತ್ವಂ ನಿಯತಾಶನಃ।
ನಾಮ್ನಾಂ ಸಹಸ್ರಂ ಪ್ರಜಪನ್ ಶತರುದ್ರೀಯಮೇವ ಚ ॥೪೩॥

ಅಂತರ್ಗೇಹಾದ್ಬಹಿಃ ಸ್ಥಿತ್ವಾ ಪೂಜಯಾಶು ಮಹೇಶ್ವರಂ।
ತವಾಂತೇ ಭೂರಿಕರುಣೋ ಮೋಕ್ಷಂ ದಾಸ್ಯತ್ಯಸಂಶಯಃ ॥೪೪॥

ಸಪ್ರಣಮ್ಯಾಹ ವಿಶ್ವೇಶಂ ದೃಷ್ಟ್ವಾ ಭಕ್ತ್ಯಾ ಸುದರ್ಶನಂ ॥೪೫॥

---

ಚಂದ್ರಶೇಖರನಾದ, ಗಜಚರ್ಮಧಾರಿಯಾದ, ಚಂದ್ರಧವಳನಾದ, ಕೈಯಲ್ಲಿ ಬಾಲಮೃಗವನ್ನು ಧರಿಸಿರುವ ಸಿಂಹಸದೃಶನಿಂದ ಮಹಾದೇವನನ್ನು ಭಜಿಸುವೆನು." ॥೪೧॥

ಹೀಗೆ ವಿಶ್ವನಾಥನನ್ನು ಭಕ್ತಿಯಿಂದ ಸ್ತುತಿಸುವ ಆ ಸುದರ್ಶನನನ್ನು ನೋಡಿ ಹರಿಯು ಹೀಗೆ ಹೇಳಿದನು. ॥೪೨॥

ಸುದರ್ಶನ, ನೀನು ಇಲ್ಲಿಯೇ ನಿಯತಾಹಾರನಾಗಿ ಈ ಶಿವಸಹಸ್ರನಾಮವನ್ನು ಜಪಿಸುತ್ತಾ ಶತರುದ್ರೀಯವನ್ನೂ ಪಠಿಸುತ್ತಾ ಮರಣಪರ್ಯಂತವಾಗಿ ಈ ಕಾಶೀಕ್ಷೇತ್ರದಲ್ಲಿಯೇ ಇರು. ॥೪೩॥

ಅಂತರ್ಗೇಹದಿಂದ ಹೊರಬಂದು ಮಹೇಶ್ವರನನ್ನರ್ಚಿಸು, ಅದರಿಂದ ಕೊನೆಯಲ್ಲಿ ಕರುಣಾನಿಧಿಯಾದ ಈಶ್ವರನು ನಿನಗೆ ಮುಕ್ತಿಯನ್ನು ಅನುಗ್ರಹಿಸುವನು. ॥೪೪॥

ಪುನಃ ಆ ಹರಿಯು ಶಿವನಿಗೆ ನಮಸ್ಕರಿಸಿ ಸುದರ್ಶನನ್ನು ಕುರಿತು ಹೀಗೆ ಹೇಳಿದನು. ॥೪೫॥

ಧನ್ಯಸ್ತ್ವಂ ಲಿಂಗಸಂಗೇತ್ಯನುದಿನಗಲಿತಸ್ವಾಂತರಂಗಾಘಸಂಘಃ
ಪುಂಸಾಂ ವರ್ಯಾದ್ಯಭಕ್ತ್ಯಾ ಯಮನಿಯಮವರ್ಯೈರ್ವಿಶ್ವವಂದ್ಯಂ ಪ್ರಭಾತೇ ।
ದತ್ವಾ ಬಿಲ್ವದಳಂ ಸದಂಬುಜವರಂ ಕಿಂಚಿಜ್ಜಲಂ ವಾ ಮುಹುಃ
ಪ್ರಾಪ್ನೋತೀಶ್ವರಪಾದಪಂಕಜಮುಮಾನಾಥಾದ್ಯ ಮುಕ್ತಿಪ್ರದಂ ॥೪೬॥

ಕೋ ವಾ ತ್ವತ್ಸದೃಶೋ ಭವೇದಗಪತಿಪ್ರೇಮ್ಣೈಕಲಿಂಗಾರ್ಚಕಃ
ಮುಕ್ತೀನಾಂ ಪ್ರವರೋರ್ವರಾವಿಲಸಿತಶ್ರೀಭಕ್ತಿಬೀಜಾಂಕುರೈಃ ।
ದೇವಾ ವಾಪ್ಯಸುರಾ ನರಾ ಮುನಿವರಾ ಭಾರಾಭುವಃ ಶ್ರೀಕರಾಃ
ವೀರಾ ವಾ ಕರವೀರ ಪುಷ್ಪವಿಲಸನ್ಮಾಲಾಪ್ರದೇ ನೋ ಸಮಃ ॥೪೭॥

ವನೇ ವಾ ರಾಜ್ಯೇ ವಾಪ್ಯಗಪತಿಸುತಾನಾಯಕಮುಹಾ
ಸ್ಫುರಲ್ಲಿಂಗಾರ್ಚಾಯಾಂ ನಿಯತಯತಭಾವೇನ ಮನಸಾ ।
ಹರಂ ಭಕ್ತ್ಯಾಽಽರಾಧ್ಯ ತ್ರಿಭುವನತೃಣಾಡಂಬರವರ
ಪ್ರರೂಢೈರ್ಭಾಗ್ಯೈರ್ವಾ ನಹಿ ಖಲು ಸಸಜ್ಜೇತ ಭುವನೇ ॥೪೮॥

---

ಎಲೈ ಸುದರ್ಶನ, ಪ್ರತಿದಿನವೂ ಜಗದ್ವಂದ್ಯನಾದ ಶಿವನನ್ನು ಭಕ್ತಿಯಿಂದ ಸೇವಿಸುವ ನೀನು ಧನ್ಯನು, ನಿನ್ನ ಹಾಗೆ ಯಾರು ಪ್ರಾತಃಕಾಲದಲ್ಲಿ ಜಿತೇಂದ್ರಿಯರಾಗಿ, ನಿಯಮಬದ್ಧರಾಗಿ ಬಿಲ್ವದಳಗಳಿಂದಲೂ ಕಮಲಗಳಿಂದಲೂ ಮಹಾದೇವನನ್ನು ಅರ್ಚಿಸುವರೋ ಅವರೂ ಮುಕ್ತಿಗೆ ಪಾತ್ರರಾಗುವರು. ॥೪೬॥

ಪರಮೇಶ್ವರನ ಶಿವಲಿಂಗವನ್ನರ್ಚಿಸುವ ನಿನಗೆ ಸಮನಾರು? ಹಾಗೆ ಅರ್ಚಿಸಿ, ಮುಕ್ತಿಗೆ ಪಾತ್ರನಾದ ನಿನಗೆ ದೇವತೆಗಳಲ್ಲಾಗಲೀ ಮಾನವರಲ್ಲಾಗಲೀ ಯಾರೂ ಸಮರಿಲ್ಲ. ಎಲ್ಲರೂ ಕೇವಲ ಭೂಮಿಗೆ ಭಾರವಾಗಿರುವರು. ದೃಢಭಕ್ತಿಯಿಂದ ಕರವೀರಪುಷ್ಪಮಾಲೆಯನ್ನು ಅರ್ಪಿಸಿದವರಿಗೂ ಅವರು ಸಮವೆನಿಸಲಾರರು. ॥೪೭॥

ಕಾಡಿನಲ್ಲಾಗಲೀ ಅರಮನೆಯಲ್ಲಾಗಲೀ, ಗಿರಿಜಾಪತಿಯಾದ ಪರಶಿವನನ್ನು ಸ್ಥಿರಭಾವದಿಂದ ಭಕ್ತಿಯಿಂದ ಅರ್ಚಿಸುವ ಮಾನವನಿಗೆ ಈ ಪ್ರಪಂಚದ ಅಸ್ಥಿರವಾದ ಐಶ್ವರ್ಯಗಳಲ್ಲಿ ಆಸೆಯೇ ಹೋಗುವುದು. ॥೪೮॥

ನದಾನೈರ್ಯೋಗೈರ್ವಾ ವಿಧಿವಿಹಿತವರ್ಣಾಶ್ರಮಭರೈಃ
ಅಪಾರೈರ್ವೇದಾಂತಪ್ರತಿವಚನವಾಕ್ಯಾನುಸರಣಃ ।
ನ ಮನ್ಯೇಹಂ ಸ್ವಾಂತೇ ಭವಭಜನಭಾವೇನ ಮನಸಾ
ಮುಹುರ್ಲಿಂಗಂ ಶಾಂಗಂ ಭಜತಿ ಪರಮಾನಂದಕುಹರಃ ॥೪೯॥

ಶರ್ವಂ ಪರ್ವತನಂದಿನೀಪತಿಮಹಾನಂದಾಂಬುಧೇಃ ಪಾರಗಾ
ರಾಗೇತ್ಯಾಗಹೃದಾ ವಿರಾಗಪರಮಾ ಭಸ್ಮಾಂಗರಾಗಾದರಾಃ ।
ಮಾರಾಪಾರಶರಾಭಿಘಾತರಹಿತಾ ಧೀರೋರುಧಾರಾರಸೈಃ
ಪಾರಾವಾರಮಹಾಘಸಂಸೃತಿಭರಂ ತೀರ್ಣಾಃ ಶಿವಾಭ್ಯರ್ಚನಾತ್ ॥೫೦॥

ಮಾರ್ಕಂಡೇಯಸುತಂ ಪುರಾಂತಿಕಭಯಾದ್ಯೋಽರಕ್ಷದೀಶೋ ಹರಃ
ತತ್ಪಾದಾಬ್ಜಪರಾಗರಂಜಿತಮನಾ ಪ್ರಾಪ್ನೋತಿ ಕಿಂ ವಾ ಫಲಂ ।
ತಂ ಮೃತ್ಯುಂಜಯಮಂಜಸಾ ಪ್ರಣಮತಾಂ ಮೋಜೋತಿಮಧ್ಯೇಜಯಂ
ಜೇತಾ ನೇತ್ಯಪರಾಜಿತೋ ಜನಿಜರಾರಾಗೈರ್ವಿಮುಕ್ತಿಂ ಲಭೇತ್ ॥೫೧॥

---

ದಾನಯೋಗಗಳಿಂದಲಾಗಲೀ ವಿಧಿವತ್ತಾದ ವರ್ಣಾಶ್ರಮಗಳ ಆಚಾರಗಳಿಂದಲಾಗಲೀ, ಒಣವೇದಾಂತಗಳಿಂದಲಾಗಲೀ ಎಂದಿಗೂ ಮುಕ್ತಿಯು ದೊರೆಯಲಾರದು. ಭಕ್ತಿಯಿಂದ ಪರಶಿವನ ದಿವ್ಯ ಲಿಂಗವನ್ನರ್ಚಿಸುವವನಿಗೆ ಮುಕ್ತಿಯು ಕರಗತವಾಗಿ ಪರಮಾನಂದವು ಲಭಿಸುವುದು. ॥೪೯॥

ಪಾರ್ವತಿಯ ಪ್ರಿಯಪತಿಯಾದ ಪರಮೇಶ್ವರನನ್ನು ನಿರ್ಮಲಹೃದಯರಾದ ಭಸ್ಮರುದ್ರಾಕ್ಷಿಧಾರಿಗಳಾದ, ಮನ್ಮಥನಿಗೆ ವಶರಾಗದ, ಮಹಾಭಕ್ತರು ಅರ್ಚಿಸಿ ಈ ಅಗಾಧವಾದ ಸಂಸಾರಸಾಗರವನ್ನು ದಾಟುವರು. ॥೫೦॥

ಹಿಂದೆ ಯಮನಭಯದಿಂದ ಮೃಕಂಡುವಿನ ಮಗನಾದ ಮಾರ್ಕಂಡೇಯನನ್ನು ರಕ್ಷಿಸಿದ, ಮೃತ್ಯುಂಜಯನಾದ, ಭಕ್ತರಿಗೆ ಜಯವನ್ನುಂಟುಮಾಡುವ ಪರಮೇಶ್ವರನನ್ನು ಭಜಿಸಿದರೆ ಜನನ ವೃದ್ಧಾಪ್ಯಮರಣಗಳಿಂದ ತಪ್ಪಿಸಿಕೊಂಡು ಮುಕ್ತಿಯನ್ನು ಪಡೆಯಬಹುದು, ಇದರಲ್ಲಿ ಸಂಶಯವಿಲ್ಲ. ॥೫೧॥

ಭೂತಾಯಾಂ ಭೂತನಾಥಂ ತ್ವಘಪತಿತಿಲಕಾಕಾರಭಿಲ್ಲೋಽಥಭಲ್ಲೈಃ
ಧಾವನ್ ಭಲ್ಲಕಪೃಷ್ಠೇ ನಿಶಿಕಿಲ ಸುಮಹಾವ್ಯಾಘ್ರಭೀತ್ಯಾರುರೋಹ ।
ಬಿಲ್ವಂ ನಲ್ವಪ್ರಭಂ ತಚ್ಛದಘನಮಸಕೃತ್ಪಾತಯಾಮಾಸ ಮೂಲೇ
ನಿದ್ರಾತಂದ್ರೋಜ್ಝಿತೋಽಸೌ ಮೃಗಗಣಕಲನೇ ಮೂಲಲಿಂಗೇಽಥ ಶಾಂಗೇ ॥೩೨॥

ತೇನಾಭೂದ್ಭಗವದ್ಗಣೋತ್ತಮವರೋಽಮುಕ್ತಾಘಸಂಘಸ್ತದಾ
ಚಂಡಾಂಶೋಸ್ತನಯೇನ ಪೂಜಿತಪದಃ ಸಾರೂಪ್ಯಮಾಪೇಶಿತುಃ ।
ಗಂಗಾಚಂದ್ರಕಲಾಕಪರ್ದವಿಲಸತ್ಫಾಲಸ್ಫುಲಿಂಗೋಜ್ವಲ
ದ್ಫಾಲನ್ಯಂಕುಕರಾಗ್ರಸಂಗತಮಹಾಶೂಲಾಹಿಕಂಠೋದ್ಯತಃ ॥೩೩॥

ಚೈತ್ರೇ ಚಿತ್ರೈಃ ಪತಾಕೈಃ ವಿಪ್ರಮುಕ್ತೋ
ವೈಶಾಖೇ ವೈ ದುಃಖಶಾಖಾವಿಮುಕ್ತಃ ।
ಜ್ಯೇಷ್ಠೇ ಶ್ರೇಷ್ಠೋ ಭವತೇಷಾಢಮಾಸಿ
ಪುತ್ರಪ್ರಾಪ್ತಿಃ ಶ್ರಾವಣೇ ಶ್ರಾಂತಿನಾಶಃ ॥೩೪॥

---

ಕೃಷ್ಣಚತುರ್ದಶೀ ತಿಥಿಯಲ್ಲಿ ಓರ್ವ ಬೇಡನು ಒಂದು ಕಾಡಿನಲ್ಲಿ ಹೋಗುತ್ತಿದ್ದನು, ಎದುರಿಗೆ ಒಂದು ಹೆಬ್ಬುಲಿಯು ಬಂದಿತು. ಹೆದರಿ ಆ ಬೇಡನು ಸಮೀಪದಲ್ಲಿದ್ದ ಮರವೊಂದನ್ನೇರಿ ಕುಳಿತನು. ಅದು ಬಿಲ್ವವೃಕ್ಷವಾಗಿತ್ತು. ಇವನು ಏರಿದುದರಿಂದ ಆ ಮರವು ಅಲುಗಾಡಿತು, ಕೆಲವು ಬಿಲ್ವಪತ್ರೆಗಳು ಕೆಳಗೆ ಬಿದ್ದುವು. ಆ ಬಿಲ್ವದ ಕೆಳಗೆ ಶಿವಲಿಂಗವಿದ್ದಿತು. ಈ ಘಟನೆಯಿಂದ ಶಿವಲಿಂಗಕ್ಕೆ ಬಿಲ್ವವನ್ನೇರಿಸಿದಂತಾಯಿತು. ಅಷ್ಟರಿಂದಲೇ ಪಾಪಿಷ್ಠನಾದರೂ ಆ ಬೇಡನು ಪರಿಶುದ್ಧನಾದನು. ಕೊನೆಯಲ್ಲಿ ಆತನು ಯಮನಿಂದ ಗೌರವಿಸಲ್ಪಟ್ಟು, ಚಂದ್ರಶೇಖರನಾದ, ಗಂಗಾಧರನಾದ, ಮೃಗಧರನಾದ, ಶೂಲಧಾರಿಯಾದ ನೀಲಕಂಠನಾದ ಶಿವನ ಸಾರೂಪ್ಯವನ್ನು ಹೊಂದಿದನು. ಬಿಲ್ವಪತ್ರದ ಮಹಿಮೆಯು ಅಂತಹುದು. ॥೩೨-೩೩॥

ಶಿವಲಿಂಗವನ್ನು ಪ್ರತಿಮಾಸಗಳಲ್ಲೂ ಅರ್ಚಿಸಬೇಕು, ಚೈತ್ರಮಾಸದಲ್ಲಿ ಅರ್ಚಿಸಿದರೆ ಚಿತ್ರ (ನಾನಾಬಗೆಯ) ಪಾಪಗಳೆಲ್ಲವೂ ನಾಶವಾಗುವುವು. ವೈಶಾಖದಲ್ಲಿ ದುಃಖಶಾಖೆಗಳೆಲ್ಲವೂ ನಾಶವಾಗುವುವು, ಜ್ಯೇಷ್ಠದಲ್ಲಿ ಪೂಜಿಸಿದರೆ ಶ್ರೇಷ್ಠನಾಗುವನು, ಆಷಾಢದಲ್ಲಿ ಪುತ್ರಪ್ರಾಪ್ತಿಯಾಗುವುದು. ಶ್ರಾವಣದಲ್ಲಿ ಆಯಾಸ ಪರಿಹಾರವಾಗು

ಭಾದ್ರೇ ಭದ್ರೋ ಭವತಿಚಾಶ್ವಿನೇ ವೈ
ಅಶ್ವಪ್ರಾಪ್ತಿಃ ಕಾರ್ತಿಕೇ ಕೀರ್ತಿಲಾಭಃ ।
ಮಾರ್ಗೇ ಮುಕ್ತೇರ್ಮಾರ್ಗಮೇತಲ್ಲಭೇತ
ಪುಷ್ಯೇ ಪುಣ್ಯಂ ಮಾಘಕೇ ಚಾಘನಾಶಃ ॥೫೫॥

ಫಲ್ಗುರಂಹೋ ಫಾಲ್ಗುನೇ ಮಾಸಿ ನಶ್ಯೇ
ದೀಶಾರ್ಚಾತೋ ಬಿಲ್ವಪತ್ರೈಃ ಶ್ಚ ಲಿಂಗೇ ।
ಏವಂ ತತ್ತನ್ಮಾಸಿ ಪೂಜ್ಯೇಶಲಿಂಗೇ
ಚಿತ್ರೈರ್ಪಾಪೈರ್ವಿಪ್ರಮುಕ್ತೋ ದ್ವಿಜೇಂದ್ರಃ ॥೫೬॥

ದೂರ್ವಾಂಕುರೈರಭಿನವೈಃ ಶಶಧಾಮಚೂಡ
ಲಿಂಗಾರ್ಚನೇನ ಪರಿಶೋಷಯದಂಕುರಾಣಿ ।
ಸಂಸಾರಘೋರತರುರೂಪಕರಾಣಿ ಸದ್ಯೋ
ಮುಕ್ತ್ಯಂಕುರಾಣಿ ಪರಿವರ್ಧಯತೀವ ಧನ್ಯಃ ॥೫೭॥

ಗೋಕ್ಷೀರೇಕ್ಷುಕ್ಷೌದ್ರಖಂಡಾಜ್ಯದಧ್ನಾ
ಸನ್ನಾರೇಳೈಃ ಪನಸಾಮ್ರಾದಿಸಾರೈಃ ।

---

ವುದು. ಭಾದ್ರಪದದಲ್ಲಿ ಭದ್ರ (ಮಂಗಳ)ವುಂಟಾಗುವುದು, ಆಶ್ವಯುಜಮಾಸದಲ್ಲಿ ಅಶ್ವಲಾಭ (ರಾಜ್ಯಲಾಭ)ವಾಗುವುದು. ಕಾರ್ತಿಕದಲ್ಲಿ ಕೀರ್ತಿಯು ಹೆಚ್ಚುವುದು, ಮಾರ್ಗಶಿರದಲ್ಲಿ ಪೂಜಿಸಿದರೆ ಮುಕ್ತಿಮಾರ್ಗವು ದೊರೆಯುವುದು, ಪುಷ್ಯದಲ್ಲಿ ಪುಣ್ಯಪ್ರಾಪ್ತಿಯೂ ಮಾಘದಲ್ಲಿ ಪಾಪನಾಶವೂ ಆಗುವುವು. ಫಾಲ್ಗುಣದಲ್ಲಿ ಶಿವಲಿಂಗವನ್ನರ್ಚಿಸಿದರೆ ಸಕಲ ಪಾಪಗಳೆಲ್ಲವೂ ಸಂಪೂರ್ಣವಾಗಿ ನಾಶವಾಗುವುವು. ॥೫೪-೫೫-೫೬॥

ಧನ್ಯನಾದ ಮಾನವನು ದೂರ್ವಾಂಕುರಗಳಿಂದ ಶಿವಲಿಂಗವನ್ನರ್ಚಿಸಿ ಸಂಸಾರವೆಂಬ ಘೋರವೃಕ್ಷವನ್ನು ಬೆಳೆಸುವ ಕರ್ಮಾಂಕುರವನ್ನು ನಾಶಮಾಡಿ ಕೊಳ್ಳುವನು. ಮತ್ತು ಮುಕ್ತಿಯೆಂಬ ಅಂಕುರವನ್ನು ಬೆಳೆಯಿಸುವನು. ಇದಲ್ಲವೆ ಆಶ್ಚರ್ಯ. ॥೫೭॥

ಹಸುವಿನ ಹಾಲು, ತುಪ್ಪ, ಮೊಸರು, ಸಕ್ಕರೆ, ಜೇನುತುಪ್ಪ- ಈ ಪಂಚಾಮೃತಗಳಿಂದಲೂ, ನಾರಿಕೇಳೋದಕ, ಗಂಧೋದಕಗಳಿಂದಲೂ ರತ್ನೋದಕಗಳಿಂದಲೂ

ವಿಶ್ವೇಶಾನಂ ಸತ್ಸಿತಾರತ್ನತೋಯೈಃ
ಗಂಧೋದ್ಯೈರ್ವಾ ಸಿಂಚ್ಯ ಪಾಪೈರ್ವಿಮುಕ್ತಃ ॥೫೮॥

ಲಿಂಗಂ ಚಂದನಲೇಪಸಂಗತಮುಮಾಕಾಂತಸ್ಯ ಪಶ್ಯಂತಿ ಯೇ
ತೇ ಸಂಸಾರಭುಜಂಗಭಂಗಪತನಾನಂಗಾಂಗಸಂಗೋಜ್ಝಿತಾಃ ।
ವ್ಯಂಗಂ ಸರ್ವಸಮರ್ಚನಂ ಭಗವತಃ ಸಾಂಗಂ ಭವೇಚ್ಛಾಂಕರಂ
ಶಂಗಾಪಾಂಗಕೃಪಾಕಟಾಕ್ಷಲಹರೀ ತಸ್ಮಿನ್ ಚಿರಂ ತಿಷ್ಠತಿ ॥೫೯॥

ಮುರಲಿಸರಲರಾಗೈರ್ಮರ್ದಲೈಸ್ತಾಲಶಂಖೈಃ
ಪಟುಪಟಹಜಿತಾಭ್ರಧ್ವಾಂತಸಂಧಾನಘೋಷೈಃ ।
ದುಂದುಭ್ಯಾಘಾತನಾದ್ಯೈರ್ವರಯುವತಿಮಹಾನೃತ್ತಸಂರಭರಂಗೈಃ
ದರ್ಶೇಷ್ವಾದರ್ಶದರ್ಶೇ ಭಗವತಿ ಗಿರಿಜಾನಾಯಕೇ ಮುಕ್ತಿಹೇತುಃ॥೬೦॥

ಸ್ವಚ್ಛಚ್ಛತ್ರಚ್ಛವೀನಾಂ ವಿವಿಜಿತಮಹಾಭಾಯಯಾ ಛನ್ನಮೈಶಂ
ಶೀರ್ಷಂ ವಿಚ್ಛಿನ್ನಪಾಪೋ ಭವತಿ ಭವಹರಃ ಪೂಜಕಃ ಶಂಭುಭಕ್ತ್ಯಾ ।

---

ಪವಿತ್ರ ಗಂಗೆಯ ಶುದ್ಧೋದಕಗಳಿಂದಲೂ ಶಿವಲಿಂಗವನ್ನಭಿಷೇಚಿಸುವವನು ಸಕಲ ಪಾಪಗಳಿಂದಲೂ ಬಿಡಲ್ಪಡುವನು. ॥೫೮॥

ಚಂದನದಿಂದ ಸುಂದರವಾಗಿ ಅಲಂಕೃತವಾದ ಶಿವನ ದಿವ್ಯಲಿಂಗವನ್ನು ದರ್ಶನಮಾಡಿದರೆ ಪಾಪಗಳೆಲ್ಲವೂ ನಾಶವಾಗಿ ಸಂಸಾರಸರ್ಪದ ಭಯವು ತೊಲಗುವುದು, ಪೂಜೆಯು ಸಂಪೂರ್ಣಫಲಪ್ರದವಾಗುವುದು, ಶಿವನ ಅನುಗ್ರಹವು ಚಿರಕಾಲ ಲಭಿಸುವುದು. ॥೫೯॥

ಅಮಾವಾಸ್ಯೆತಿಥಿಗಳಲ್ಲಿ ಶಿವನನ್ನು ಭಕ್ತಿಯಿಂದರ್ಚಿಸಿ ಕೊಳಲು ಮದ್ದಳೆ, ತಾಳ ಪಟಹನಗಾರಿಗಳನ್ನು ಬಾರಿಸುವುದು, ಸುಂದರಿಯರ ನರ್ತನ-ಇವುಗಳಿಂದ ಶಿವಾನುಗ್ರಹವು ಲಭಿಸಿ ಮುಕ್ತಿಯು ಲಭಿಸುವುದು. ॥೬೦॥

ಶಿವದೇವಾಲಯಕ್ಕೆ ಎತ್ತರವಾಗಿ ಕಟ್ಟಿರುವ ನಂದಿಪತಾಕೆಗಳಿಂದಲೂ, ಬೀಸುವ ಚಿನ್ನದ ಹಿಡಿಗಳ ಪತಾಕಗಳಿಂದಲೂ, ನಿಬಿಡವಾದ ನೆರಳಿನ ಶ್ವೇತಚ್ಛತ್ರಿ

ಚಂಚಚ್ಚಂದ್ರಾಭಕಾಂಡಪ್ರವಿಲಸದಮಲಸ್ವರ್ಣರತ್ನಾಗ್ರಭಾಭಿಃ
ದೀಪ್ಯಚ್ಚಾಮರಕೋಟಿಭಿಃ ಸ್ಫುಟಪಟಘಟಿತೈಶ್ಚಾಕಚಕ್ಕೈಃ ಪತಾಕೈಃ॥೬೧॥

ಸಂಪಶ್ಯಾರುಣಭೂರುಹೋತ್ತಮಶಿಖಾಸಂಲೇಢಿತಾರಾಗಣಂ
ತಾರಾನಾಥಕಲಾಧರೋರುಸುಮಹಾಲಿಂಗಾಘಸಂಸೇವಿತಂ ।
ಬಿಲ್ವಾನಾಂ ಕುಲಮೇತದತ್ರ ಸುಮಹಾಪಾಪೌಘಸಂಹಾರಕೃತ್
ದ್ವಾರಾಣಾಂ ನಿಖಿಲಪ್ರಮೋದಜನಕಂ ಶಂಭೋಃ ಪ್ರಿಯಂಕೇವಲಂ ॥೬೨॥

ಅನ್ನಂಪ್ರೋತ್ರಿಮಲಾಯತೇ ಘನರಸಂ ವಾಲೇಯಮೂತ್ರಾಯತೇ
ಸಂವೇಶೋ ನಿಗಲಾಯತೇ ಮಮ ಸದಾನಂದೋಪಿ ಕಂದಾಯತೇ ।
ಶಂಭೋ ತೇ ಸ್ಮರಣಾಂತರಾಯರಹಿತಃ ಪ್ರಾಣಾಃ ಕೃಪಾಣಾಯತೇ
ಕಃ ಕಲ್ಪದ್ರುಮುಪೇಕ್ಷ್ಯ ಚಿತ್ತಫಲದಂ ತೂಲಾದಿದಾನಕ್ಷಮಂ ॥೬೩॥

ಬಬರ್ೂರಂ ಪರಿಸೇವತೇ ಕ್ಷುದಧಿಕೋ ವಾತೂಲದಾನಕ್ಷಮಂ
ತದ್ವಚ್ಛಂಕರಕಿಂಕರೋ ವಿಧಿಹರಬ್ರಹ್ಮೇಂದ್ರಚಂದ್ರಾನಲಾನ್
ಸೇವೇದ್ಯೋ .ವಿಧಿವಂಚಿತಃ ಕಲಿಬಲಪ್ರಾಚುರ್ಯತೋ ಮೂಢಧೀಃ ॥೬೪॥

---

ಯಿಂದಲೂ ಓಲೈಸಿಕೊಳ್ಳುವ ಶಿವನನ್ನು ದರ್ಶನಮಾಡಿ ಅರ್ಚಿಸಿದರೆ ಪಾಪಗಳೆಲ್ಲವೂ ನಾಶವಾಗುವುವು. ॥೬೧॥

ಬಿಲ್ವದಳ ಮಹಿಮೆಯು ಅವರ್ಣನೀಯವಾದುದು. ತಾರೆಗಳಿಗೊಡೆಯನಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಚಂದ್ರಮೌಳಿಯ ದಿವ್ಯಲಿಂಗದ ಮೇಲೆ ಬಿಲ್ವ ಪತ್ರಗಳನ್ನೇರಿಸಿದರೆ ಪಾಪಗಳೆಲ್ಲವೂ ನಾಶವಾಗುವುವು. ಮುಕ್ತಿಯು ದೊರೆಯುವುದು. ಬಿಲ್ವಪತ್ರೆಯು ಶಿವನಿಗೆ ತುಂಬಾ ಪ್ರಿಯವಾದುದು. ॥೬೨॥

ಓ ಶಂಕರ, ಒಂದು ಕ್ಷಣವೂ ನಿನ್ನ ಸ್ಮರಣೆಯನ್ನು ಬಿಡಲಾರೆನು, ಹಾಗೆ ಬಿಟ್ಟರೆ ನನಗೆ ಅನ್ನವೇ ಸೇರದೆ ಅದು ಹಂದಿಯ ಮಲದಂತೆ ಕಾಣುವುದು, ಒಳ್ಳೆಯ ಪಾನವು ಕತ್ತೆಯ ಮೂತ್ರದಹಾಗೆ ಕಾಣುವುದು; ನಿದ್ರೆಯು ಬಂಧನವಾಗುವುದು. ಆನಂದವೂ ದುಃಖವಾಗುವುದು, ಪ್ರಾಣವೆಲ್ಲ ಕೃಪಾಣ (ಕತ್ತಿ)ವಾಗುವುದು, ನಿನ್ನ

ವಿಶ್ವೇಶಾನಂ ಸತ್ಸಿತಾರತ್ನತೋಯೈಃ
ಗಂಧೋದ್ಯೈರ್ವಾ ಸಿಂಚ್ಯ ಪಾಪೈರ್ವಿಮುಕ್ತಃ ॥೫೮॥

ಲಿಂಗಂ ಚಂದನಲೇಪಸಂಗತಮುಮಾಕಾಂತಸ್ಯ ಪಶ್ಯಂತಿ ಯೇ
ತೇ ಸಂಸಾರಭುಜಂಗಭಂಗಪತನಾನಂಗಾಂಗಸಂಗೋಜ್ಝಿತಾಃ ।
ವ್ಯಂಗಂ ಸರ್ವಸಮರ್ಚನಂ ಭಗವತಃ ಸಾಂಗಂ ಭವೇಚ್ಛಾಂಕರಂ
ಶಂಗಾಪಾಂಗಕೃಪಾಕಟಾಕ್ಷಲಹರೀ ತಸ್ಮಿನ್ ಚಿರಂ ತಿಷ್ಠತಿ ॥೫೯॥

ಮುರಲಿಸರಲರಾಗೈರ್ಮರ್ದಲೈಸ್ತಾಲಶಂಖೈಃ
ಪಟುಪಟಹಜಿತಾಭ್ರಧ್ವಾಂತಸಂಧಾನಘೋಷೈಃ ।
ದುಂದುಭ್ಯಾಘಾತನಾದೈರ್ವರಯುವತಿಮಹಾನೃತ್ತಸಂರಭರಂಗೈಃ
ದರ್ಶೇಷ್ವಾದರ್ಶದರ್ಶೋ ಭಗವತಿ ಗಿರಿಜಾನಾಯಕೇ ಮುಕ್ತಿಹೇತುಃ॥೬೦॥

ಸ್ವಚ್ಛಚ್ಛತ್ರಚ್ಛವೀನಾಂ ವಿವಿಜಿತಮಹಾಛಾಯಯಾ ಛನ್ನಮೈಶಂ
ಶೀರ್ಷಂ ವಿಚ್ಛಿನ್ನಪಾಪೋ ಭವತಿ ಭವಹರಃ ಪೂಜಕಃ ಶಂಭುಭಕ್ತ್ಯಾ ।

---

ಪವಿತ್ರ ಗಂಗೆಯ ಶುದ್ಧೋದಕಗಳಿಂದಲೂ ಶಿವಲಿಂಗವನ್ನಭಿಷೇಚಿಸುವವನು ಸಕಲ ಪಾಪಗಳಿಂದಲೂ ಬಿಡಲ್ಪಡುವನು. ॥೫೮॥

ಚಂದನದಿಂದ ಸುಂದರವಾಗಿ ಅಲಂಕೃತವಾದ ಶಿವನ ದಿವ್ಯಲಿಂಗವನ್ನು ದರ್ಶನಮಾಡಿದರೆ ಪಾಪಗಳೆಲ್ಲವೂ ನಾಶವಾಗಿ ಸಂಸಾರಸರ್ಪದ ಭಯವು ತೊಲಗುವುದು, ಪೂಜೆಯು ಸಂಪೂರ್ಣಫಲಪ್ರದವಾಗುವುದು, ಶಿವನ ಅನುಗ್ರಹವು ಚಿರಕಾಲ ಲಭಿಸುವುದು. ॥೫೯॥

ಅಮಾವಾಸ್ಯೆತಿಥಿಗಳಲ್ಲಿ ಶಿವನನ್ನು ಭಕ್ತಿಯಿಂದರ್ಚಿಸಿ ಕೊಳಲು ಮದ್ದಳೆ, ತಾಳ ಪಟಹನಗಾರಿಗಳನ್ನು ಬಾರಿಸುವುದು, ಸುಂದರಿಯರ ನರ್ತನ-ಇವುಗಳಿಂದ ಶಿವಾನುಗ್ರಹವು ಲಭಿಸಿ ಮುಕ್ತಿಯು ಲಭಿಸುವುದು. ॥೬೦॥

ಶಿವದೇವಾಲಯಕ್ಕೆ ಎತ್ತರವಾಗಿ ಕಟ್ಟಿರುವ ನಂದಿಪತಾಕೆಗಳಿಂದಲೂ, ಬೀಸುವ ಚಿನ್ನದ ಹಿಡಿಗಳ ಪತಾಕಗಳಿಂದಲೂ, ನಿಬಿಡವಾದ ನೆರಳಿನ ಶ್ವೇತಛತ್ರಿ

ಚಂಚಚ್ಚಂದ್ರಾಭಕಾಂಡಪ್ರವಿಲಸದಮಲಸ್ವರ್ಣರತ್ನಾಗ್ರಭಾಭಿಃ
ದೀಪ್ಯಚ್ಚಾಮರಕೋಟಿಭಿಃ ಸ್ಫುಟಪಟಘಟಿತೈಶ್ಛಾಕಚಕ್ರೈಃ ಪತಾಕೈಃ॥೬೧॥

ಸಂಪಶ್ಯಾರುಣಭೂರುಹೋತ್ತಮಶಿಖಾಸಂಲೇಢಿತಾರಾಗಣಂ
ತಾರಾನಾಥಕಲಾಧರೋರುಸುಮಹಾಲಿಂಗಾಘಸಂಸೇವಿತಂ ।
ಬಿಲ್ವಾನಾಂ ಕುಲಮೇತದತ್ರ ಸುಮಹಾಪಾಪೌಘಸಂಹಾರಕೃತ್
ದ್ವಾರಾಣಾಂ ನಿಖಿಲಪ್ರಮೋದಜನಕಂ ಶಂಭೋಃ ಪ್ರಿಯಂಕೇವಲಂ ॥೬೨॥

ಅನ್ನಂಪ್ರೋತ್ರಿಮಲಾಯತೇ ಘನರಸಂ ವಾಲೇಯಮೂತ್ರಾಯತೇ
ಸಂವೇಶೋ ನಿಗಲಾಯತೇ ಮಮ ಸದಾನಂದೋಪಿ ಕಂದಾಯತೇ ।
ಶಂಭೋ ತೇ ಸ್ಮರಣಾಂತರಾಯರಹಿತಃ ಪ್ರಾಣಾಃ ಕೃಪಾಣಾಯತೇ
ಕಃ ಕಲ್ಪದ್ರುಮುಪೇಕ್ಷ್ಯ ಚಿತ್ತಫಲದಂ ತೂಲಾದಿದಾನಕ್ಷಮಂ ॥೬೩॥

ಬರ್ಬರಂ ಪರಿಸೇವತೇ ಕ್ಷುದಧಿಕೋ ವಾತೂಲದಾನಕ್ಷಮಂ
ತದ್ವಚ್ಛಂಕರಕಿಂಕರೋ ವಿಧಿಹರಬ್ರಹ್ಮೇಂದ್ರಚಂದ್ರಾನಲಾನ್
ಸೇವೇದ್ಯೋ ವಿಧಿವಂಚಿತಃ ಕಲಿಬಲಪ್ರಾಚುರ್ಯತೋ ಮೂಢಧೀಃ ॥೬೪॥

---

ಯಿಂದಲೂ ಓಲೈಸಿಕೊಳ್ಳುವ ಶಿವನನ್ನು ದರ್ಶನಮಾಡಿ ಅರ್ಚಿಸಿದರೆ ಪಾಪಗಳೆಲ್ಲವೂ ನಾಶವಾಗುವುವು. ॥೬೧॥

ಬಿಲ್ವದಳ ಮಹಿಮೆಯು ಅವರ್ಣನೀಯವಾದುದು. ತಾರೆಗಳಿಗೊಡೆಯನಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಚಂದ್ರಮೌಳಿಯ ದಿವ್ಯಲಿಂಗದ ಮೇಲೆ ಬಿಲ್ವ ಪತ್ರಗಳನ್ನೇರಿಸಿದರೆ ಪಾಪಗಳೆಲ್ಲವೂ ನಾಶವಾಗುವುವು. ಮುಕ್ತಿಯು ದೊರೆಯುವುದು. ಬಿಲ್ವಪತ್ರೆಯು ಶಿವನಿಗೆ ತುಂಬಾ ಪ್ರಿಯವಾದುದು. ॥೬೨॥

ಓ ಶಂಕರ, ಒಂದು ಕ್ಷಣವೂ ನಿನ್ನ ಸ್ಮರಣೆಯನ್ನು ಬಿಡಲಾರೆನು, ಹಾಗೆ ಬಿಟ್ಟರೆ ನನಗೆ ಅನ್ನವೇ ಸೇರದೆ ಅದು ಹಂದಿಯ ಮಲದಂತೆ ಕಾಣುವುದು, ಒಳ್ಳೆಯ ಪಾನವು ಕತ್ತೆಯ ಮೂತ್ರದಹಾಗೆ ಕಾಣುವುದು, ನಿದ್ರೆಯು ಬಂಧನವಾಗುವುದು. ಆನಂದವೂ ದುಃಖವಾಗುವುದು, ಪ್ರಾಣವೆಲ್ಲ ಕೃಪಾಣ (ಕತ್ತಿ)ವಾಗುವುದು, ನಿನ್ನ

ಸುವರ್ಣಾಂಡೋದ್ಭೂತಸ್ತ್ರಿಗತಿಸಮುಚ್ಚಾಂಡಜವರ
ಪ್ರಸಾದಂ ತ್ವಾ ಕಶ್ಚಿದ್ಭಜತಿ ಭುವನೇ ಭಕ್ತಿಪರಮಃ ।
ಮಹಾಚಂಡೋದ್ದಂಡಪ್ರಘಟಿತಭುವಂ ತಾಂಡವಪರಂ
ವಿಭುಂ ನಿತ್ಯಂ ಸತ್ಯಂ ಭಜ ಭಗಣನಾಥಾಮಲಜಟಂ ॥೬೫॥

ಅಜಗವಕರ ವಿಷ್ಣುಬಾಣ ಶಂಭೋ
ದುರಿತಹರಾಂತಕನಾಶ ಪಾಹಿ ಮಾಮನಾಥಂ ।
ಭವದಭಯಪದಾಬ್ಜವರ್ಯಮೇತತ್
ಮಮ ಸಮಚಿತ್ತಸರಸ್ತಟಾನ್ನಯಾತುಚಾದ್ಯಂ ॥೬೬॥

ಇತ್ಥಂ ವಿಷ್ಣುಶ್ಚ ಕಾಶ್ಯಾಂ ಪ್ರಮಥಪತಿಮ್ನೃಗಾತ್ಪೂಜ್ಯ ವಿಶ್ವೇಶ್ವರಂ ತಂ
ಕ್ಷಿತಿಸುರವರವರ್ಯಂ ಚಾನುಶಾಸ್ಯೇತ್ಥಮಿಷ್ಟಂ ।
ಸ ಚ ಮುನಿಗಣಮಧ್ಯೇ ಪ್ರಾಪ್ಯ ಮುಕ್ತಿಂ ತಥಾಂತೇ
ಪ್ರಮಥಪತಿಪದಾಬ್ಜೇ ಲೀನಹೀನಾಂಗಸಂಗಃ ॥೬೭॥

---

ಹೊರತು ನಾನು ಇನ್ನಾರನ್ನೂ ಸೇವಿಸಲಾರೆನು, ಬೇಕಾದುದೆಲ್ಲವನ್ನೂ ಕೊಡುವ ಕಲ್ಪವೃಕ್ಷವನ್ನು ಬಿಟ್ಟು ಬೂರುಗದ ಮರವನ್ನು ಸೇವಿಸುವಂತೆ ಮೂಢನಾಹವನು ಶಿವನನ್ನು ಬಿಟ್ಟು ಹರಿ, ಬ್ರಹ್ಮ, ಇಂದ್ರ ಮೊದಲಾದ ಕ್ಷುದ್ರದೇವತೆಗಳನ್ನು ಕಲಿ ಮಹಿಮೆಯ ಫಲವಾಗಿ ಅರ್ಚಿಸುವನು. ವ್ಯರ್ಥವಾಗಿ ಕಾಲಕಳೆಯುವನು. ॥೬೩-೬೪॥

ಬ್ರಹ್ಮಾದಿಗಳಿಂದಲೂ ಅರ್ಚಿಸಲ್ಪಡುವ ಪರಶಿವನನ್ನು ಲೋಕದಲ್ಲಿ ಭಕ್ತಿಯಿಂದ ಅರ್ಚಿಸುವವರು ವಿರಳ. ಈ ವಿಚಿತ್ರ ಜಗತ್ತನ್ನು ಸೃಷ್ಟಿಸುವ ಮತ್ತು ಸಂಹರಿಸುವ ಪ್ರಳಯ ತಾಂಡವವನ್ನಾಡುವ, ಸತ್ಯನಾದ ನಿತ್ಯನಾದ ಚಂದ್ರಚೂಡನಾದ ಪರಮೇಶ್ವರನನ್ನು ಸದಾ ಭಜಿಸು. ॥೬೫॥

ತ್ರಿಪುರಸಂಹಾರ ಕಾಲದಲ್ಲಿ ಮೇರುಗಿರಿಯನ್ನೇ ಧನುಸ್ಸನ್ನಾಗಿ ಹಿಡಿದ ಹರಿಯನ್ನೇ ಬಾಣವಾಗಿ ಗ್ರಹಿಸಿದ, ಪಾಪನಾಶಕನಾದ, ಮೃತ್ಯುಂಜಯನಾದ ಓ ಮಹಾದೇವನೇ ಅನಾಥನಾದ ನನ್ನನ್ನು ಸಲಹು. ನಿನ್ನ ಅಭಯಪ್ರದವಾದ ಅಡಿದಾವರೆಯು ಯಾವಾಗಲೂ ನನ್ನ ಮನಸ್ಸರೋವರದಲ್ಲಿ ಬೆಳಗುತ್ತಿರಲಿ. ॥೬೬॥

ಹೀಗೆ ವಿಷ್ಣುವು ಆ ಸುದರ್ಶನನಿಗೆ ಶಿವಾರಾಧನೆಯನ್ನುಪದೇಶಿಸಿ ತಾನೂ

॥ ಸೂತ ಉವಾಚ ॥

ಇತ್ಥಂ ಮುನೀಂದ್ರಃ ಸೌ ಜೈಗೀಷವ್ಯೋವದದ್ವಿಭುಂ ।
ಪ್ರಣಿಪತ್ಯ ಪ್ರಹೃಷ್ಟಾತ್ಮಾ ಷಷ್ಠಾಂಶಂ ವೈ ಷಡಾಸ್ಯತಃ ॥೭೮॥

॥ ಜೈಗೀಷವ್ಯ ಉವಾಚ ॥

ಮಾರ ಮಾರಕಜಾನಂದ ಸದನೇ ಮಹಿಮಾ ಕಥಂ ।
ನಾಮ್ನಾಂ ಸಹಸ್ರಮೇತಚ್ಚ ವದ ಮೇ ಕರುಣಾನಿಧೇ ॥೭೯॥

ಕ್ಷೇತ್ರಾಣಾಂ ಚಾಪ್ಯಥಾನ್ಯೇಷಾಂ ಮಹಿಮಾಂ ವದ ಸದ್ಗುರೋ ।
ಶೂರ ತಾರಕಸಂಹರ್ತಸ್ತ್ವತ್ತೋ ನಾನ್ಯೋ ಗುರುರ್ಮಮ . ॥೮೦॥

ತಚ್ಛ್ರುತ್ವಾಥ ಮುನೇರ್ವಾಕ್ಯಂ ಸ್ಕಂದಃ ಪ್ರಾಹಾಥ ತಂ ಮುನೇ ॥೮೧॥

---

ಕಾಶಿಯಲ್ಲಿ ಶಿವನನ್ನು ವಿಪ್ರನೊಡನರ್ಚಿಸಿದನು. ಆ ಬ್ರಾಹ್ಮಣನೂ ಹರಿಯ ಉಪದೇಶದಂತೆ ಅರ್ಚಿಸಿ ಕೊನೆಯಲ್ಲಿ ಮುಕ್ತಿಯನ್ನು ಪಡೆದು ಪರಶಿವನಲ್ಲಿ ಐಕ್ಯನಾದನು.॥೭೭॥

ಹೀಗೆ ಜೈಗೀಷವ್ಯನು ಕುಮಾರಸ್ವಾಮಿಯಿಂದ ಈ ಶಿವರಹಸ್ಯದ ಆರನೆಯಂಶವನ್ನು ಕೇಳಿ ಸಂತಸಗೊಂಡು ಪುನಃ ನಮಸ್ಕರಿಸಿ ಹೀಗೆ ಕೇಳಿಕೊಂಡನು. ॥೭೮॥

ಮನ್ಮಥ ವೈರಿಗೆ ಆನಂದವನ್ನುಂಟುಮಾಡುವ ಓ ಷಣ್ಮುಖಸ್ವಾಮಿಯೇ, ಈಗ ಆ ಪರಶಿವನ ಮಹಿಮೆಯಿಂದ ತುಂಬಿದ ಸಹಸ್ರನಾಮುಗಳನ್ನು ನನಗೆ ಉಪದೇಶಿಸು. ॥೭೯॥

ತಾರಕಾಸುರವೈರಿಯೇ, ನೀನೇ ನನಗೆ ಗುರುವು, ಬೇರೆ ಯಾರೂ ಇಲ್ಲ. ಮಿಕ್ಕ ಶಿವಕ್ಷೇತ್ರಗಳ ಮಹಿಮೆಯನ್ನೂ ನನಗೆ ದಯೆಯಿಂದ ಹೇಳು. ॥೮೦॥

ಜೈಗೀಷವ್ಯನ ಈ ಪ್ರಾರ್ಥನೆಯನ್ನು ಕೇಳಿ ಸ್ಕಂದಸ್ವಾಮಿಯು ಮತ್ತೆ ಹೀಗೆಂದನು. ॥೮೧॥

॥ ಸ್ಕಂದ ಉವಾಚ ॥

ಆಗಾಮಿನ್ಯಂಶಕೇಸ್ಮಿನ್ ತವ ಹೃದಯಮಹಾನಂದಸಿಂಧೌ ವಿಧೂತ್ಥ
ಪ್ರಾಚುರ್ಯಪ್ರಕಟೇಃ ಕರೋಪಮಮಹಾಸಪ್ತಮಾಂಶೇ ವಿಶೇಷೇ ।

ನಾಮ್ನಾಂ ಚಾಪಿ ಸಹಸ್ರಕಂ ಭಗವತಃ ಶಂಭೋಃ ಪ್ರಿಯಂ ಕೇವಲಂ
ಅಸ್ಯಾನಂದವನಸ್ಯ ಚೈವ ಮಹಿಮಾಂ ತ್ವಂ ವೈ ಶೃಣುಷ್ವಾದರಾತ್ ॥೭೨॥

ಉಗ್ರಾಂಶಃ ಶಶಿಶೇಖರೇಣ ಕಥಿತೋ ವೇದಾಂತಸಾರಾತ್ಮಕಃ
ಷಷ್ಠಃ ಷಣ್ಮುಖಸತ್ತಮಾಯ ಸದದೌ ತದ್ವ್ರಹ್ಮಣೇ ಸೋಪ್ಯದಾತ್ ।
ಪುತ್ರಾಯಾತ್ಮಭವಾಯ ತೇ ಭವಹರಂ ಶ್ರುತ್ವಾ ಭವೇದ್ ಜ್ಞಾನವಿತ್
ಚೋಕ್ತ್ವಾ ಜನ್ಮಶತಾಯುತಾರ್ಜಿತ ಮಹಾಪಾಪೈರ್ವಿಮುಕ್ತೋ ಭವೇತ್ ॥೭೩॥

ಶ್ರುತ್ವಾಂಶಮೇತದ್ಭವತಾಪಪಾಪಹಂ
ಶಿವಸ್ಯ ತಜ್ಞಾನದಮುತ್ತಮಂ ಮಹತ್ ।
ಧ್ಯಾನೇನ ವಿಜ್ಞಾನದಮಾತ್ಮದರ್ಶನಂ
ದದಾತಿ ಶಂಭೋಃ ಪದಭಕ್ತಿಭಾವಿತಃ ॥೭೪॥

---

ಎಲೈ ಜೈಗೀಷವ್ಯಮುನಿಯೆ, ಮುಂದಿನ ಏಳನೆಯಂಶದಲ್ಲಿ ಶಿವಮಹಿಮೆಯನ್ನು ಪ್ರಕಟಿಸುವ ಶಿವಸಹಸ್ರನಾಮಗಳನ್ನೂ ಈ ಆನಂದವನಕ್ಷೇತ್ರದ ಮಹಿಮೆಯನ್ನೂ ವಿಸ್ತಾರವಾಗಿ ಹೇಳುವೆನು, ಆಗ ಕೇಳು. ॥೭೨॥

ವೇದಾಂತ ಸಾರವುಳ್ಳ, ಈ ಆರನೆಯ ಶಂಕರಾಂಶವನ್ನು ಶಿವನೇ ಷಣ್ಮುಖನಿಗೆ ಉಪದೇಶಿಸಿದನು. ಅದನ್ನು ಷಣ್ಮುಖನು ಬ್ರಹ್ಮಪುತ್ರನಾದ ಜೈಗೀಷವ್ಯನಿಗೆ ಹೇಳಿದನು. ಇಂತಹ ಈ ಅಂಶವನ್ನು ಕೇಳಿದರೆ ಇಹದಲ್ಲಿ (ನೂರುವರ್ಷ ಪೂರ್ತಿಯಾಗಿ ಬದುಕಿದ್ದು) ಜನ್ಮಜನ್ಮಾಂತರಗಳ ಪಾಪಗಳೆಲ್ಲವನ್ನೂ ಕಳೆದುಕೊಂಡು ಮುಕ್ತನಾಗುವನು. ॥೭೩॥

ಸಂಸಾರದ ತಾಪತ್ರಯಗಳನ್ನೂ ಆಗಂತುಕವಾದ ಪಾಪಗಳನ್ನೂ ಹೋಗಲಾಡಿಸಿ ಈಶ್ವರೀಯಜ್ಞಾನವನ್ನುಂಟುಮಾಡುವ ಈ ಆರನೆಯ ಶಂಕರಾಂಶವನ್ನು ಕೇಳಿದವರಿಗೆ ಶಿವನ ಅನುಗ್ರಹದಿಂದ ಆತ್ಮದರ್ಶನ ವಾಗುವುದು. ॥೭೪॥

॥ ಸೂತ ಉವಾಚ ॥

ಅಧ್ಯಾಯಪಾದಾಧ್ಯಯನೇಽಪಿ ವಿಧ್ಯಾ
ಬುದ್ಧ್ಯಾ ಹೃದಿಧ್ಯಾಯತಿ ಬದ್ಧಮುಕ್ತ್ಯೈ ।
ಸ್ವಾಧ್ಯಾಯತಾಂತಾಯ ಶಮಾನ್ವಿತಾಯ
ದದ್ಯಾದ್ಯದದ್ಯಾನ್ನ ವಿಭೇದ್ಯಮೇತತ್ ॥೭೫॥

ಇತ್ಥಂ ಸೂತವಚೋದ್ಯತಮಹಾನಂದೈಕವೋದಪ್ರಭಾ
ಭಾಸ್ವದ್ಭಾಸ್ಕರಸಪ್ರಭಾ ಮುನಿವರಾಃ ಸಂತುಷ್ಟುವುಸ್ತಂ ತದಾ ।
ವೇದೋದ್ಯದ್ವಚನಾಶಿಷಾ ಪ್ರಹೃಷಿತಾಸ್ಸೂತಂ ಜಯೇತ್ಯುಚ್ಚರನ್
ಪ್ರಾಹೋ ಜಗ್ಮುರತೀವ ಹರ್ಷಿತಹೃದಾ ವಿಶ್ವೇಶ್ವರಂ ವೀಕ್ಷಿತುಂ ॥೭೬॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ
ಪಂಚಾಶತ್ತಮೋಽಧ್ಯಾಯಃ

## ಸಮಾಪ್ತಃ ಷಷ್ಠಾಂಶಃ

---

ಈ ಅಂಶದ ಒಂದಧ್ಯಾಯದ ಒಂದು ಪಾದವನ್ನಾದರೂ ವಿಧಿವತ್ತಾಗಿ ಓದಿದರೆ ಅಂತಹವನಿಗೆ ಮುಕ್ತಿಯು ಮೈದೋರುವುದು, ವೇದಾಧ್ಯಯನನಿರತನಾಗಿ, ಮತ್ತು ಜಿತೇಂದ್ರಿಯನಾಗಿ ಶಾಂತನಾದವನಿಗೇ ಈ ಶಿವರಹಸ್ಯವನ್ನು ಉಪದೇಶಿಸಬೇಕು, ಕಾಮಕ್ರೋಧಾದಿಗಳಿದ್ದವರಿಗೆ ಖಂಡಿತವಾಗಿ ಇದನ್ನು ತಿಳಿಸಬಾರದು. ಇದು ಪರಶಿವನ ಆಜ್ಞೆ. ॥೭೫॥

ಹೀಗೆ ಸೂತಮುನಿಯ ಮಾತನ್ನು ಕೇಳಿ ಅಲ್ಲಿ ನೆರೆದ ಸೂರ್ಯವರ್ಚಸ್ವಿಗಳಾದ ಮುನಿಗಳೆಲ್ಲರೂ ಸಂತಸಗೊಂಡು ಆ ಸೂತನನ್ನು ಮನಸಾರ ಹೊಗಳಿದರು. ಸೂತಮುನಿಯು ವೇದೋಕ್ತಾಶೀರ್ವಾದಗಳನ್ನು ಮಾಡಿ ಅವರನ್ನು ಬೀಳ್ಕೊಟ್ಟನು. ಆಮೇಲೆ ಮುನಿಗಳೆಲ್ಲರೂ ವಿಶ್ವನಾಥನ ದರ್ಶನಕ್ಕಾಗಿ ಕಾಶಿಗೆ ತೆರಳಿದರು. ॥೭೬॥

ಎಂಬಲ್ಲಿಗೆ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಐವತ್ತನೆಯ ಅಧ್ಯಾಯವು ಮುಗಿದುದು.

## ಈ ಅಂಶದ ಸಾರಾಂಶ

ಈ ಅಂಶದಲ್ಲಿ ವಿಸ್ತಾರವಾದ ಕಥಾಭಾಗವು ಯಾವುದೂ ಕಾಣುವುದಿಲ್ಲ. ಋಭು ಮತ್ತು ನಿದಾಘಮಹರ್ಷಿಗಳ ಸಂವಾದವೇ ಇಲ್ಲಿನ ಮುಖ್ಯ ಕಥಾವಸ್ತು. ಋಭುಮಹಾಮುನಿಗಳು ನಿದಾಘಮಹರ್ಷಿಗಳಿಗೆ ಶಿವಮಹಿಮೆಯನ್ನು ವಿವರಿಸಿ ಹೇಳಲು ಪ್ರಾರಂಭಿಸಿ ಕೊನೆಗೆ ವೇದಾಂತಮಾರ್ಗಕ್ಕೆ ತಿರುಗುವರು. ಉಪನಿಷತ್ಸಾರವಾದ ಅದ್ವೈತಮಾರ್ಗದಲ್ಲಿ ಋಭುಮುನಿಗಳು ಮುಂದುವರಿದು, ಈ ಪ್ರಪಂಚವೆಲ್ಲವೂ ಮಿಥ್ಯಾ, ಆತ್ಮವೊಂದೇ ಸತ್ಯ ಎಂಬಂಶವನ್ನು ಸಿದ್ಧಾಂತಪಡಿಸುವರು. ಶಿವಾರಾಧನೆಯ ಮುಂಡೆ ಇತರ ದೇವತಾರಾಧನೆಗಳು ವ್ಯರ್ಥವೆಂಬ ಅಂಶವನ್ನು ಕೊನೆಯ ಅಧ್ಯಾಯದಲ್ಲಿ ಬಂದಿರುವ ಸುದರ್ಶನೇತಿಹಾಸವು ತಿಳಿಯಪಡಿಸುವುದು. ಒಟ್ಟಿನಲ್ಲಿ "ಶಿವ ಏಕೋ ಸದಾ ಧ್ಯೇಯಃ" ಎಂಬ ತತ್ತ್ವವನ್ನು ಈ ಗ್ರಂಥವು ದೃಢಪಡಿಸುವುದು.

ಆರನೆಯ ಅಂಶವು ಮುಗಿದುದು

॥ ಶ್ರೀರಸ್ತು ॥